

# ಜಾತಿ ಅಸ್ಪೃಶ್ಯತೆಯ ಸಂಘರ್ಷ

ಡಾ|| ಎಂ. ವೆಂಕಟಸ್ವಾಮಿ



# ಜಾತಿ ಅಸ್ಪೃಶ್ಯತೆಯ ಸಂಘರ್ಷ

**ಡಾ|| ಎಂ. ವೆಂಕಟಸ್ವಾಮಿ**



ನವಕರ್ನಾಟಕ ಪ್ರಕಾಶನ

**JAATI ASPRUSHYATEYA SANGHARSHA** (Kannada)
*THE CONFLICT OF CASTE UNTOUCHABILITY*
*by Dr. M. Venkataswamy*

Second Print : 2019 Pages : 220 Price : ₹ 225
Paper : 70 gsm NS Maplitho 18.6 Kgs (1/8 Demy Size)

ಮೊದಲನೇ ಮುದ್ರಣ : 2018
ಎರಡನೇ ಮುದ್ರಣ : 2019

ಪ್ರತಿಗಳ ಸಂಖ್ಯೆ : 500



**ಬೆಲೆ : ₹ 225**

ಮುಖಪುಟ : ಸೃಜನ್

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001
ದೂರವಾಣಿ : 080–22161900 / 22161901 / 22161902

*ಶಾಖೆಗಳು/ ಮಳಿಗೆಗಳು*
ನವಕರ್ನಾಟಕ, ಕ್ರೆಸೆಂಟ್ ರಸ್ತೆ, ಬೆಂಗಳೂರು – 1, ✆ 080–22161913/14, Email : nkpsales@gmail.com
ನವಕರ್ನಾಟಕ, ಕೆಂಪೇಗೌಡ ರಸ್ತೆ, ಬೆಂಗಳೂರು – 9, ✆ 080–22203106, Email : nkpkgr@gmail.com
ನವಕರ್ನಾಟಕ, ಕೆ.ಎಸ್. ರಾವ್ ರಸ್ತೆ, ಮಂಗಳೂರು – 1, ✆ 0824–2441016, Email : nkpmng@gmail.com
ನವಕರ್ನಾಟಕ, ಬಲ್ಮಠ, ಮಂಗಳೂರು – 1, ✆ 0824–2425161, Email : nkpbalmatta@gmail.com
ನವಕರ್ನಾಟಕ, ರಾಮಸ್ವಾಮಿ ವೃತ್ತ, ಮೈಸೂರು–24, ✆ 0821–2424094, Email : nkpmysuru@gmail.com
ನವಕರ್ನಾಟಕ, ಸ್ಟೇಷನ್ ರಸ್ತೆ, ಕಲಬುರಗಿ – 2, ✆ 08472–224302, Email : nkpglb@gmail.com

ಮುದ್ರಕರು : ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು – 560 079

**0207195420** **ISBN 978-93-86809-52-0**

Published by Navakarnataka Publications Private Limited, Embassy Centre Crescent Road, Bengaluru - 560 001 (India). Email : navakarnataka@gmail.com

# ಅರ್ಪಣೆ

ಕರ್ನಾಟಕದಲ್ಲಿ
ದಲಿತ ಸಾಹಿತ್ಯ ಮತ್ತು ದಲಿತ ಸಂಘಟನೆಗಳು
ಹುಟ್ಟಿಕೊಳ್ಳಲು ಕಾರಣರಾದ
ಬಿ. ಬಸವಲಿಂಗಪ್ಪನವರಿಗೆ

# ಮುನ್ನುಡಿ

ಸುಮಾರು ಹದಿನೈದು ವರ್ಷಗಳ ಹಿಂದೆ ಪ್ರಸ್ತುತ ಗ್ರಂಥದ ಲೇಖಕ ಡಾ॥ ಎಂ. ವೆಂಕಟಸ್ವಾಮಿ ಅವರು 'ಅಸ್ಪೃಶ್ಯ' ಎಂಬ ಗ್ರಂಥವನ್ನು ಪ್ರಕಟಿಸಿದ್ದರು. ಆ ಗ್ರಂಥದಲ್ಲಿ ಅಡಕವಾಗಿದ್ದ ವಿಚಾರಗಳ ಜೊತೆ ಇನ್ನೂ ಹಲವು ವಿಷಯಗಳನ್ನು ಚರ್ಚಿಸಲು ಈಗ ಬೇರೆಯೇ ಆದ ಹೊಸ ಪುಸ್ತಕವನ್ನು ಓದುಗರ ಮುಂದಿಡುತ್ತಿದ್ದಾರೆ. ಸಹಜವಾಗಿಯೇ ಇದು ಮೊದಲದಕ್ಕಿಂತಲೂ ಹೆಚ್ಚು ಸಮಗ್ರವಾಗಿದೆ. ನಮ್ಮ ದೇಶದ ಪ್ರಾಚೀನ ಇತಿಹಾಸದ ಬಗ್ಗೆ ಏಕಾಭಿಪ್ರಾಯವಿಲ್ಲ. ಅದಕ್ಕೆ ಕಾರಣ ನಿಷ್ಕೃಷ್ಟವಾದ ಮಾಹಿತಿಯ ಅಭಾವ. ಇರುವ ಮಾಹಿತಿಯನ್ನು ಅರ್ಥೈಸಿಕೊಳ್ಳುವುದರಲ್ಲಿ ವಿದ್ವಾಂಸರು ವಿಭಿನ್ನ ನಿಲುವುಗಳನ್ನು ತಾಳಿದ್ದಾರೆ. ಎಷ್ಟೋ ವೇಳೆ ಸಮಕಾಲೀನ ರಾಜಕೀಯ ಅಗತ್ಯಗಳಿಗೆ ತಕ್ಕಂತೆ ಪ್ರಾಚೀನ ಐತಿಹಾಸಿಕ ಸಂಗತಿಗಳನ್ನು ತಿರುಚಿಕೊಳ್ಳುವ ಕೆಟ್ಟ ಸಂಪ್ರದಾಯವು ಹೆಚ್ಚುತ್ತಿರುವುದೂ ಉಂಟು. ಆರ್ಯರೆನ್ನಲಾದ ಜನರು ಸ್ಥಳೀಯರೋ ಅಥವಾ ಹೊರಗಿನಿಂದ ಬಂದು ಇಲ್ಲಿ ನೆಲೆಸಿದವರೋ ಎಂಬುದು ಅಂತಹ ಒಂದು ವಿಚಾರ. ಸಿಂಧೂ ನದಿ ನಾಗರಿಕತೆಯ ಬಗ್ಗೆ ಅಗಾಧ ದಾಖಲೆಗಳು ಲಭ್ಯವಿವೆ, ಉತ್ಖನನದಿಂದಾಗಿ ದೊರೆತಿರುವ ವಿವಿಧ ಆಕರಗಳಿವೆ. ಹರಪ್ಪ–ಮೊಹೆಂಜೊದಾರೊ ನಾಗರಿಕತೆಯ ಈ ಆಕರಗಳನ್ನು ಪೂರ್ತಿಯಾಗಿ ಅಧ್ಯಯನ ಮಾಡಲು ತೊಡಕುಗಳು ಸಹ ಹಲವಿವೆ. ಮೊದಲಿಗೆ, ಆ ಕಾಲದ ಲಿಪಿಯನ್ನು ಈವರೆಗೂ ತಿಳಿದುಕೊಳ್ಳಲು ಸಾಧ್ಯವಾಗಿಲ್ಲ. ನಮ್ಮ ರಾಜ್ಯದ ಉತ್ಖನನಶಾಸ್ತ್ರಜ್ಞ ಡಾ. ಎಸ್. ಆರ್. ರಾವ್ ಕೆಲವು ದಶಕಗಳ ಹಿಂದೆ ಆ ಲಿಪಿಯ ಒಗಟನ್ನು ಭೇದಿಸಿದ್ದುದಾಗಿ ಹೇಳಿ ಕೆಲವು ತೀರ್ಮಾನಗಳನ್ನು ನೀಡಿದ್ದರು. ಆದರೆ ಬೇರೆ ವಿದ್ವಾಂಸರು ಅದಕ್ಕೆ ಮಾನ್ಯತೆ ನೀಡಲಿಲ್ಲ. ಈಚಿನ ವರ್ಷಗಳಲ್ಲಿ ಅದು ಯಾವುದೇ ಭಾಷೆಯ ಲಿಪಿಯಲ್ಲ, ಬದಲಾಗಿ ಅಲ್ಲಿನ ಸಂಕೇತಗಳು ಸಂಖ್ಯೆಗಳ ಸೂಚಕಗಳೆಂಬ ಅಭಿಪ್ರಾಯವೊಂದು ವ್ಯಕ್ತವಾಗಿದೆ. ಋಗ್ವೇದದ ಕರ್ತೃಗಳು ಮತ್ತು ಹರಪ್ಪ ಸಂಸ್ಕೃತಿಯ ನಿರ್ಮಾಣ ಮಾಡಿದವರು ಒಂದೇ ಬಣದವರು ಎಂದು ಎಸ್. ಆರ್. ರಾವ್ ಸೂಚಿಸಿದ್ದುದನ್ನು ಇಂದಿನ ಕೆಲವು 'ಹಿಂದುತ್ವ'ದ ವಿದ್ವಾಂಸರು ಪ್ರಬಲವಾಗಿ ಪ್ರತಿಪಾದಿಸುತ್ತಿದ್ದಾರೆ. ಇದು ಭಾವನಾತ್ಮಕ ಕಾರಣಗಳಿಂದಾಗಿ ಮುಂದಿಡಲಾಗುತ್ತಿರುವ ಸಿದ್ಧಾಂತಗಳೇ ವಿನಾ ಸಂಶೋಧನೆಯಲ್ಲಿ ನಂಬಲರ್ಹವಾದ ಹೊಸ ಸುಳುಹುಗಳಿಂದ ಮೂಡಿಬಂದಿರುವ ತೀರ್ಮಾನಗಳಲ್ಲ. ಋಗ್ವೇದದ ಮತ್ತು ಇನ್ನಿತರ ವೈದಿಕ ಸಾಹಿತ್ಯದ ಕರ್ತೃಗಳು ಭಾರತಮೂಲದವರು, ಹೊರಗೆಲ್ಲಿಂದಲೋ ಬಂದವರಲ್ಲ, ಎಂದು ಸಾಧಿಸಹೊರಟಾಗ ಕಾಲಗಣನೆಯಲ್ಲಿ ವಿಪರ್ಯಾಸ ಉಂಟಾಗುತ್ತದೆಯೆಂಬುದು ಈ ವಿದ್ವಾಂಸರಿಗೆ ಗೌಣವಾಗಿಬಿಡುತ್ತದೆ. ಏಕೆಂದರೆ ಹರಪ್ಪ ಸಂಸ್ಕೃತಿಯ ಕಾಲ ಸುಮಾರು ಕ್ರಿ. ಪೂ. 2500ಕ್ಕಿಂತಲೂ ಕಡಿಮೆಯಿಲ್ಲ ಮತ್ತು

ಋಗ್ವೇದವು ಕ್ರಿ. ಪೂ. 1600ಕ್ಕಿಂತಲೂ ಬಹಳ ಮುಂಚಿನದಲ್ಲ. ಆರ್ಯರು ಹೊರಗಿನಿಂದ ಬಂದವರೆಂಬುದನ್ನು ಒಪ್ಪಿದರೆ ಸ್ಥಳೀಯ ಹರಪ್ಪ ಸಂಸ್ಕೃತಿಯ ನಾಶದಲ್ಲಿ ಅವರ ಪಾಲ್ಗೊಳ್ಳುವಿಕೆ ಇದ್ದಿತೆಂದು ಪ್ರತಿಪಾದಿಸಬೇಕಾದೀತು ಎಂಬ ಅಂಜಿಕೆ ಆ ಕೆಲವು ವಿದ್ವಾಂಸರಿಗೆ. ನಮ್ಮ ದೇಶದ ಭವ್ಯ ಸಂಸ್ಕೃತಿಯನ್ನು ಕ್ರಿ. ಶ. ಹತ್ತನೆಯ ಶತಮಾನದ ನಂತರ ಹೊರಗಿನಿಂದ ಬಂದ ಆಕ್ರಮಣಕಾರರು ಹಾಳುಗೆಡವಿದರು ಎಂದು ಸಾಮಾನ್ಯವಾಗಿ ಈ ವಿದ್ವಾಂಸರು ಹೇಳುತ್ತಾರೆ. ಅಂಥದೇ ಆಕ್ರಮಣವು ಹರಪ್ಪ–ಮೊಹೆಂಜೊದಾರೊ ನಾಗರಿಕತೆಯ ಧ್ವಂಸಕ್ಕೆ ಕಾರಣವಾಯಿತೆಂದೂ, ಅದನ್ನು ಆಗುಮಾಡಿದವರು ತಥಾಕಥಿತ ಆರ್ಯರೆಂದೂ ಸ್ಥಿರವಾದರೆ ಒಂದು ಸಾವಿರದ ಇನ್ನೂರು ವರ್ಷಗಳ ಹಿಂದಿನ ಹಲ್ಲೆಯ ನಮ್ಮ ದೇಶದ ಮೇಲೆ ನಡೆದ ಮೊದಲ ವಿಧ್ವಂಸಕ ಹಲ್ಲೆಯೆಂಬ ಮಿಥ್ಯೆಯು ಬಯಲಾಗಿಬಿಡುತ್ತದೆ. ಸಮಕಾಲೀನ ರಾಜಕೀಯಕ್ಕೆ ಅದು ಪುಷ್ಟಿ ನೀಡುವ ಸ್ವಾಗತಾರ್ಹ ಸಾಧನವಾಗುವುದಿಲ್ಲ. ಆ ಕಾರಣದಿಂದಾಗಿ ನಮ್ಮ ಅತ್ಯಂತ ಪ್ರಾಚೀನ ಸಾಮಾಜಿಕ ಸಂರಚನೆ, ಅಂತಸ್ಸಂಬಂಧ, ಆಂತರಿಕ ಘರ್ಷಣೆಗಳು, ಮುಂತಾದವನ್ನು ವಸ್ತುನಿಷ್ಠವಾಗಿ ಅನ್ವೇಷಿಸುವುದು ಅವರಿಗೆ ಪಥ್ಯವಲ್ಲ. ಯಾವ ಅನ್ಯಾಯ ಮತ್ತು ಪಾತಕಗಳೂ ಇಲ್ಲದಿದ್ದ ಶ್ರೇಷ್ಠ ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ನಮ್ಮದು ಎಂಬ ಮಿಥ್ಯೆಯನ್ನು ಗಟ್ಟಿಯಾಗಿ ನೆಲೆಗೊಳಿಸಬೇಕಾದರೆ ಪ್ರಾಚೀನ ವಾಸ್ತವಗಳನ್ನು ಮನಸೋ ಇಚ್ಛೆ ಬದಲಾಯಿಸಬೇಕು.

ಇಂದಿನ ಇತಿಹಾಸ ಪ್ರವೀಣರು ಇಂತಹ ಬೌದ್ಧಿಕ ಕಸರತ್ತು ಮಾಡುವ ಮುನ್ನ, ಹಲವು ದಶಕಗಳ ಹಿಂದೆ, ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ತಮ್ಮ ಸಂಶೋಧನೆಗಳ ಆಧಾರದಿಂದ ಪ್ರಾಚೀನ ಭಾರತದ ಸಾಮಾಜಿಕ ರಚನೆಯನ್ನು ಕುರಿತು ಕೆಲವು ಮೌಲಿಕ ಗ್ರಂಥಗಳನ್ನು ಪ್ರಕಟಿಸಿದ್ದರು. ಸುಮಾರು ನಾಲ್ಕು ಸಾವಿರ ವರ್ಷಗಳ ಇತಿಹಾಸದಲ್ಲಿ ನಮ್ಮ ಸಮಾಜವು ಪ್ರಗತಿ ಮತ್ತು ವಿಗತಿಗಳನ್ನು ನಾನಾ ಪ್ರಕಾರವಾಗಿ ಕಂಡಿರುವುದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಎಲ್ಲ ಪ್ರಾಚೀನ ಸಮಾಜಗಳಂತೆ ನಮ್ಮ ಪ್ರಾಚೀನ ಸಮಾಜವೂ ಮೂಲತಃ ಬುಡಕಟ್ಟು ಸಮಾಜವಾಗಿದ್ದುದು ಐತಿಹಾಸಿಕ ಸತ್ಯ. ಬುಡಕಟ್ಟು ಸಮಾಜಗಳು ವಿಘಟನೆಗೊಂಡಾಗೆಲ್ಲಾ ಸಾರ್ವತ್ರಿಕವಾಗಿ ವರ್ಣಗಳು ಮತ್ತು ಅಸ್ಪೃಶ್ಯತೆ ತೋರಿಬಂದಿಲ್ಲ. ಬೇರೆ ದೇಶಗಳ ಇತಿಹಾಸದಿಂದ ಇದು ಸ್ಪಷ್ಟವಾಗಿದೆ. ಸಮಾನತೆಯ ಜಾಗದಲ್ಲಿ ಅಸಮಾನತೆ ಸ್ಥಾಪಿತವಾಗುವುದು ಎಲ್ಲ ಬುಡಕಟ್ಟುಗಳ ವಿಘಟನೆಯ ಸಂದರ್ಭದಲ್ಲೂ ಉಂಟು. ಆರ್ಥಿಕ ಅಸಮಾನತೆಯಿಂದ ರೂಢಿಗೆ ಬರುವ ಸಾಮಾಜಿಕ ಅಸಮಾನತೆಯ ಘೋರ ಪರಿಣಾಮ ಎಲ್ಲ ದೇಶಗಳಲ್ಲೂ ಕಂಡುಬಂದಿದೆ. ಉದಾಹರಣೆಗೆ, ಪ್ರಾಚೀನ ಗ್ರೀಸ್ ಮತ್ತು ರೋಮ್ ಇತಿಹಾಸದಲ್ಲಿ ಗುಲಾಮಿ ಪದ್ಧತಿಯು ಅಸ್ತಿತ್ವಕ್ಕೆ ಬಂದಿತ್ತು. ಗುಲಾಮರನ್ನು ಆ ಸಮಾಜಗಳು ಅಸ್ಪೃಶ್ಯರೆಂದು ಪರಿಗಣಿಸಲಿಲ್ಲ. ನಮ್ಮ ದೇಶದ ಕ್ರೌರ್ಯವು ಸಮಾಜದ ಒಂದು ವಿಭಾಗವನ್ನು ಕೇವಲ ಭೀಕರ ಶೋಷಣೆಗೆ ಗುರಿಮಾಡಲಿಲ್ಲ, ಆ ವಿಭಾಗವನ್ನು ಅಮಾನುಷವಾಗಿ ಹಿಂಸಿಸಿತು ಮತ್ತು ದೈಹಿಕವಾಗಿ ಅಸ್ಪೃಶ್ಯರನ್ನಾಗಿಸಿತು. ಇಂತಹ ಸಾಮಾಜಿಕ ಪಿಡುಗೊಂದು ಯಾವ ದೇಶದಲ್ಲೂ ಮೂರು ಸಾವಿರ ವರ್ಷಗಳ ಕಾಲ ನಿರಂತರವಾಗಿ ಬಾಧೆಯುಂಟುಮಾಡಿರುವ ದೃಷ್ಟಾಂತವಿಲ್ಲ. ಅದು ನಮ್ಮ ದೇಶದ

ಅಸಹ್ಯ ಅನನ್ಯತೆಯಾಗಿ ಉಳಿದಿದೆ. ಮಾನಸಿಕವಾಗಿ ಇಡೀ ಸಮಾಜವು ಅಂತಹ ದೌರ್ಜನ್ಯವನ್ನು ಸಾರಾಸಗಟಾಗಿ ಸ್ವೀಕರಿಸಿದ್ದಿರಲಾರದು; ಅಲ್ಲೊಂದು ಇಲ್ಲೊಂದು ಪ್ರತಿಭಟನೆಯ ಧ್ವನಿ, ತಿರಸ್ಕಾರದ ದಿಟ್ಟತನ, ಇದ್ದಿರಬೇಕು. ಆದರೆ ಅದಕ್ಕೆ ಪುರಾವೆಗಳು ಬಹುಕಮ್ಮಿ. ಹೀಗಾಗಿ, ಬಹಳ ಕಟ್ಟುನಿಟ್ಟಾಗಿ ನಮ್ಮ ಸಮಾಜದ ಎಲ್ಲ ವಿದ್ಯಮಾನಗಳಿಗೂ ವಿವರಣೆ ನೀಡುವುದು ಸಾಧ್ಯವಾಗಿಲ್ಲ. ವರ್ಣ ವಿಭಜನೆಗಾದರೂ ಕೆಲವು ನಿರ್ದಿಷ್ಟ ಕಾರಣಗಳನ್ನು ಹಾಗೂ ಅದು ಘಟಿಸಿದ ಸನ್ನಿವೇಶಗಳನ್ನು ಗುರುತಿಸಲು ಶಕ್ಯ; ಆದರೆ ಅಸ್ಪೃಶ್ಯತೆಯಂತಹ ಅಮಾನವೀಯ ಸಂಸ್ಕೃತಿ ಉಗಮವಾಗಿದ್ದು ಹೇಗೆ, ಅಚಲವಾಗಿ ಅದು ಇಡೀ ದೇಶವನ್ನು ವ್ಯಾಪಿಸಿದ್ದು ಹೇಗೆ ಮತ್ತು ಕಾಲಕ್ರಮೇಣ ಶಿಥಿಲಗೊಳ್ಳುವ ಬದಲು ಇನ್ನೂ ಹೆಚ್ಚಿನ ಕಾಠಿಣ್ಯವನ್ನು ತುಂಬಿಕೊಳ್ಳುತ್ತಾ ಹೋದದ್ದು ಹೇಗೆ, ಎಂಬುದು ಬಿಡಿಸಲಾಗದ ಬೌದ್ಧಿಕ ಕಗ್ಗಂಟಾಗಿದೆ. ಡಾ॥ ಅಂಬೇಡ್ಕರ್, ಡಾ॥ ಆರ್. ಎಸ್. ಶರ್ಮ, ಮುಂತಾದವರು ಇತಿಹಾಸದ ಮೂಲ ಆಕರಗಳನ್ನಾಗಿ ಮಾನವಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮತ್ತು ಧರ್ಮಶಾಸ್ತ್ರಗಳನ್ನು ಬಳಸಿ ಇದನ್ನು ಕುರಿತಂತೆ ಸ್ವಲ್ಪ ಬೆಳಕು ಚೆಲ್ಲಲು ಸಮರ್ಥರಾಗಿದ್ದಾರೆ.

ನಮ್ಮ ಸಮಾಜದ ಕರಾಳ ಸ್ವರೂಪವನ್ನು ಡಾ॥ ಅಂಬೇಡ್ಕರ್ ಒಂದೇ ವಾಕ್ಯದಲ್ಲಿ ನಿರೂಪಿಸಿದ್ದರು: ಮೇಲಿನ ವರ್ಣಕ್ಕೆ ಹೋದಂತೆಲ್ಲಾ ಶ್ರೇಷ್ಠತೆ, ಸವಲತ್ತು; ಕೆಳಕ್ಕೆ ಹೋದಂತೆಲ್ಲಾ ಅವಗಣನೆ ಮತ್ತು ಕ್ರೌರ್ಯ. ಭಗವದ್ಗೀತೆಯೇನೋ ಪಾಮರರಿಗಿಂತಲೂ ಪಂಡಿತರು ಹೆಚ್ಚು ಸಮಾನತೆಯ ಪ್ರಜ್ಞೆ ಹೊಂದಿರುತ್ತಾರೆಂದು ನಿರೂಪಿಸಿದೆ : "ವಿದ್ಯಾವಿನಯ ಸಂಪನ್ನ, ಬ್ರಾಹ್ಮಣ, ಗೋವು, ಆನೆ, ನಾಯಿ, ನಾಯಿ ತಿನ್ನುವವ, ಹೀಗೆ ಎಲ್ಲವನ್ನೂ ಪ್ರಜ್ಞಾವಂತ ಪಂಡಿತನು ಒಂದೇ ರೀತಿಯಲ್ಲಿ ಕಾಣುತ್ತಾನೆ," ಎಂದು. ವ್ಯಾವಹಾರಿಕವಾಗಿ ಇದೊಂದು ಸುಳ್ಳಿನ ಕಂತೆ ಎಂಬುದು ಎಲ್ಲರಿಗೂ ತಿಳಿದಿದೆ. ಧರ್ಮಸೂತ್ರಗಳನ್ನು ರಚಿಸಿದ ಯಾವ ಪಂಡಿತನೂ ವರ್ಣ ವಿಭಜನೆಯನ್ನು ಪ್ರಶ್ನಿಸಲಿಲ್ಲ. "ಅಹಂ ಬ್ರಹ್ಮಾಸ್ಮಿ" ಎಂದು ರಮ್ಯತೆಯ ತತ್ತ್ವಶಾಸ್ತ್ರ ಬೋಧಿಸಿದ ಶಂಕರ, ರಾಮಾನುಜ ಮತ್ತು ಮಧ್ವ ವರ್ಣ ವಿಭಜನೆಯನ್ನು ಸಮರ್ಥಿಸಿ ಮನುವಿನ ಮಾತಿಗೆ ತಲೆಬಾಗಿದರು. ಇಂತಹ ವಿರೋಧಾಭಾಸಗಳನ್ನು ಡಾ॥ ವೆಂಕಟಸ್ವಾಮಿಯವರು ಚಾರಿತ್ರಿಕ ಹಿನ್ನೆಲೆಯಲ್ಲಿ ಪುರಾವೆಸಹಿತ ಪ್ರತಿಪಾದಿಸಿರುವುದು ಗ್ರಂಥದ ವೈಶಿಷ್ಟ್ಯವಾಗಿದೆ. ಕಳೆದ ವರ್ಷವಷ್ಟೇ ಶ್ರೀ ಡಿ. ಎಚ್. ಸೂರ್ಯಪ್ರಕಾಶ್ ಅವರು "ವರ್ಣ" ಎಂಬ ಸಂಶೋಧನಾ ಕಾದಂಬರಿಯನ್ನು ಪ್ರಕಟಿಸಿದ್ದಾರೆ. ಡಾ॥ ವೆಂಕಟಸ್ವಾಮಿ ಮತ್ತು ಶ್ರೀ ಸೂರ್ಯಪ್ರಕಾಶ ಇಬ್ಬರೂ ಕ್ಲಿಷ್ಟ ಮತ್ತು ಸಂಕೀರ್ಣ ಸಾಮಾಜಿಕ ವಿಕಾಸದ ನೀಲಿನಕ್ಷೆಗಳನ್ನು ತಮ್ಮೆರಡು ಗ್ರಂಥಗಳಲ್ಲಿ ಒದಗಿಸಿದ್ದಾರೆ. ಇಬ್ಬರೂ ಶಾಸ್ತ್ರಗ್ರಂಥಗಳಿಂದ ವಿಪುಲವಾಗಿ ವಾಕ್ಯಗಳನ್ನು ಉದ್ಧರಿಸಿ ಸಾಮಾಜಿಕ ವೈಪರೀತ್ಯಗಳನ್ನು ಮನದಟ್ಟು ಮಾಡಿಕೊಟ್ಟಿದ್ದಾರೆ. ಡಾ॥ ವೆಂಕಟಸ್ವಾಮಿಯವರು ಗ್ರಂಥದ ಎರಡು ಮತ್ತು ಮೂರನೆಯ ಭಾಗಗಳಲ್ಲಿ ಇತಿಹಾಸದ ಪುಟಗಳಿಂದ ದೃಷ್ಟಾಂತಗಳನ್ನು ಆಯ್ದುಕೊಂಡು ಅವನ್ನು ವಿಶ್ಲೇಷಣೆಗೆ ಗುರಿಮಾಡುವುದಲ್ಲದೆ ವರ್ತಮಾನದ ಸನ್ನಿವೇಶದಲ್ಲಿ ಅವುಗಳನ್ನು ಯಾವುದಕ್ಕೆ ಮತ್ತು ಹೇಗೆ ಬಳಕೆಮಾಡಿಕೊಳ್ಳಲಾಗುತ್ತಿದೆ ಎಂಬುದನ್ನು ಮನೋಜ್ಞವಾಗಿ ವಿಶದೀಕರಿಸಿದ್ದಾರೆ. ವರ್ಣ ವಿಭಜನೆ ಮತ್ತು ಅಸ್ಪೃಶ್ಯತೆ ಯಾವ ಹಾನಿಯನ್ನೂ ಉಂಟುಮಾಡಿಲ್ಲ. ಅವುಗಳ

ಉಗಮದ ಬಗೆಗಿನ ವಿವರಣೆಗಳೆಲ್ಲಾ ಕಟ್ಟುಕತೆ, ಅದರ ನಿವಾರಣೆ ಕಷ್ಟಕರವೇನಲ್ಲ, ಎಂಬರ್ಥ ಬರುವ ಮಾತುಗಳನ್ನು ಅನೇಕರು ಆಗಿಂದಾಗ್ಗೆ ಆಡಿರುವುದುಂಟು. ಸ್ವಾಮಿ ವಿವೇಕಾನಂದರು ಇದನ್ನು ಎಷ್ಟು ಸರಳೀಕರಿಸಿ ಪರಿಹಾರ ಸೂಚಿಸಿದ್ದರೆಂಬುದನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ಅವರೊಮ್ಮೆ ಹೇಳಿದ್ದುದು ಹೀಗಿದೆ : "ಸಾವಿರಾರು ಜಾತಿಗಳಿವೆ, ನಿಜ. ಅವುಗಳಲ್ಲಿ ಕೆಲವು ಬ್ರಾಹ್ಮಣತ್ವಕ್ಕೆ ಏರುತ್ತಿವೆ ಕೂಡ. ಯಾರೇ ಆಗಲಿ, 'ನಾನು ಬ್ರಾಹ್ಮಣ' ಎಂದು ಘೋಷಿಸಿಕೊಳ್ಳಲು ಅಡ್ಡಿ ಏನಿದೆ? ಯಾರೋ ಹತ್ತು ಸಾವಿರ ಮಂದಿ ಇದ್ದಾರೆನ್ನಿ, ಅವರದೊಂದು ಜಾತಿ, ಹಾಗೇ ಇನ್ನು ಹಲವು. ಅವರೆಲ್ಲಾ ಒಟ್ಟಾಗಿ ನಮ್ಮಲ್ಲಿ ನಾವು ಬ್ರಾಹ್ಮಣರು ಎಂದು ಕರೆದುಕೊಳ್ಳುತ್ತೇವೆ ಎಂದು ತೀರ್ಮಾನಿಸಿದರೆ ಅವರನ್ನು ಯಾರು ತಡೆಯಲು ಸಾಧ್ಯ?" ಇತಿಹಾಸದಲ್ಲಿ ಸಾಮಾಜಿಕ ಸ್ತರಗಳು ಕೇವಲ ಇಚ್ಛೆಯ ಅಡಿಪಾಯವನ್ನು ಮಾತ್ರ ಹೊಂದಿರುವಂತಿದ್ದರೆ ಬುದ್ಧ, ಲೋಕಾಯತ, ಬಸವಣ್ಣ, ಅಂಬೇಡ್ಕರ್ ಬೇಕಾಗುತ್ತಿರಲಿಲ್ಲ. ಈ ಮೇಲು – ಕೀಳು ಎಂಬ ಸ್ತರಗಳಿಗೆ ಅಥವಾ ಶ್ರೇಣೀಕರಣಕ್ಕೆ, ಆರ್ಥಿಕ ಪ್ರಾಬಲ್ಯ ಇಲ್ಲವೇ ದೌರ್ಬಲ್ಯ ಆಧಾರ ಒದಗಿಸುತ್ತವೆ. ಆ ಆಧಾರವನ್ನು ಅಲುಗಾಡಿಸದೆಯೇ ಸಮಾನತೆಯತ್ತ ಮತ್ತು ಉತ್ತಮಿಕೆಯತ್ತ ಕ್ರಮಿಸಲು ಸಾಧ್ಯವಿಲ್ಲ. ಬಾಲಿಶವಾದ ಪರಿಹಾರಗಳನ್ನು ಸೂಚಿಸಿ ನಿರಾಳವಾಗಿರುವುದು ಸಮಸ್ಯೆಯ ವ್ಯಾಪ್ತಿಯನ್ನು ಅರ್ಥಮಾಡಿಕೊಳ್ಳದಿದ್ದಾಗ ಮಾತ್ರ ಸಾಧ್ಯ. ವಿವೇಕಾನಂದರಿಗೆ ಅಗೌರವ ತೋರಿಸದೆ ಅವರ ಒಂದು ಪರಿಹಾರಸೂತ್ರವನ್ನು ವಿಮರ್ಶಿಸಿಕೊಳ್ಳುವುದು ಆರೋಗ್ಯಕರ. ಅವರ ಹೇಳಿಕೆ ಇದು : "ನಾನು ಬ್ರಾಹ್ಮಣೇತರರಿಗೆ ಅವಸರ ಮಾಡಿಕೊಳ್ಳಬೇಡಿರೆಂದು ಹೇಳುತ್ತೇನೆ. ಕ್ಷಣ ಕ್ಷಣಕ್ಕೂ ನೀವೇಕೆ ಬ್ರಾಹ್ಮಣರೊಡನೆ ಗುದ್ದಾಡಬಯಸುತ್ತೀರಿ? ತಪ್ಪು ನಿಮ್ಮಲ್ಲೇ ಇದೆ. ಅಧ್ಯಾತ್ಮ ಮತ್ತು ಸಂಸ್ಕೃತದ ಕಲಿಕೆಯನ್ನು ಅಲಕ್ಷಿಸಿ ಎಂದು ನಿಮಗಾರು ಹೇಳಿದ್ದು? ಇಷ್ಟು ಕಾಲ ಸುಮ್ಮನಿದ್ದಿರೇಕೆ? ಬೇರೆ ಯಾರಿಗೋ ಹೆಚ್ಚು ಬುದ್ಧಿಮತ್ತೆ ಇದೆಯೆಂದು ನೀವೇಕೆ ಮೈ ಪರಚಿಕೊಳ್ಳುತ್ತೀರಿ?"

ವರ್ಣಗಳ ಶ್ರೇಣೀಕರಣ ಮತ್ತು ಅಸ್ಪೃಶ್ಯತೆಗಳಿಗೆ ಅಧ್ಯಾತ್ಮ ಮತ್ತು ಸಂಸ್ಕೃತ ಮೂಲಕಾರಣವೂ ಅಲ್ಲ, ಮೂಲ ಪರಿಹಾರವೂ ಅಲ್ಲ. ಅಂಬೇಡ್ಕರ್ ಅವರು ಶಿಕ್ಷಣ ಮತ್ತು ಆರ್ಥಿಕತೆಗಳೆರಡಕ್ಕೂ ಸಮಾನ ಆದ್ಯತೆ ನೀಡಿದ್ದು ಆ ಕಾರಣಕ್ಕೆ. ಅಧ್ಯಾತ್ಮದ ಸೋಗು ಮತ್ತು ಸಂಸ್ಕೃತದ ಪ್ರಾಥಮಿಕ ಪಾಠಗಳಿಂದ ಜಟಿಲವಾದ ಸಮಸ್ಯೆಯೊಂದು ಹಠಾತ್ತನೆ ಇಲ್ಲವಾಗುತ್ತದೆಂದು ಭ್ರಮಿಸುವುದು ಆರಾಮ ಕುರ್ಚಿಯಲ್ಲಿ ಕೂತು ಚಿಂತಿಸುವವರಿಗೆ ಶೋಭಿಸಬಹುದು. ಆದರೆ ಹಲವು ಶತಮಾನಗಳಿಂದ ಬೆಂಕಿಯಲ್ಲಿ ಬೆಂದಿರುವವರಿಗೆ ಮತ್ತು ಊರುಗಳಾಚೆ ಗುಡಿಸಲುಗಳಲ್ಲಿ ಜೀವಿಸುತ್ತಿರುವವರಿಗೆ ಅದು ಕಠಾರಿಪ್ರಾಯವಾದ ಹೊಡೆತ. ಸಾಮಾಜಿಕವಾಗಿ ಕೆಳಸ್ತರಕ್ಕೆ ಸೇರಿದ್ದ ಏಕನಾಥನಂತಹ ಸಂತರು ವಿವೇಕಾನಂದರಂತೆ ಸಮಸ್ಯೆಯನ್ನು ಸರಳೀಕರಿಸಲಿಲ್ಲ. ಅನಿವಾರ್ಯವಾಗಿ ಸಹನೆಯಿಂದ ಇರುವುದು ಅನಿವಾರ್ಯವಾಗಿದ್ದ ಕಾಲ ಆಗಿಹೋಗಿದೆ. ಈಗ ರಾಜ್ಯಯಂತ್ರವನ್ನು ಶೋಷಿತರು ತಮ್ಮದಾಗಿಸಿಕೊಂಡು ಸ್ವಯಂ ಶಕ್ತಿಯಿಂದ ಪರಿಹಾರ ಪಡೆದುಕೊಳ್ಳುವ ಸಂಧಿಕಾಲದಲ್ಲಿದ್ದೇವೆ. ಅಂತಹ ಅಧಿಕಾರ ಸಹ ದಲಿತರಿಗೆ ಭೂಮಿಯ ಒಡೆತನ ದೊರಕಿಸಿಕೊಡದೆ ತೇಪೆದಾರಿ ಪರಿಹಾರಗಳನ್ನು ನೀಡಲು ತವಕಿಸಿದರೆ ಅಸ್ಪೃಶ್ಯತೆಗೆ ಗುರಿಯಾಗಿದ್ದ ಸಮುದಾಯವು ಗುಣಾತ್ಮಕ ಬದಲಾವಣೆಗಳನ್ನು ಕಾಣಲಾರದು.

ಮೀಸಲಾತಿಯ ವಿಚಾರಕ್ಕೆ ಬಂದರೆ ಅದು ಆರಂಭದ ತಾತ್ಕಾಲಿಕ ಪರಿಹಾರ, ಅಷ್ಟೆ. ಅದರ ಸೌಲಭ್ಯ ಪಡೆಯಲು ಮೊದಲು ಕೆಳಗಿನ ಹಂತವನ್ನು ತಟಾಯಿಸಿ ಬರುವ ಸಾಮರ್ಥ್ಯವಿರಬೇಕು. ಶಿಕ್ಷಣವು ಖಾಸಗೀಕರಣಕ್ಕೆ ಬಹಳ ಹೆಚ್ಚು ಪ್ರಮಾಣದಲ್ಲಿ ಗುರಿಯಾಗುತ್ತಿರುವಾಗ ಮೀಸಲಾತಿಯು ಅಪ್ರಸ್ತುತ; ಏಕೆಂದರೆ ಅನುದಾನ ಪಡೆಯದ ಖಾಸಗಿ ಸಂಸ್ಥೆಗಳು ಮೀಸಲಾತಿಯನ್ನು ಮಾನ್ಯ ಮಾಡುವುದಿಲ್ಲ. ಶಿಕ್ಷಣದ ಹಕ್ಕು ಕಾಯ್ದೆಯಡಿ ಪ್ರಾಥಮಿಕ ಹಂತಗಳಲ್ಲಿ ಖಾಸಗಿ ಶಾಲೆಗಳಿಗೆ ಪ್ರವೇಶವು ಸಾಧ್ಯವಿದೆ, ಆದರೆ ಆ ಕಾಯ್ದೆಯೂ ಶಾಶ್ವತವಲ್ಲ. ಉದ್ಯೋಗಗಳಿಗೆ ಸಂಬಂಧಿಸಿದಂತೆ ಮೀಸಲಾತಿಯು ಅಪ್ರಯೋಜಕವಾಗುತ್ತಿದೆ. ಏಕೆಂದರೆ, ಶಿಕ್ಷಣ ಕ್ಷೇತ್ರದಲ್ಲಿ, ಸರ್ಕಾರಿ ನೌಕರಿಗಳಲ್ಲಿ, ನೇಮಕಾತಿಗಳೇ ನಡೆಯುತ್ತಿಲ್ಲ ಮತ್ತು ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಮುಚ್ಚಿಹೋಗುತ್ತಿವೆ. ಖಾಸಗಿ ಉದ್ಯಮಗಳಲ್ಲಿ ಮೀಸಲಾತಿಯು ಅನ್ವಯಿಸುವುದಿಲ್ಲ. ಸಂವಿಧಾನರೀತ್ಯಾ ಅದನ್ನು ಆ ವಲಯದಲ್ಲಿ ಕಡ್ಡಾಯಗೊಳಿಸುವುದು ಅಶಕ್ಯ. ಆದ್ದರಿಂದ ಸಾಮಾಜಿಕವಾಗಿ ಬದಲಾವಣೆಯನ್ನು ಅಪೇಕ್ಷಿಸುವಾಗ ಆರ್ಥಿಕ ಕ್ಷೇತ್ರದ ಆಮೂಲಾಗ್ರ ಬದಲಾವಣೆಗಾಗಿ ಹೋರಾಟವನ್ನು ಕೈಗೊಳ್ಳಬೇಕಾಗುತ್ತದೆ.

ಹಿಂದಿನ ಕಾಲದ ಕಟ್ಟಳೆಗಳ ತೀವ್ರತೆಯು ಆಚರಣೆಯಲ್ಲಿ ಕಡಿಮೆಯಾಗಿದ್ದರೂ ತಥಾಕಥಿತ ಉಚ್ಚವರ್ಗಗಳ ಮತ್ತು ವರ್ಣಗಳ ಮಾನಸಿಕ ಪ್ರವೃತ್ತಿ ಗಮನಾರ್ಹವಾಗಿ ಬದಲಾಗಿಲ್ಲ. ಅಂತಹ ಸಂದರ್ಭದಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರರ ಇತಿಹಾಸ ವಿಶ್ಲೇಷಣೆಗಳು ಮುಂದಿನ ಹಾದಿಯ ಪರಿಪ್ರೇಕ್ಷ್ಯ ಮತ್ತು ಸೈದ್ಧಾಂತಿಕ ಪ್ರಕರ್ಷತೆ ಬದಲಾವಣೆಯ ಆಶಯದ ಪೂರೈಕೆಗೆ ಹರಿತವಾದ ಸಾಧನಗಳು. ಡಾ॥ ವೆಂಕಟಸ್ವಾಮಿಯವರು ಇವನ್ನೆಲ್ಲಾ ಆಳವಾಗಿ ಪರಿಚಯಿಸಿದ್ದಾರೆ ಮತ್ತು ಚರ್ಚಿಸಿದ್ದಾರೆ. ಆ ಕಾರಣದಿಂದ ಇದು ಹೋರಾಟಗಳಿಗೆ ಮಾರ್ಗದರ್ಶಿಯಾಗಿ ಸಹ ಆಲಂಬನೆ ನೀಡುತ್ತದೆ. ಇಂತಹ ಮೌಲಿಕ ಗ್ರಂಥವನ್ನು ನೀಡಿರುವ ಅವರಿಗೆ ಮತ್ತು ಗ್ರಂಥದ ಪ್ರಕಟಣೆಯ ಜವಾಬ್ದಾರಿ ಹೊತ್ತಿರುವ ನವಕರ್ನಾಟಕ ಪ್ರಕಾಶನಕ್ಕೆ ಅಭಿನಂದನೆಗಳು ಸಲ್ಲುತ್ತವೆ.

ಬೆಂಗಳೂರು **ಡಾ॥ ಜಿ. ರಾಮಕೃಷ್ಣ**

ಜನವರಿ 30, 2018

# ನಿಮ್ಮೊಂದಿಗೆ

ಡಾ॥ ಬಿ. ಆರ್. ಅಂಬೇಡ್ಕರ್ ಅವರ ಶಿಕ್ಷಣ–ಸಂಘಟನೆ–ಚಳುವಳಿಯ ಆಧಾರದಿಂದ ಮೊದಲಿಗೆ ಮಹಾರಾಷ್ಟ್ರದಲ್ಲಿ ಹುಟ್ಟಿಕೊಂಡ ದಲಿತರ ಸ್ವಾಭಿಮಾನ; ದಲಿತ ಪ್ಯಾಂಥರ್ಸ್, ದಲಿತ ಸಾಹಿತ್ಯದ ಮೂಲಕ ಪಕ್ಕದ ರಾಜ್ಯಗಳಿಗೆ ಜ್ಯೋತಿಯಂತೆ ಚಾಚಿಕೊಂಡಿತು. ಮೈಸೂರಿನಲ್ಲಿ ಮೊದಲ ಬಾರಿಗೆ 1970ರ ದಶಕದಲ್ಲಿ ಪ್ರೊ॥ ಸಂಜೀವಯ್ಯನವರು ಒಂದು ದಲಿತ ಕಮ್ಮಟ ಆಯೋಜಿಸಿ ಹೊಸ ಅಲೆಯೊಂದನ್ನು ಹುಟ್ಟುಹಾಕಲು ಕಾರಣರಾದರು. ಆ ಕಮ್ಮಟದ ಉದ್ಘಾಟನಾ ಭಾಷಣದಲ್ಲಿ ಅಂದಿನ ಕರ್ನಾಟಕ ಪೌರಾಡಳಿತ ಸಚಿವ ಮತ್ತು ಅಂಬೇಡ್ಕರ್‌ವಾದಿ ಬಿ. ಬಸವಲಿಂಗಪ್ಪನವರು ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳ ಬಗ್ಗೆ ಉಲ್ಲೇಖಿಸುತ್ತ "ಹಿಂದೂ ಧರ್ಮ ಮತ್ತು ಹಿಂದೂ ದೇವರುಗಳಿಂದ ದಲಿತರಿಗೆ ಯಾವ ಒಳಿತೂ ಆಗಿಲ್ಲ, ಹಾಗಾಗಿ ಅಂಬೇಡ್ಕರ್ ಹೇಳುವಂತೆ ಹಿಂದೂ ದೇವರುಗಳನ್ನೆಲ್ಲ ಚರಂಡಿ – ಘಟಾರುಗಳಿಗೆ ನೂಕಿ ದೇವಾಲಯಗಳನ್ನೆಲ್ಲ ಮುಚ್ಚಬೇಕಿದೆ" ಎಂದು ಹೇಳುತ್ತ "ಕನ್ನಡ ಸಾಹಿತ್ಯದಲ್ಲಿ ಏನಿದೆ? 'ಬೂಸಾ' ಬಿಟ್ಟು" ಎಂದು ದಲಿತ ವಿದ್ಯಾರ್ಥಿಗಳಲ್ಲಿ ವೈಚಾರಿಕ ಕಿಚ್ಚನ್ನು ಹಚ್ಚಿದರು. ಅಂದಿನಿಂದ ದಲಿತ ಮತ್ತು ಶೂದ್ರರಲ್ಲಿ ಹೊಸ ಹೊಸ ಆಲೋಚನೆಗಳು ಹುಟ್ಟಿಕೊಂಡವು. ಅದೇ ಕಾಲಕ್ಕೆ ಶೂದ್ರರ ಸ್ವಾಭಿಮಾನಿ 'ವಿಶ್ವ ಮಾನವತಾವಾದಿ' ಕುವೆಂಪು, ಅಂಬೇಡ್ಕರ್ ಹೇಳಿದ ಮಾತುಗಳನ್ನು ಬೇರೆ ರೀತಿಯಲ್ಲಿ ಹೇಳಿ ಕರ್ನಾಟಕದ ಶೂದ್ರರನ್ನು ಬಡಿದೆಬ್ಬಿಸಿದರು. ಅದಕ್ಕೂ ಮುಂಚೆ ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದಲ್ಲಿನ ಹುಳುಕುಗಳನ್ನೆಲ್ಲ ಹೆಕ್ಕಿ ತಮ್ಮ ಬರಹಗಳಲ್ಲಿ ತೀವ್ರವಾಗಿ ಖಂಡಿಸಿದ್ದರು. ಇದೆಲ್ಲದರ ಫಲಿತಾಂಶ ಸ್ವಾತಂತ್ರ್ಯೋತ್ತರದ ಕಾಲದಲ್ಲಿ ಕರ್ನಾಟಕದಲ್ಲಿ ಶೂದ್ರರು ಮತ್ತು ದಲಿತರಲ್ಲಿ ವೈಚಾರಿಕ ಚಿಂತನೆಗಳು ಕಾಣಿಸಿಕೊಂಡವು.

ಸುಮಾರು 5 ಸಾವಿರ ವರ್ಷಗಳ ಆಸುಪಾಸು ಭಾರತ ಪ್ರವೇಶಿಸಿದ ಆರ್ಯರು ಮತ್ತು ಇಲ್ಲಿನ ಮೂಲ ಜನಾಂಗಗಳ ನಡುವೆ ಸಾವಿರಾರು ವರ್ಷಗಳ ಕಾಲ ಸಂಘರ್ಷಗಳು ನಡೆದವು. ಮನುವಿಗಿಂತ ಮುಂಚಿನಿಂದಲೇ ಪ್ರಾರಂಭವಾಗಿದ್ದ ವರ್ಣಾಶ್ರಮ ಪದ್ಧತಿ ಮನುಕಾಲಕ್ಕೆ ಒಂದು ರೂಪ ಪಡೆದುಕೊಂಡು ಸಮಾಜದಲ್ಲಿ ಮೇಲುಗೈ ಸ್ಥಾಪಿಸಿಕೊಂಡಿತು. ಆರ್ಯರು ಸ್ಥಳೀಯ ಜನಾಂಗಗಳಾದ ಅಸುರರ ಮೇಲೆ ಯುದ್ಧಗಳನ್ನು ಸಾರಿ ಅವರನ್ನು ನಾನಾ ರೀತಿಯ (ದಶಾವತಾರಗಳ) ಮೋಸಗಳಿಂದ ಸೋಲಿಸಿ ಕೊನೆಗೂ ಸಮಾಜದಲ್ಲಿ ಉಚ್ಚ ಸ್ಥಾನವನ್ನು ಅಲಂಕರಿಸಿದರು. ಕಾಲಾಂತರದಲ್ಲಿ ಹಿಂದೂ ಧರ್ಮ ಶ್ರೀರಾಮ, ಶ್ರೀಕೃಷ್ಣರ ವಂಚನೆಗಳನ್ನು ವೈಭವೀಕರಿಸಿ, ಅವುಗಳನ್ನೇ ಆದರ್ಶವೆಂದು ಸ್ವೀಕರಿಸಿ ವರ್ಣಾಶ್ರಮ ಮೂಲದ ಜಾತಿ, ಅಸ್ಪೃಶ್ಯತೆಯ ಮೂಲಕ ಅಪಾರವಾದ ಭೇದಭಾವಗಳನ್ನು ಹುಟ್ಟುಹಾಕಿತು. ಹಿಂದೂ ಸಮಾಜದಲ್ಲಿನ ಜಾತಿಗಳು, ಅಸ್ಪೃಶ್ಯರ ಸ್ಥಾನಮಾನ ಮತ್ತು ಅಸ್ಪೃಶ್ಯತೆ ತೀರ ಜಟಿಲವಾದ ಸಮಸ್ಯೆಯಾಗಿ

ಪರಿಣಮಿಸಿತು. ಇದರ ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ವರ್ಗಗಳು, ವರ್ಗವೈರುಧ್ಯ ಹಾಗೂ ವರ್ಗೀಯ ಹಿತಾಸಕ್ತಿಗಳು ಜಾತಿ, ಅಸ್ಪೃಶ್ಯತೆಯನ್ನು ಮುಂದುವರಿಸಿಕೊಂಡು ಬರುವಂತಹ ಪರಿಸ್ಥಿತಿ ಉಂಟಾಯಿತು. ಮಹಿಳೆಯರನ್ನಂತೂ ಎಲ್ಲಾ ರೀತಿಯಲ್ಲೂ ಶೋಷಣೆಗೆ ಒಳಪಡಿಸಲಾಯಿತು. ಹಿಂದೂ ಧರ್ಮ, ಬ್ರಾಹ್ಮಣ ಮಹಿಳೆಯನ್ನು ಸಹ ಶೂದ್ರರಿಗೆ ಸಮಾನ ಎಂದಿತು.

ಜಾತಿ, ಅಸ್ಪೃಶ್ಯತೆ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧ ಕಾಲ ಕಾಲಕ್ಕೆ ಎಷ್ಟೋ ಮಹನೀಯರು ವಿರೋಧವನ್ನು ವ್ಯಕ್ತಪಡಿಸುತ್ತ ಬಂದಿದ್ದಾರೆ. ಇವರಲ್ಲಿ ಲೋಕಾಯತರು, ಚಾರ್ವಾಕರು, ಬುದ್ಧ, ಬಸವಣ್ಣ, ಜ್ಯೋತಿಬಾ ಫುಲೆ, ದಯಾನಂದ ಸರಸ್ವತಿ ಮತ್ತು ವಿವೇಕಾನಂದ ಅವರನ್ನು ವಿಶೇಷವಾಗಿ ಹೆಸರಿಸಬಹುದು. ಹಿಂದೂ ಧರ್ಮದಲ್ಲಿನ ಸಾಮಾಜಿಕ ಅಸಮಾನತೆಗಳನ್ನು ವಿರೋಧಿಸಲು ಇದೇ ನೆಲದಲ್ಲಿ ಬೌದ್ಧ, ಜೈನ, ಲಿಂಗಾಯತ ಧರ್ಮಗಳು ಹುಟ್ಟಿಕೊಂಡವು. ಮುಸ್ಲಿಂ ಧರ್ಮ ಮತ್ತು ಕ್ರೈಸ್ತ ಧರ್ಮಗಳು ಹಿಂದೂ ಧರ್ಮದವರನ್ನು ತಮ್ಮ ಧರ್ಮದ ಕಡೆಗೆ ಆಕರ್ಷಿಸಿ ಸೇರಿಸಿಕೊಂಡ ಉದಾಹರಣೆಗಳು ಹೇರಳವಾಗಿವೆ. ಕಾಲಾಂತರದಲ್ಲಿ ಈ ನೆಲದಲ್ಲಿ ಹುಟ್ಟಿದ ಬೌದ್ಧ ಧರ್ಮವನ್ನು ದೇಶ ಬಿಟ್ಟು ಪಲಾಯನ ಮಾಡಿಸಲಾಯಿತು. ಜೈನ, ಲಿಂಗಾಯತ ಧರ್ಮಗಳು ಹಿಂದೂ ಧರ್ಮದಲ್ಲಿ ಹೇಳಹೆಸರಿಲ್ಲದೆ ಲೀನವಾಗಿ ಹೋದವು. ಪ್ರತಿರೋಧ ತೋರಿಸುತ್ತಲೇ ಬಂದ ದ್ರಾವಿಡರು ಮತ್ತು ದ್ರಾವಿಡರ ದೇವತೆಗಳಿಗೂ ಅದೇ ಗತಿ ಒದಗಿಬಂದಿತು. ಪ್ರಸ್ತುತ, ಹಿಂದೂ ಧರ್ಮ ಮನು ಕಾಲದ ಅಸಮಾನತೆಯ ನಂಜನ್ನು ಮತ್ತೊಮ್ಮೆ ಸಮಾಜದ ಮೇಲೆ ತೀವ್ರವಾಗಿ ಹೇರಲು ಹೆಣಗಾಡುತ್ತಿರುವಂತೆ ಕಂಡುಬರುತ್ತಿದೆ. ಪ್ರಜಾಪ್ರಭುತ್ವದ ದೇಶದಲ್ಲಿ ಈಗ ಹಿಂದೂ ಧರ್ಮ/ದೇವತೆಗಳ ವಿರುದ್ಧ ಮಾತನಾಡಿದವರು ಪ್ರಾಣ ಕಳೆದುಕೊಳ್ಳುವಷ್ಟರ ಮಟ್ಟಿಗೆ ತೊಂದರೆಗೆ ಸಿಲುಕಿ ಕೊಂಡಿದ್ದಾರೆ. ಮುಸ್ಲಿಂ ಧರ್ಮಾಂಧತೆಯನ್ನು ವಿರೋಧಿಸಿದವರಿಗೂ ಅದೇ ಗತಿ ಕಾದಿದೆ.

ಆಧುನಿಕ ಯುಗದಲ್ಲಿ, ಜನರು ರಾಕೆಟ್/ಉಪಗ್ರಹಗಳಲ್ಲಿ ಅನ್ಯ ಗ್ರಹಗಳಿಗೆ ಹೋಗಿಬರುವ ಈ ಹೊತ್ತಿನಲ್ಲಿ ಪ್ರಪಂಚವೇ ಒಂದು ಜಾಗತಿಕ ಹಳ್ಳಿ ಎನ್ನುವಾಗ ದೇಶಕ್ಕೆ ಸ್ವಾತಂತ್ರ್ಯ ಬಂದು 71 ವರ್ಷಗಳಾದರೂ ಭಾರತದಲ್ಲಿ ಇಂದಿಗೂ ಅಸ್ಪೃಶ್ಯತೆಯನ್ನು ಆಚರಿಸದ ಹಳ್ಳಿಯೇ ಇಲ್ಲ. ಅಸ್ಪೃಶ್ಯರನ್ನು ಪ್ರೀತಿಯಿಂದ ಒಳಕ್ಕೆ ಬರಮಾಡಿಕೊಳ್ಳುವ ದೇವಾಲಯಗಳೂ ದೊರಕುವುದಿಲ್ಲ. ದೇಶದ ಶೇಕಡ 15ರಷ್ಟು ಜನಸಂಖ್ಯೆ ಇರುವ ಅಸ್ಪೃಶ್ಯರು ಕೆಲವು ಸಾವಿರ ವರ್ಷಗಳಿಂದ ದಂಗೆ ಎದ್ದು ಉಚ್ಚ ಜಾತಿಯ ಜನರ ಮೇಲೆ ತಿರುಗಿ ಬೀಳದೆ, ಪ್ರತ್ಯೇಕ ದೇಶವನ್ನು ಕೇಳದೆ ಸಂಯಮದಿಂದ ಇರುವುದು ಈ ದೇಶ ಇನ್ನೂ ಅಖಂಡವಾಗಿರಲು ಕಾರಣರಾಗಿದ್ದಾರೆ. ಇವರಿಗೆ ಇಷ್ಟು ಸಂಯಮ ಬಹುಶಃ ಬುದ್ಧನಿಂದ ಬಂದಿರಬೇಕು. ಮಹಾ ಮಾನವತಾವಾದಿ ಅಂಬೇಡ್ಕರ್, ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದ ಕಾಲದಲ್ಲಿ ಇಲ್ಲವೇ ಪೂನಾ ಒಪ್ಪಂದದ ಸಮಯದಲ್ಲಿ ದಲಿತರನ್ನು ಬಡಿದೆಬ್ಬಿಸಿದ್ದರೆ ಬಹುಶಃ ದಲಿತರು ಪ್ರತ್ಯೇಕ ದೇಶವನ್ನು ಹೊಂದಿರುತ್ತಿದ್ದರೊ ಏನೊ? ಅವರೂ ಬುದ್ಧನ ಒಂದು ಅಂಶದಂತೆ ಈ ದೇಶ ಒಡೆದುಹೋಗದಂತೆ ನೋಡಿಕೊಂಡರು. ಪ್ರಪಂಚವೇ ಬದಲಾಗುತ್ತಿದ್ದರೂ ಉಚ್ಚ ಜಾತೀಯ ಜನರ ಮನಸ್ಸು ಮಾತ್ರ ಇನ್ನೂ ಬದಲಾಗಲೇ ಇಲ್ಲ.

ಭಾರತದ ಉದ್ದಗಲಕ್ಕೂ ಹರಡಿರುವ ದಲಿತರನ್ನು ಆದಿ–ಕರ್ನಾಟಕ, ಆದಿ–ದ್ರಾವಿಡ, ಆದಿ–ಆಂಧ್ರ, ಆದಿ–ಕೇರಳ ಇತ್ಯಾದಿಯಾಗಿ ಕರೆಯುತ್ತಾರೆ. 'ಮಹಾರ್' ಜಾತಿಯ ದಲಿತರಿಂದಲೇ ಮಹಾರಾಷ್ಟ್ರ ಸೃಷ್ಟಿಯಾಯಿತು ಎನ್ನುವುದೂ ಉಂಟು. ಅದೇ ರೀತಿಯಾಗಿ 'ಮಾದಿಗ' ಎಂಬ ಪದ 'ಮಹಾ ಆದಿ' ಎಂಬುದರ ಮೂಲದಿಂದ ಬಂದಿರುವುದಾಗಿ ಹೇಳಲಾಗುತ್ತದೆ. ದಲಿತರಂತೆಯೇ ಗುಡ್ಡಗಾಡುಗಳಲ್ಲಿ ವಾಸಿಸುವವರನ್ನು, ಬಹುತೇಕ ಪರಿಶಿಷ್ಟ ಪಂಗಡಗಳನ್ನು ಆದಿವಾಸಿಗಳು ಎನ್ನುತ್ತಾರೆ. ದಲಿತರು ಮತ್ತು ಆದಿವಾಸಿಗಳು ಈ ದೇಶದ ಮೂಲನಿವಾಸಿಗಳು. ಅಷ್ಟೇಕೆ, ದಕ್ಷಿಣ ಭಾರತದ ಎಲ್ಲಾ ಬ್ರಾಹ್ಮಣರು ಮೂಲವಾಗಿ ದ್ರಾವಿಡ ಜನಾಂಗಕ್ಕೆ ಸೇರಿದವರು. ಒಂದು ಕಾಲದಲ್ಲಿ ಇವರೆಲ್ಲ ಈ ದೇಶಕ್ಕೆ ವಲಸೆ ಬಂದ ಆರ್ಯರ ವೈದಿಕಶಾಹಿ ಧರ್ಮವನ್ನು ಒಪ್ಪಿಕೊಂಡವರು. ಮೌರ್ಯರ ಕಾಲದಲ್ಲಿ ಬಹುಜನರು ಆಳುವ ಜನಾಂಗವಾಗಿದ್ದು ವಲಸೆ ಬಂದ ಆರ್ಯಬ್ರಾಹ್ಮಣರು ಅಗ್ರಹಾರಗಳೆಂಬ ಊರಿನ ಆಚೆಯ ಕೇರಿಗಳಲ್ಲಿ ಅಸ್ಪೃಶ್ಯರಾಗಿ ವಾಸಿಸುತ್ತಿದ್ದರು ಎನ್ನುವುದಕ್ಕೆ ಸಾಕ್ಷಿ ಪುರಾವೆಗಳಿವೆ. ಪುಷ್ಯಮಿತ್ರನೆಂಬ ಶುಂಗ ಬ್ರಾಹ್ಮಣನು ಬೃಹದ್ರಥ ಮಹಾರಾಜನೆಂಬ ಬೌದ್ಧರಾಜನ ಹತ್ತಿರ ಯೋಧನಾಗಿ ಸೇರಿಕೊಂಡು ಸಂಚುಮಾಡಿ ಬೌದ್ಧರಾಜನನ್ನು ಕೊಂದ ಮೇಲೆ, ಬ್ರಾಹ್ಮಣರು ಆಳುವ ವರ್ಗವಾಗಿ ಬೆಳೆದರು. ಆಗ ಜಾರಿಗೆ ಬಂದ ಮೊದಲ ಮೀಸಲಾತಿ ನಿಯಮವೇ ಮನುಧರ್ಮಶಾಸ್ತ್ರ. ಹಾಗಾಗಿ ದ್ರಾವಿಡ ಬ್ರಾಹ್ಮಣರಿಗೂ ಮತ್ತು ಇಂದಿನ ಕಟ್ಟಕಡೆಯ ಜಾತಿಯಾಗಿರುವ ಪಂಚಮರಿಗೂ ಮೂಲಭೂತವಾಗಿ ಯಾವುದೇ ವ್ಯತ್ಯಾಸವಿಲ್ಲ. ದಕ್ಷಿಣ ಭಾರತದ ಮುಸ್ಲಿಮರೂ ಸಹ ಬೇರೆ ಜನಾಂಗವಲ್ಲ. ಈಗ ಎಲ್ಲರನ್ನು ಹಿಂದೂಗಳೆಂದು ಕರೆಯಲಾಗುತ್ತಿದೆ. ಎಲ್ಲಾ ಜಾತಿಗಳ ಜನರು ಅಸುರ/ದ್ರಾವಿಡ ಸಮುದಾಯಕ್ಕೆ ಸೇರಿದ ಒಂದೇ ಜನಾಂಗದವರಾಗಿದ್ದಾರೆ. ಭಾರತದಲ್ಲಿ ಆರ್ಯ ಮೂಲದ ಹಿಂದೂಗಳ ಸಂಖ್ಯೆ ಒಂದು ಕಾಲದಲ್ಲಿ ಕೇವಲ 5 ರಷ್ಟು ಮಾತ್ರ. ಕಾಲಾಂತರದಲ್ಲಿ ಭರತ ಖಂಡ ಪ್ರವೇಶಿಸಿದ ಎಲ್ಲಾ ಜನಾಂಗಗಳ ನಡುವೆ ಸಂಕರ ನಡೆದುಹೋಗಿ ಈಗ ಯಾವುದೇ ಜನಾಂಗವನ್ನು ಪೂರ್ಣವಾಗಿ ಶುದ್ಧಜನಾಂಗ ಎಂದು ಹೇಳಲು ಸಾಧ್ಯವಿಲ್ಲ.

ಈ ಶತಮಾನದ ಶ್ರೇಷ್ಠ ಪ್ರತಿಭಾವಂತರು, ಮೇಧಾವಿಗಳು ಆದ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು 'ಪ್ರಗತಿಗೆ ವಿದ್ಯೆಯೇ ಮೂಲ' ಎನ್ನುವ ಮಂತ್ರವನ್ನು ಬೋಧಿಸಿದರು. ಈ ರಾಷ್ಟ್ರದಲ್ಲಿ ಜನ್ಮತಾಳಿದ ಪ್ರತಿಯೊಬ್ಬರೂ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಾನ ಹಕ್ಕುಗಳನ್ನು ಪಡೆಯಬೇಕು ಎಂದು ಹೋರಾಡಿದ ಮಹಾಚೇತನ ಅಂಬೇಡ್ಕರ್. ಈ ಮಹಾಜ್ಞಾನಿಯ ಚಿಂತನೆಗಳನ್ನು ಅರಿತುಕೊಳ್ಳುವುದು ಪ್ರತಿಯೊಬ್ಬ ದಲಿತನ ಆದ್ಯಕರ್ತವ್ಯವಾಗಿದೆ. ಬ್ರಾಹ್ಮಣರಿಗೆ ವೇದ ಉಪನಿಷತ್ತುಗಳು ಹೇಗೆ ಮುಖ್ಯವೋ ದಲಿತರಿಗೆ ಅಂಬೇಡ್ಕರ್ ಚಿಂತನೆಗಳು, ತತ್ವಗಳು ಅದಕ್ಕಿಂತ ಮುಖ್ಯ. ಅಂಬೇಡ್ಕರ್, ದಲಿತರಲ್ಲಿ ಮೂಡಿಸಿದ ಆತ್ಮವಿಶ್ವಾಸ, ಚೈತನ್ಯ ಮತ್ತು ಸ್ಫೂರ್ತಿಯನ್ನು ಪಡೆದುಕೊಳ್ಳಬೇಕಾದರೆ ಅವರ ವಿಚಾರಗಳನ್ನು ದಲಿತ ವಿದ್ಯಾವಂತರು ಹೆಚ್ಚೆಚ್ಚಾಗಿ ಚಿಂತನೆ ಮಾಡಿ ಕಾರ್ಯರೂಪಕ್ಕೆ ತರಬೇಕಾಗಿದೆ. ಅಂಬೇಡ್ಕರ್ ತಮ್ಮ ದಲಿತ ಬಾಂಧವರ ಬಗ್ಗೆ ಯಾವ ರೀತಿಯ ಭಾವನೆಗಳನ್ನು ಇಟ್ಟುಕೊಂಡಿದ್ದರು ಎನ್ನುವುದಕ್ಕೆ

ಈ ಮಾತುಗಳೇ ಸಾಕ್ಷಿ. 'ಯಾವಾಗ ನಾನು ನನ್ನ ಬದುಕಿನ ಅರ್ಥವನ್ನು ತಿಳಿದುಕೊಳ್ಳಲು ಸಮರ್ಥನಾದೆನೋ ಅಂದಿನಿಂದ ನನ್ನ ಅಸ್ಪೃಶ್ಯ ಬಾಂಧವರಿಗಾಗಿ ಸೇವೆ ಮಾಡಬೇಕೆಂಬ ತತ್ವವನ್ನು ನನ್ನ ಬದುಕಿನಲ್ಲಿ ಅಳವಡಿಸಿಕೊಂಡಿದ್ದೇನೆ. ನಾನು ಎಲ್ಲೇ ಇರಲಿ, ಹೇಗೇ ಇರಲಿ, ಯಾವುದೇ ಸ್ಥಿತಿಯಲ್ಲಿರಲಿ, ನಾನು ಯಾವತ್ತೂ ನನ್ನ ಬಾಂಧವರ ಒಳಿತಿನ ಬಗ್ಗೆಯೇ ಆಲೋಚಿಸುತ್ತಿದ್ದೆ ಮತ್ತು ಯಾವುದೇ ಬೇರೆ ಸಮಸ್ಯೆಗಳಿಗೆ ಅಷ್ಟೊಂದು ಪ್ರಾಮುಖ್ಯತೆ ಕೊಟ್ಟಿಲ್ಲ' ಎಂದಿದ್ದಾರೆ. ಅಂಬೇಡ್ಕರ್ ತಮ್ಮ ಬದುಕನ್ನು ಆದರ್ಶಪ್ರಾಯವಾಗಿ ಬದುಕಿ ತೋರಿಸಿದ್ದಾರೆ.

ಶ್ರೇಣೀಕೃತ ಸಮಾಜದಲ್ಲಿ ಕವಿ, ಲೇಖಕ, ಬುದ್ಧಿಜೀವಿಗಳೆಲ್ಲ ಒಂದಲ್ಲ ಒಂದು ನಿರ್ದಿಷ್ಟ ವರ್ಗಕ್ಕೆ ಮತ್ತು ಅನುಭವ ವಲಯಗಳಿಗೆ ತಮಗೆ ಅರಿವಿಲ್ಲದಂತೆಯೇ ಅಂಟಿಕೊಂಡಿರುವುದು ನಿಜ. ಆದರೆ, ಅದನ್ನೆಲ್ಲ ಮೆಟ್ಟಿ ನಿಲ್ಲುವಂತಹ ಒಂದು ಸಣ್ಣ ಪ್ರಯತ್ನ ಇದಾಗಿದೆ ಎನ್ನುವುದು ನನ್ನ ಅನಿಸಿಕೆ. ಈ ಕೃತಿಯಲ್ಲಿರುವ ಚಿಂತನೆಗಳೆಲ್ಲ ಈ ದೇಶದ ಬಗ್ಗೆ, ಈ ಸಮಾಜದ ಬಗ್ಗೆ ಪ್ರೀತಿ, ಪ್ರೇಮವನ್ನು ತುಂಬಿಕೊಂಡು ಸಾಮಾಜಿಕ ಬದಲಾವಣೆಗಳನ್ನು ತರಲು ಹೋರಾಟ ನಡೆಸಿದ ಎಷ್ಟೋ ಮಹಾನುಭಾವರ ಚಿಂತನೆಗಳಾಗಿವೆ. ಈ ದೇಶದ ಮೂಲ ಜನಾಂಗಗಳನ್ನು ಕಾಲಿನ ಕಸಕ್ಕಿಂತ ಹೀನ ಮಾಡಿ ಮನುಷ್ಯರ ನಡುವೆ ಮೇಲು–ಕೀಳು, ಜಾತಿ, ಅಸ್ಪೃಶ್ಯತೆಯನ್ನು ಸೃಷ್ಟಿಸಲು ಕಾರಣರಾದ ಶಕ್ತಿಗಳ ಬಗ್ಗೆ ಎಚ್ಚೆತ್ತುಕೊಳ್ಳಬೇಕೆನ್ನುವುದನ್ನು ದಲಿತ, ಬಹುಜನ ಸಮುದಾಯಗಳು, ಬುದ್ಧಿಜೀವಿಗಳು ಅರ್ಥಮಾಡಿಕೊಳ್ಳಬೇಕು. ಯಾವುದೇ ಒಂದು ಜನಾಂಗವನ್ನು ನೋಯಿಸುವ ಉದ್ದೇಶ ಖಂಡಿತ ನನಗಿಲ್ಲ. ಎಲ್ಲಾ ಜಾತಿ ಜನಾಂಗಗಳಲ್ಲೂ ಒಳ್ಳೆಯದನ್ನು, ಕೆಟ್ಟದ್ದನ್ನು ಯೋಚಿಸುವವರು ಎಲ್ಲಾ ಕಾಲದಲ್ಲೂ ಇದ್ದರು. ಬುದ್ಧ, ಬಸವ, ಮಹಾತ್ಮಫುಲೆ, ಮಹಾತ್ಮಗಾಂಧಿ, ವಿವೇಕಾನಂದ, ಅಂಬೇಡ್ಕರ್ ಇವರೇ ಇದಕ್ಕೆ ಸಾಕ್ಷಿ. ಇದು ಚರಿತ್ರೆ ನಮಗೆ ಹೇಳಿಕೊಟ್ಟಿರುವ ಪಾಠವೂ ಹೌದು.

ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯ ಮೂಲವನ್ನು ಕುರಿತ ಪೂರ್ಣವಾದ ಪುಸ್ತಕವೊಂದು ಕನ್ನಡದಲ್ಲಿ ಇಲ್ಲದೆ ಇದ್ದು ಆ ಕೊರತೆಯನ್ನು ಸ್ವಲ್ಪಮಟ್ಟಿಗೆ ಈ ಪುಸ್ತಕ ತುಂಬುತ್ತದೆ ಎನ್ನುವ ತೃಣ ಆಸೆ ನನ್ನಲ್ಲಿ ಅಡಗಿದ್ದು, ಅಸ್ಪೃಶ್ಯರು ಮತ್ತು ಶೂದ್ರ ಸಂಸ್ಕೃತಿಯ ಬಗ್ಗೆ ಆಸಕ್ತಿ ಇರುವವರಿಗೆ ಈ ಪುಸ್ತಕ ಸಹಾಯವಾಗಬಹುದು. ಈ ಪುಸ್ತಕವನ್ನು ಬರೆಯಲು ನಾನು ಆಳವಾದ ಅಧ್ಯಯನವನ್ನೇನೂ ಮಾಡಲಿಲ್ಲ. ಆದರೂ ಈ ಕೃತಿ ತನ್ನದೇ ಆದ ಇತಿಮಿತಿಗಳಲ್ಲಿ ಚಿಕ್ಕದಾಗಿ ಚೊಕ್ಕದಾಗಿ ಮೂಡಿಬರಲು ಪ್ರಯತ್ನಿಸಿದ್ದೇನೆ ಎಂದು ಧೈರ್ಯವಾಗಿಯೇ ಹೇಳುತ್ತೇನೆ. ಈ ಪುಸ್ತಕದ ಅಧ್ಯಯನ ಎಲ್ಲಾ ರೀತಿಯಲ್ಲೂ ಸಮಗ್ರವಾಗಿದೆಯೆಂದೋ ಅಥವಾ ದೋಷಯುಕ್ತವಾಗಿದೆಯೆಂದೋ ಹೇಳಲಾರೆ. ಇದೆಲ್ಲವನ್ನು ಮೀರಿ ಈ ಪುಸ್ತಕದಲ್ಲಿರುವ ಯಾವುದೇ ಲೋಪದೋಷಗಳಿಗೆ ನಾನೇ ಜವಾಬ್ದಾರ. ಈ ಕೃತಿ 'ಅಸ್ಪೃಶ್ಯರು' –(ಒಂದು ಪರಿಶೀಲನೆ) ಹೆಸರಿನಲ್ಲಿ 2003ರಲ್ಲಿ ನವಕರ್ನಾಟಕದಿಂದಲೇ ಪ್ರಕಟಗೊಂಡಿತ್ತು. ಆದರೆ ಕಳೆದ 15 ವರ್ಷಗಳಲ್ಲಿ ಸಾಕಷ್ಟು ಬದಲಾವಣೆಗಳಾದ ಕಾರಣ ಈ ಕೃತಿಯನ್ನು ಸಂಪೂರ್ಣವಾಗಿ ಪರಿಷ್ಕಾರ ಮಾಡಲಾಗಿದೆ. ಜೊತೆಗೆ ಮೊದಲ 6 ಹೊಸ ಅಧ್ಯಾಯಗಳನ್ನು ಸೇರಿಸಲಾಗಿದ್ದು ಇದರಲ್ಲಿ ಅಂಬೇಡ್ಕರ್ ಬಗ್ಗೆ ಒಂದು ಸಂಕ್ಷಿಪ್ತ ಚಿತ್ರಣವನ್ನು ನೀಡಲಾಗಿದೆ. ಕಾರಣ,

ಆಧುನಿಕ ಭಾರತದಲ್ಲಿ ಮುಖ್ಯವಾಗಿ ಜಾತಿ, ಅಸ್ಪೃಶ್ಯತೆಯ ಸಂಘರ್ಷ ಪ್ರಾರಂಭವಾಗಿದ್ದೇ ಅಂಬೇಡ್ಕರ್ ಅವರಿಂದ.

ನವಕರ್ನಾಟಕ ಪಬ್ಲಿಕೇಷನ್ಸ್‌ನ ಮುಖ್ಯಸ್ಥರಾಗಿದ್ದ ಶ್ರೀ ಆರ್. ಎಸ್. ರಾಜಾರಾಮ್ ಅವರು ಈ ಪುಸ್ತಕಕ್ಕೆ ಮಾಹಿತಿಯನ್ನು ಕಲೆಹಾಕಲು ತಮ್ಮ ಉಪಯುಕ್ತ ಸಲಹೆ ಮತ್ತು ಸಹಕಾರವನ್ನು ನೀಡಿದ್ದಾರೆ. ಈ ಕೃತಿಯನ್ನು ಓದಿ ಸಲಹೆಗಳನ್ನು ಕೊಟ್ಟಿದ್ದಲ್ಲದೆ ಕೃತಿಗೆ ಒಂದು ಮೌಲ್ಯಯುತವಾದ ಮುನ್ನುಡಿಯನ್ನು ಬರೆದುಕೊಟ್ಟು ಸಹಕರಿಸಿದ ಈ ನಾಡಿನ ಅಪರೂಪದ ಬೌದ್ಧಿಕ ಚಿಂತಕರಾಗಿರುವ ಡಾ॥ ಜಿ. ರಾಮಕೃಷ್ಣ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ನವಕರ್ನಾಟಕ ಪಬ್ಲಿಕೇಷನ್ಸ್‌ನಿಂದಲೇ ಈ ಹೊಸ ಪುಸ್ತಕ ಹೊರಬರಬೇಕು ಎನ್ನುವ ನನ್ನ ಆಸೆಯನ್ನು ರಾಜಾರಾಮ್ ಅವರು ಮತ್ತೆ ಈಡೇರಿಸಿದ್ದಾರೆ. ನವಕರ್ನಾಟಕದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ ಉಡುಪ ಮತ್ತು ಅವರ ಬಳಗಕ್ಕೆ ಹಾಗೂ ಅಂದವಾದ ಮುಖಪುಟವನ್ನು ರಚಿಸಿದ ಕಲಾವಿದ ಶ್ರೀ ಸೃಜನ್ ಅವರಿಗೆ ನಾನು ಆಭಾರಿಯಾಗಿದ್ದೇನೆ.

ಬೆಂಗಳೂರು, 2018

**ಡಾ. ಎಂ. ವೆಂಕಟಸ್ವಾಮಿ**
alemarimvs@gmail.com
(M) 9449041334

# ಪರಿವಿಡಿ



ಒಂದು ಸಮಾಜವನ್ನು ಅದರ ಕೆಡುಕುಗಳಿಂದ ಮುಕ್ತಗೊಳಿಸಬಹುದೆಂದು, ದಮನಿತ ವರ್ಗಗಳನ್ನು ಸಮಾನತೆಯ ಪಾತಳಿಗೆ ತರಬಹುದೆಂದು ನಾನು ಬಹುಕಾಲದವರೆಗೂ ಎಣಿಸಿದ್ದೆ. ಈ ಆಶಯವೇ ಮಹಾಡ್ ಕೆರೆಯ ಸತ್ಯಾಗ್ರಹವನ್ನು, ನಾಸಿಕ್‌ನ ದೇವಾಲಯ ಪ್ರವೇಶ ಚಳುವಳಿಯನ್ನು ಪ್ರೇರೇಪಿಸಿದ್ದು. ಈ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ನಾವು ಮನುಸ್ಮೃತಿಯನ್ನು ಸುಟ್ಟಿದ್ದು. ಸಾಮೂಹಿಕ ಜನಿವಾರ ಕಾರ್ಯಕ್ರಮಗಳನ್ನು ಆಯೋಜಿಸಿದ್ದು. ಈ ಅನುಭವ ನನಗೆ ಸಾಕಷ್ಟು ಕಲಿಸಿದೆ. ಇಂದು ನನಗೆ ಖಚಿತವಾಗಿ ಮನದಟ್ಟಾಗಿರುವ ಅಂಶವೆಂದರೆ, ದಮನಿತ ವರ್ಗಗಳಿಗೆ ಹಿಂದೂಗಳ ಮಧ್ಯೆ ಸಮಾನತೆ ಸಿಗುವುದು ಸಾಧ್ಯವೇ ಇಲ್ಲ. ಏಕೆಂದರೆ ಅಸಮಾನತೆಯ ಮೇಲೆಯೇ ಹಿಂಧೂ ಧರ್ಮದ ತಳಹದಿ ನಿಂತಿದೆ. ಹಿಂದೂ ಧರ್ಮದ ಭಾಗವಾಗುವುದನ್ನು ಇನ್ನು ನಾನು ಬಯಸುವುದಿಲ್ಲ.

**(ಅಂಬೇಡ್ಕರ್ – ದಿ ಬಾಂಬೆ ಸೆಂಟನಲ್ – ಏಪ್ರಿಲ್ 28, 1942)**

## ಅಧ್ಯಾಯ–1

ಬೇಡಿದವರಿಗೆ ವರವನ್ನು ನೀಡುವ ಯಾವ ಅಗೋಚರ ಶಕ್ತಿಯೂ ಜಗತ್ತಿನಲ್ಲಿಲ್ಲ. ಯಾರೇ ವ್ಯಕ್ತಿಯಾಗಲಿ ತಾನೇ ಪರಿಶ್ರಮದಿಂದ ಗಳಿಸಬೇಕು

–ಬುದ್ಧ.

# ಅಂಬೇಡ್ಕರ್ ಎಂಬ ಮಹಾಚೈತನ್ಯ

ಒಬ್ಬ ಮನುಷ್ಯ ತನ್ನ ಜೀವಿತಾವಧಿಯಲ್ಲಿ ಮಾನವ ಕುಲಕ್ಕೆ ಏನೆಲ್ಲ ಮಾಡಬಹುದು ಎನ್ನುವುದಕ್ಕೆ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಒಂದು ಜ್ವಲಂತ ಸಾಕ್ಷಿಯಾಗಿದ್ದಾರೆ. ಡಾ. ಭೀಮಾರಾವ್ ರಾಮ್‌ಜೀ ಅಂಬೇಡ್ಕರ್ (14.04.1891–06.12.1956) ಅವರನ್ನು ಪ್ರೀತಿಯಿಂದ ಜನಸಮುದಾಯಗಳು ಬಾಬಾಸಾಹೇಬ್ ಎಂದೇ ಕರೆಯುತ್ತವೆ. ಅಂಬೇಡ್ಕರ್, ಆಧುನಿಕ ಬೌದ್ಧ ಚಳುವಳಿಯ ಬಹುದೊಡ್ಡ ಸ್ಫೂರ್ತಿ; ದಲಿತರು/ ಅಸ್ಪೃಶ್ಯರು, ಮಹಿಳೆಯರು ಮತ್ತು ಕಾರ್ಮಿಕರ ಪರವಾಗಿ ಹೋರಾಟ ನಡೆಸಿದವರು. ಹಾಗೆಯೇ ಭಾರತೀಯ ನ್ಯಾಯಾಧೀಶ, ಅರ್ಥಶಾಸ್ತ್ರಜ್ಞ, ರಾಜಕಾರಣಿ ಮತ್ತು ಸಮಾಜ ಸುಧಾರಕರಾಗಿ ಜೀವನಪೂರ್ತಿ ದುಡಿದವರು. ಅಂಬೇಡ್ಕರ್ ದೇಶದ ಮೊದಲ ಕೇಂದ್ರ ಕಾನೂನು ಸಚಿವರು ಮತ್ತು ಭಾರತೀಯ ಸಂವಿಧಾನದ ಪ್ರಬಲ ವಾಸ್ತುಶಿಲ್ಪಿಯೂ ಆಗಿದ್ದಾರೆ. ಅಂಬೇಡ್ಕರ್ ಅವರು ಕಾನೂನು ಪದವಿಯ ಜೊತೆಗೆ 'ಕೊಲಂಬಿಯಾ' ಮತ್ತು 'ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್' ಕಾಲೇಜುಗಳಲ್ಲಿ ಹಲವು ಡಾಕ್ಟರೇಟ್‌ಗಳನ್ನು ಗಳಿಸಿದರು. ಕಾನೂನು, ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರ ಅಧ್ಯಯನ ಮಾಡಿ ಅದ್ಭುತ ವಿದ್ವಾಂಸತೆಯನ್ನು ಪಡೆದುಕೊಂಡರು. ಅಂಬೇಡ್ಕರ್ ಅವರಿಗೆ ಮರಣೋತ್ತರವಾಗಿ 'ಭಾರತರತ್ನ' ಪ್ರಶಸ್ತಿ ನೀಡಲಾಯಿತು.

## ಅಂಬೇಡ್ಕರ್ ಜನ್ಮ ತಳೆದಿದ್ದು

ಅಂಬೇಡ್ಕರ್ ಹುಟ್ಟಿದ್ದು ಸಣ್ಣ ಬ್ರಿಟಿಷರ ಮಿಲಿಟರಿ ಕಂಟೋನ್ಮೆಂಟ್ ನಗರವಾದ 'ಮೋಹ್'ನಲ್ಲಿ (ಇಂದಿನ ಮಧ್ಯಪ್ರದೇಶದಲ್ಲಿದೆ). ಅಲ್ಲಿ ಸುಬೇದಾರ್ ರ್‍ಯಾಂಕಿನ ಮಿಲಿಟರಿ ಅಧಿಕಾರಿಯಾಗಿದ್ದ ರಾಮ್‌ಜೀ ಮಾಲೋಜಿ ಸಕ್ಪಾಲ್ ಮತ್ತು ಭೀಮಾಬಾಯಿ ಮುರ್ಬಾಡ್ಕರ್ ಸಕ್ಪಾಲರಿಗೆ ಅಂಬೇಡ್ಕರ್ 14ನೇ ಮತ್ತು ಕೊನೆಯ ಮಗುವಾಗಿ ಜನ್ಮಿಸಿದರು. ಅವರ ಪೂರ್ವಜರು ಮೂಲವಾಗಿ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆ, ಮಂದನ್‌ಘರ್ ತಾಲ್ಲೂಕಿನ ಅಂಬೇವಾಡಿ ಹಳ್ಳಿಯವರು. ಇವರದು ಮರಾಠಿ ಹಿನ್ನೆಲೆಯ ಮಹಾರ್ ಜಾತಿಗೆ ಸೇರಿದ ಸಾಮಾಜಿಕ ಮತ್ತು ಆರ್ಥಿಕ ತಾರತಮ್ಯಕ್ಕೆ

ಒಳಗಾದ ಅಸ್ಪೃಶ್ಯ ಕುಟುಂಬ. ಅಂಬೇಡ್ಕರರ ಪೂರ್ವಜರು ಬ್ರಿಟಿಷರ 'ಈಸ್ಟ್ ಇಂಡಿಯಾ ಕಂಪೆನಿ'ಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅಂಬೇಡ್ಕರ್ ಅವರ ತಂದೆ, ತಮ್ಮ ಮಕ್ಕಳಿಗೆ ಸರಕಾರಿ ಶಾಲೆಗಳಲ್ಲಿ ಅಸ್ಪೃಶ್ಯರು ಎನ್ನುವ ಕಾರಣಕ್ಕೆ ತಾರತಮ್ಯ ತೋರುತ್ತಿದ್ದಾರೆ ಎಂದು ಬ್ರಿಟಿಷರನ್ನು ಒತ್ತಾಯ ಮಾಡಿ ತಮ್ಮ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಗಮನ ಸೆಳೆಯಲು ಸಫಲರಾಗಿದ್ದರು. ಇಲ್ಲಿನ ಮಿಲಿಟರಿ ಪ್ರಾಥಮಿಕ ಶಾಲೆಯಲ್ಲಿ ಅಂಬೇಡ್ಕರ್‌ರನ್ನು ಕೋಣೆಯ ಹೊರಗೆ ಕೂರಿಸಿ, ನೀರು ಕುಡಿಯಲೂ ಬಿಡುತ್ತಿರಲಿಲ್ಲ. ಶಾಲೆಯಲ್ಲಿ ಸೇವಕನಿಲ್ಲದ ದಿನ ಹುಡುಗನಿಗೆ ಕುಡಿಯಲು ನೀರೂ ಸಹ ದೊರಕುತ್ತಿರಲಿಲ್ಲ.

## ಭೀಮನನ್ನು ಗಟ್ಟಿಗೊಳಿಸಿದ ಸಂಗತಿಗಳು

ಅಂಬೇಡ್ಕರ್ ಅವರು ಮುಂಬೈಯ ಎಲ್ಫಿನ್‌ಸ್ಟನ್ ಇಂಗ್ಲಿಷ್ ಪ್ರೌಢಶಾಲೆಯಲ್ಲಿ ಓದುತ್ತಿದ್ದರೂ ಅವರ ಕುಟುಂಬ ಖಾಸಗಿ ಪಾಠ ಹೇಳಿಸಿಕೊಳ್ಳುವಷ್ಟು ಆರ್ಥಿಕ ಶಕ್ತಿಯನ್ನು ಹೊಂದಿರಲಿಲ್ಲ. ಅವರ ಕುಟುಂಬ ಇದ್ದ ಒಂದೇ ಕೋಣೆಯಲ್ಲಿ ಎಲ್ಲದರ ಜೊತೆಗೆ ವಿದ್ಯಾಭ್ಯಾಸವೂ ನಡೆಯಬೇಕಾಗಿತ್ತು. ತಂದೆ, ಅಂಬೇಡ್ಕರ್‌ಗೆ ಬೇಗನೇ ಮಲಗಲು ಹೇಳಿ ಮಲಗಿಸಿದಾಗ, ಅಂಬೇಡ್ಕರ್ ಕಾಲ ಬಳಿ ಮೇಕೆಯೊಂದು ಕಾಲುಕಾಚಿ ಮಲಗಿರುತ್ತಿತ್ತು. ಮಧ್ಯ ರಾತ್ರಿ ಎರಡು ಗಂಟೆಯವರೆಗೂ ತಂದೆ ನಿದ್ದೆ ಮಾಡದೇ ಕುಳಿತಿರುತ್ತಿದ್ದು, ಅನಂತರ ಅಂಬೇಡ್ಕರ್‌ನ್ನು ಓದಲು ಎಬ್ಬಿಸಿ ತಾವು ಮಲಗುತ್ತಿದ್ದ ಜಾಗದಲ್ಲಿ ಕುಳಿತು ಓದುವಂತೆ ಹೇಳುತ್ತಿದ್ದರು. ಸೀಮೆಣ್ಣೆ ದೀಪಕ್ಕೆ ಗ್ಲಾಸ್ ಇಲ್ಲದೆ ರಾತ್ರಿ ಮನೆ ಬಾಗಿಲು ಮುಚ್ಚುತ್ತಿದ್ದ ಕಾರಣ ಆ ದೀಪ ಭಾರೀ ಹೊಗೆ ಉಗುಳುತ್ತಿತ್ತು. ಕೆಲವೊಮ್ಮೆ ಎಣ್ಣೆ ಮುಗಿದುಹೋಗಿ ಭೀಮ ಕತ್ತಲಲ್ಲೇ ಕುಳಿತು ತೂಕಡಿಸುತ್ತಿದ್ದ. ಭೀಮನು ಓದುತ್ತಿದ್ದ ಶಾಲೆ ಇಂಗ್ಲಿಷ್ ಶಾಲೆಯಾದರೂ ಜಾತಿಯ ಪಿಡುಗು ಅವನನ್ನು ಬೆನ್ನಟ್ಟುತ್ತಲೇ ಇತ್ತು.

ಅಂಬೇಡ್ಕರ್ ವಿದ್ಯಾರ್ಥಿಯಾಗಿದ್ದಾಗ ನಡೆದ ಕೆಲವು ಘಟನೆಗಳು ಸನಾತನ ಹಿಂದೂ ಧರ್ಮದ ವಿರುದ್ಧ ಅವರು ದೃಢವಾಗಿ ಎದುರು ನಿಲ್ಲಲು ಕಾರಣವಾದವು. ಒಂದು ದಿನ ಗಣಿತ ಪಾಠ ನಡೆಯುತ್ತಿದ್ದಾಗ ಶಿಕ್ಷಕರು ಭೀಮನನ್ನು ಕರೆದು ಗೋಡೆಯ ಮೇಲಿದ್ದ ಕರಿ ಹಲಗೆಯ ಮೇಲೆ ಬರೆದ ಲೆಕ್ಕವನ್ನು ಬಿಡಿಸಲು ಹೇಳಿದರು. ಭೀಮ ಅತ್ತ ಹೆಜ್ಜೆ ಹಾಕುತ್ತಲೇ ತರಗತಿಯಲ್ಲಿದ್ದ ಬಹುತೇಕ ಹುಡುಗರು ಕರಿ ಹಲಗೆಯ ಕಡೆಗೆ ಓಡಿಹೋಗಿ ತಮ್ಮ ಊಟದ ಬುತ್ತಿಗಳನ್ನು ತೆಗೆದುಕೊಂಡುಬಿಟ್ಟರು. ಅನಂತರ ಅವರು ತಮ್ಮ ಊಟದ ಬುತ್ತಿಗಳು ಮೈಲಿಗೆ ಆಯಿತೆಂದು ಕರಿ ಹಲಗೆಯ ಕಡೆಗೆ ಕೋಪದಿಂದ ಎಸೆದುಬಿಟ್ಟರು. ತಮ್ಮ ಊರಿನಲ್ಲಿ ಹಿಂದೂ ಸವರ್ಣೀಯರು, ಅಸ್ಪೃಶ್ಯರ ವಿರುದ್ಧ ಹೇಗೆ ವರ್ತಿಸುತ್ತಿದ್ದರೋ ಅದೇ ರೀತಿ ಆ ವಿದ್ಯಾರ್ಥಿಗಳು ನಡೆದುಕೊಂಡಿದ್ದರು. ಈ ಘಟನೆ ಭೀಮನ ಎಳೆ ಮನಸ್ಸಿನ ಮೇಲೆ ಬರೆ ಎಳೆದಂತಾಗಿತ್ತು. ಭೀಮ ಮತ್ತು ಅವನ ಅಣ್ಣ ಸಂಸ್ಕೃತವನ್ನು ಎರಡನೇ ಭಾಷೆಯಾಗಿ ತೆಗೆದುಕೊಳ್ಳಲು ಇಚ್ಛಿಸಿದಾಗ, ಶಾಲೆಯಲ್ಲಿ ಅನುಮತಿ ಕೊಡದೆ ನಿರಾಕರಿಸಲಾಯಿತು. (ಮೂಲ–ಧನಂಜಯ ಕೀರ್; ಕನ್ನಡಕ್ಕೆ–ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು.19)

ಬೇಸಿಗೆಯ ಒಂದು ದಿನ ಭೀಮ ತನ್ನ ಅಣ್ಣ ಮತ್ತು ಇನ್ನೊಬ್ಬ ಸಂಬಂಧಿ ಹುಡುಗನೊಂದಿಗೆ ತಂದೆಯನ್ನು ನೋಡಲು 'ಗೋರೆಗಾಂವ್'ಗೆ ಹೊರಟರು. ಅವರು

'ಪಡಳಿ' ಎಂಬ ರೈಲು ನಿಲ್ದಾಣದಿಂದ 'ಮಾಸೂರ್' ಎಂಬ ಹಳ್ಳಿ ತಲುಪಿದರು. ಅಂಬೇಡ್ಕರ್ ಬರೆದ ಪತ್ರ ತಂದೆಗೆ ತಲುಪದ ಕಾರಣ ಅವರು ರೈಲು ನಿಲ್ದಾಣಕ್ಕೆ ಬಂದಿರಲಿಲ್ಲ. ಅವರು ಬಹಳ ಹೊತ್ತು ಕಾದರೂ ತಂದೆ ಬರದ ಕಾರಣ, ನಿಲ್ದಾಣದ ಅಧಿಕಾರಿಯೊಬ್ಬರ ಸಹಾಯದಿಂದ ಎತ್ತಿನ ಗಾಡಿಯನ್ನು ಬಾಡಿಗೆಗೆ ಗೊತ್ತುಪಡಿಸಿ ಪ್ರಯಾಣ ಮುಂದುವರಿಸಿದರು. ಸ್ವಲ್ಪ ದೂರ ಹೋಗುತ್ತಲೇ, ಎತ್ತಿನ ಗಾಡಿಯವನಿಗೆ ತನ್ನ ಗಾಡಿಯಲ್ಲಿ ಒಳ್ಳೆಯ ಬಟ್ಟೆ ಧರಿಸಿ ಕುಳಿತಿರುವ ಮಕ್ಕಳು ಅಸ್ಪೃಶ್ಯ ಜಾತಿಗೆ ಸೇರಿದವರೆಂಬ ವಿಷಯ ತಿಳಿದಿದ್ದೆ ಗಾಡಿಯನ್ನು ನಿಲ್ಲಿಸಿ ಅವಾಚ್ಯ ಶಬ್ದಗಳಿಂದ ಬಯ್ಯುತ್ತ ಗಾಡಿಯ ಮುಂಭಾಗವನ್ನು ಮೇಲಕ್ಕೆತ್ತಿ ಮಕ್ಕಳನ್ನು ನೆಲಕ್ಕೆ ಬೀಳಿಸಿದ. ಮತ್ತೆ ಎರಡು ಪಟ್ಟು ಹಣ ನೀಡುತ್ತೇನೆಂದು ಹೇಳಿದ್ದೆ, ಗಾಡಿಯವನು ಮಕ್ಕಳನ್ನು ಮತ್ತೆ ಗಾಡಿಯ ಮೇಲೆ ಕುಳಿತುಕೊಳ್ಳಲು ಹೇಳಿ ಗಾಡಿಯ ಹಿಂದೆ ದೂರದಲ್ಲಿ ನಡೆದುಬರುತ್ತ ಊರು ತಲುಪಿದ. ಊರು ತಲುಪಿದ ಮೇಲೆ ಗಾಡಿಯನ್ನು ನೀರಿನಲ್ಲಿ ಚೆನ್ನಾಗಿ ತೊಳೆದು ಮೈಲಿಗೆಯನ್ನು ಹೋಗಲಾಡಿಸಿದ (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು.130).

ಶಾಲೆಯಲ್ಲಿ ಬ್ರಾಹ್ಮಣ ಅಧ್ಯಾಪಕರಾದ ಮಹಾದೇವ ಅಂಬೇಡ್ಕರ್ ಅವರಿಗೆ ಬಾಲಕ ಅಂಬೇಡ್ಕರ್ ಬಹಳ ನೆಚ್ಚಿನ ವಿದ್ಯಾರ್ಥಿಯಾಗಿದ್ದರು. ಅಂಬೇಡ್ಕರ್ ಅವರ ಮೂಲ ಹೆಸರು ಅಂಬಾವಾಡೇಕರ್ (ಅಂಬಾವಾಡೆ ಹಳ್ಳಿಯ ಹೆಸರಿನಿಂದ) ಆಗಿದ್ದನ್ನು ಅಧ್ಯಾಪಕರು ತನ್ನ ಹೆಸರಾದ ಅಂಬೇಡ್ಕರ್ ಅಡ್ಡ ಹೆಸರನ್ನು ಅಂಬಾವಾಡೇಕರ್ ಸ್ಥಳದಲ್ಲಿ ಸೇರಿಸಿದರು ಎನ್ನಲಾಗಿದೆ. 1897ರಲ್ಲಿ ಸಕ್ಪಾಲ್ ಕುಟುಂಬ ಮುಂಬೈಗೆ ಬಂದು ನೆಲೆಸಿತು. ಅಂಬೇಡ್ಕರ್ ಎಲ್ಫಿನ್‌ಸ್ಟನ್ ಹೈಸ್ಕೂಲಿನಲ್ಲಿ ದಾಖಲೆಯಾದರು. ಇಡೀ ಶಾಲೆಯಲ್ಲಿ ಅಸ್ಪೃಶ್ಯ ಜನಾಂಗಕ್ಕೆ ಸೇರಿದ ಒಬ್ಬನೇ ವಿದ್ಯಾರ್ಥಿ ಅಂಬೇಡ್ಕರ್ ಆಗಿದ್ದರು. 1906ರಲ್ಲಿ 17 ವರ್ಷದ ಅಂಬೇಡ್ಕರ್‌ಗೆ 9 ವರ್ಷ ವಯಸ್ಸಿನ ರಮಾಬಾಯಿಯನ್ನು ಮದುವೆ ಮಾಡಲಾಯಿತು. ಅಂಬೇಡ್ಕರ್ ಮದುವೆಗೆ ಅಗತ್ಯವಾದ ಜಾಗದ ಕೊರತೆ ಇದ್ದ ಕಾರಣ, ಅವರ ಮದುವೆಯನ್ನು ಬೈಕುಲಾ ಸಂತೆ ಮಾರ್ಕೆಟ್ ಷೆಡ್ ಒಂದರಲ್ಲಿ ರಾತ್ರಿ ಹೊತ್ತಿನಲ್ಲಿ ನಡೆಸಲಾಯಿತು. ರಮಾಬಾಯಿಯ ತಂದೆ ಬಿಕು ವಾಲಂಗ್‌ಕರ್ ದಾಪೋಲಿನಲ್ಲಿ ಕೂಲಿಯಾಗಿದ್ದು, ಆಗಲೇ ನಿಧನ ಹೊಂದಿದ್ದರು. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು.21). 1907ರಲ್ಲಿ ಅಂಬೇಡ್ಕರ್ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಪಾಸಾಗಿ ಅವರ ಕುಟುಂಬದವರು ಹರ್ಷಗೊಂಡು ಒಂದು ಔತಣ ಕೂಟ ಏರ್ಪಡಿಸಿದ್ದರು. ಈ ಸಮಯದಲ್ಲಿ ಅವರ ಕುಟುಂಬದ ಮಿತ್ರರಾದ ದಾದಾ ಕೇಲುಸ್ಕರ್ ತಾವೇ ಬರೆದ ಬುದ್ಧನ ಜೀವನ ಚರಿತ್ರೆಯನ್ನು ಉಡುಗೊರೆಯಾಗಿ ಅಂಬೇಡ್ಕರ್‌ಗೆ ನೀಡಿದರು. ಅಂಬೇಡ್ಕರರ ಮನಸ್ಸು ಅಲ್ಲಿಂದ ಬುದ್ಧನ ಕಡೆಗೆ ನಡೆಯತೊಡಗಿತು. ಅದೇ ವಿದ್ಯಾಲಯದ ಕಾಲೇಜಿನಲ್ಲಿ ಸೇರಿದಾಗಲೂ ಅಂಬೇಡ್ಕರ್ ಒಬ್ಬರೆ ಅಸ್ಪೃಶ್ಯ ವಿದ್ಯಾರ್ಥಿಯಾಗಿದ್ದರು.

## ಅಂಬೇಡ್ಕರ್ ಮತ್ತು ಅವರ ತಂದೆಯ ಕೊನೆ ಭೇಟಿ

ಅಂಬೇಡ್ಕರ್ ಪದವಿ ಮುಗಿಸಿದ ಬಳಿಕ ಬರೋಡಾ ಮಹಾರಾಜರ ಬಳಿ ಅವರಿಗೆ ಕೊಟ್ಟಿದ್ದ ಮಾತಿನಂತೆ ಕೆಲಸಕ್ಕೆ ಸೇರಿಕೊಂಡರು. ಮಗ ಇನ್ನೂ ಓದಲಿ ಎನ್ನುವುದು

ತಂದೆಯ ಆಸೆಯಾಗಿದ್ದರೂ ಓದಲು ಸಹಾಯ ಮಾಡಿದ್ದ ಮಹಾರಾಜರ ಆದೇಶವನ್ನು ಮೀರುವಂತಿರಲಿಲ್ಲ. ಬರೋಡಾ ಸೇನೆಯಲ್ಲಿ ಅಂಬೇಡ್ಕರ್ ಲೆಫ್ಟಿನೆಂಟ್ ಹುದ್ದೆಗೆ ನೇಮಕಗೊಂಡಿದ್ದರು. ಅಂಬೇಡ್ಕರ್ ಕರ್ತವ್ಯಕ್ಕೆ ಹಾಜರಾಗಿ 15 ದಿನಗಳೂ ಕಳೆದಿರಲಿಲ್ಲ, ತಂದೆಯ ತೀವ್ರ ಅನಾರೋಗ್ಯದ ಸುದ್ದಿಯನ್ನು ಸಂದೇಶ ಪತ್ರ ಊರಿನಿಂದ ಹೊತ್ತುತಂದಿತ್ತು. ಅಂಬೇಡ್ಕರ್ ಕೂಡಲೇ ಮುಂಬೈಗೆ ಹಿಂದಿರುಗಿ ಬಂದಾಗ ಅವರ ತಂದೆಯ ಆರೋಗ್ಯ ಸಂಪೂರ್ಣವಾಗಿ ಉಲ್ಬಣಿಸಿ ಕೊನೆ ಉಸಿರೆಳೆಯಲು ಅಂಬೇಡ್ಕರ್‌ಗಾಗಿ ಕಾಯುತ್ತಿದ್ದರು. ಅಂಬೇಡ್ಕರ್ ಮನೆಗೆ ಬಂದಿದ್ದೆ ಮಗನ ಮೇಲೆ ಆ ತಂದೆ ಒಂದು ದೊಡ್ಡ ಕಣ್ಣೋಟ ಬೀರಿ ಮಗನ ಬೆನ್ನನ್ನು ಒಮ್ಮೆ ಸವರಿದರು. ಮುಂದಿನ ಕೆಲವೇ ಕ್ಷಣಗಳಲ್ಲಿ ಅವರನ್ನು ಸಾವು ಸೆಳೆದುಕೊಂಡುಬಿಟ್ಟಿತು. ಅಂಬೇಡ್ಕರ್ ಭೋರಾಡಿ ಅತ್ತರು. ಆ ದಿನ ಫೆಬ್ರವರಿ 2, 1913 ಅಂಬೇಡ್ಕರ್ ಬಾಳಿನಲ್ಲಿ ಕರಾಳ ದಿನವಾಗಿತ್ತು. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪುಟ.25).

ಅಂಬೇಡ್ಕರ್ ಅವರ ಸಾಮಾಜಿಕ-ರಾಜಕೀಯ ಪ್ರಜ್ಞೆ ಆಧುನಿಕ ಭಾರತದ ಮೇಲೆ ಗಾಢವಾದ ಪರಿಣಾಮ ಬೀರಿದೆ. ಭಾರತದ ಸ್ವಾತಂತ್ರ್ಯ ನಂತರದ ಸಾಮಾಜಿಕ-ರಾಜಕೀಯ ಚಿಂತನೆ, ಅಂಬೇಡ್ಕರ್ ಅವರಿಂದ ಪ್ರಪಂಚದಾದ್ಯಂತ ಗೌರವ ಪಡೆಯಿತು ಎನ್ನುವುದು ಅನೇಕ ವಿದ್ವಾಂಸರ ಅನಿಸಿಕೆ. ಅವರ ಪ್ರಭಾವ ವಿವಿಧ ವಲಯಗಳ ಮೇಲೆ ಪರಿಣಾಮ ಬೀರಿದ್ದು, ಭಾರತದ ಇಂದಿನ ಸಾಮಾಜಿಕ-ಆರ್ಥಿಕ, ಕಾನೂನು ಮತ್ತು ವಿದ್ಯಾಭ್ಯಾಸದ ಒಟ್ಟು ಬೆಳವಣಿಗೆಗೆ ಕಾರಣವಾಗಿದೆ. ಅಂಬೇಡ್ಕರ್ ಮತ್ತು ಮಹಾತ್ಮ ಗಾಂಧೀಜಿ ಅವರ ಮಧ್ಯೆ ಪೂನಾ ಒಪ್ಪಂದದ ಕಾಲದಲ್ಲಿ ನಡೆದ ಸಾಮಾಜಿಕ ಘರ್ಷಣೆಯಿಂದ ಅಂಬೇಡ್ಕರ್ ಅವರು ಒಂದು ವೇಳೆ ಸಂಯಮ ಕಳೆದುಕೊಂಡಿದ್ದರೆ ಬಹುಶಃ ದಲಿತರಿಗಷ್ಟೇ ಅಲ್ಲದೆ, ಈ ದೇಶದ ಭವಿಷ್ಯಕ್ಕೂ ಒಳ್ಳೆಯದಾಗುತ್ತಿರಲಿಲ್ಲ. ಬಹುಶಃ ದೇಶ ಇದುವರೆಗೂ ಇಷ್ಟು ಒಗ್ಗಟ್ಟಾಗಿ, ದೃಢವಾಗಿ ಇರುತ್ತಿರಲಿಲ್ಲವೇನೋ? ಎನ್ನುವ ಮಾತಿದೆ. ಅವರು ಮುಂದೆ ನಿಂತು ರಚಿಸಿದ ಭಾರತದ ಸಂವಿಧಾನ ಪ್ರಪಂಚದ ಅನೇಕ ದೇಶಗಳಿಗೆ ಮಾದರಿಯಾಗಿದ್ದಲ್ಲದೆ ಅನೇಕ ದೇಶಗಳು ಅದರಲ್ಲಿನ ಸಾಮಾಜಿಕ ಪ್ರಜ್ಞೆ ಮತ್ತು ಹಕ್ಕುಗಳನ್ನು ಅಳವಡಿಸಿಕೊಂಡಿವೆ; ಮತ್ತು ಮೆಚ್ಚಿಕೊಂಡಿವೆ ಕೂಡ.

'ಭಾರತ ದೇಶದಿಂದ ನನ್ನ ದೇಶಕ್ಕೆ ಏನನ್ನಾದರೂ ತೆಗೆದುಕೊಂಡು ಹೋಗಬಹುದಾದರೆ ಅದು ಡಾ. ಅಂಬೇಡ್ಕರ್ ಅವರ ಶ್ರೇಷ್ಠ ಭಾರತೀಯ ಸಂವಿಧಾನ ಮಾತ್ರ' ಎಂದಿದ್ದಾರೆ ನೆಲ್ಸನ್ ಮಂಡೇಲಾ.

ಅಂಬೇಡ್ಕರ್ ಪ್ರತಿಯೊಬ್ಬ ಪ್ರಜೆಯ ವೈಯಕ್ತಿಕ ಸ್ವಾತಂತ್ರ್ಯದ ಮೇಲೆ ನಂಬಿಕೆ ಇಟ್ಟಿದ್ದರ ಜೊತೆಗೆ ಜಾತಿ ಮತ್ತು ಸಮಾಜವನ್ನು ಟೀಕಿಸುವ ಔದಾರ್ಯವನ್ನು ತೋರಿದ್ದರು. ಹಿಂದೂ ಧರ್ಮದ ಜಾತಿ ವ್ಯವಸ್ಥೆಯ ಅಡಿಪಾಯವನ್ನು ಅಲುಗಾಡಿಸಿದ ಅವರ ಮೇಲೆ ಹಿಂದೂ ಸಮುದಾಯಗಳಲ್ಲಿ ಪ್ರೀತಿ ಮತ್ತು ಆರೋಪ ಎರಡೂ ಇಂದಿಗೂ ಇವೆ. ಅವರು ತಮ್ಮ ಇಳಿ ವಯಸ್ಸಿನಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ್ದು ಭಾರತ ಮತ್ತು ವಿದೇಶಗಳಲ್ಲಿ ಬೌದ್ಧ ಧರ್ಮದ ಬಗ್ಗೆ ಆಸಕ್ತಿ ಮತ್ತು ಪುನರ್ಜೀವವನ್ನು ಹುಟ್ಟುಹಾಕಿತು. ಭಾರತದ ಮೂಲ ಜನರಾದ ನಾಗಾಗಳು ಒಂದು ಕಾಲದಲ್ಲಿ ಬೌದ್ಧ ಧರ್ಮವನ್ನು ಮಧ್ಯ ಭಾರತದಿಂದ ಪ್ರಚಾರ ಮಾಡಿದ್ದರು ಎನ್ನುವ

ಕಾರಣದಿಂದ ಅಂಬೇಡ್ಕರರು ದೇಶದ ಝೀರೋ ಮೈಲ್/ಸೆಂಟರ್ ಪಾಯಿಂಟ್ (ದೇಶದ ಮಧ್ಯ ಸ್ಥಳ) ಎನ್ನುವ ನಾಗಪುರವನ್ನು ತಮ್ಮ ದೀಕ್ಷಭೂಮಿಯಾಗಿ ಆಯ್ಕೆ ಮಾಡಿಕೊಂಡರು. ಅದು ಬೌದ್ಧ ಧರ್ಮ ಇಲ್ಲಿಂದ ಮತ್ತೊಮ್ಮೆ ದೇಶದ ಎಲ್ಲಾ ದಿಕ್ಕುಗಳಿಗೂ ಹರಡಲಿ ಎನ್ನುವ ಆಲೋಚನೆಯಿಂದ. ಇದು ಆರ್‌ಎಸ್‌ಎಸ್‌ನ ಕೇಂದ್ರ ಸ್ಥಳವೂ ಆಗಿದೆ. ಇದೇ ಆರ್‌ಎಸ್‌ಎಸ್/ಬಿಜೆಪಿಯವರು ಅಂಬೇಡ್ಕರ್ ಅವರ ಪರಿವಾಣದ ದಿನದಂದು (6ನೇ ಡಿಸೆಂಬರ್) ಅಯೋಧ್ಯೆಯ ಬಾಬರಿ ಮಸೀದಿಯನ್ನು ಕೆಡವಿ ಭಾರತದ ಚರಿತ್ರೆಯಲ್ಲಿ ಕರಾಳ ದಿನವನ್ನಾಗಿಸಿಟ್ಟರು. ಆದರೆ ಅವರು ತಮ್ಮ ಹೆಸರಿಗೆ ತಾವೇ ಮಸಿ ಬಳಿದುಕೊಂಡರೆ ವಿನಾ ಅಂಬೇಡ್ಕರ್ ಅವರ ಚಿಂತನೆಗಳನ್ನಾಗಲಿ, ದಲಿತರ ಆಲೋಚನೆ/ಆಂದೋಲನಗಳನ್ನಾಗಲಿ ಹತ್ತಿಕ್ಕಲು ಸಾಧ್ಯವಾಗಲಿಲ್ಲ.

## ಅಂಬೇಡ್ಕರರಿಗೆ ಅಪಘಾತ

ಚಾಳಿಸ್‌ಗಾಂವ್‌ನ ಮಹಾರ್‌ವಾಡಾ ತಲುಪಲು ಅಂಬೇಡ್ಕರ್ ರೈಲಿನಲ್ಲಿ ಒಂದು ನಿಲ್ದಾಣ ತಲುಪುತ್ತಾರೆ. ಆ ಹಳ್ಳಿಯ ಮಹಾರರು ಅವರಿಗಾಗಿ ಮಧ್ಯಾಹ್ನದಿಂದಲೇ ಕಾದು ಕುಳಿತಿರುತ್ತಾರೆ. ಅಂಬೇಡ್ಕರ್ ಬಂದಿದ್ದೇ ಅವರನ್ನು ಒಂದು ಟಾಂಗಾದಲ್ಲಿ ಕೂರಿಸಿ, ಅವರಿಗಿಂತ ಮುಂಚೆ ಊರು ತಲುಪಲು ಕತ್ತಲಲ್ಲಿ ಎಲ್ಲರೂ ಕಾಲು ನಡಿಗೆಯಲ್ಲಿ ಹೊರಟುಹೋಗುತ್ತಾರೆ. ಅಂಬೇಡ್ಕರ್ ಅವರನ್ನು ಟಾಂಗಾದಲ್ಲಿ ಕೂರಿಸಿಕೊಂಡು ಹೊರಟ ಟಾಂಗಾವಾಲಾ ಒಂದು ನದಿಯನ್ನು ದಾಟುವ ಸಮಯದಲ್ಲಿ ಕತ್ತಲಲ್ಲಿ ಟಾಂಗಾ ಉರುಳಿ ಬೀಳುತ್ತದೆ. ಅಂಬೇಡ್ಕರ್ ತಲೆಗೆ ಗಾಯಗಳಾಗಿ ಒಂದು ಕಾಲು ಮುರಿದೇ ಹೋಗುತ್ತದೆ. ವಿಷಯ ತಿಳಿದ ಮಹಾರರ ಮಹಿಳೆಯರು ಮಕ್ಕಳಾದಿಯಾಗಿ ಬಂದು ಗೋಳಾಡುತ್ತ ಅವರನ್ನು ಊರಿಗೆ ಸಾಗಿಸುತ್ತಾರೆ. ಅನಂತರ ಅವರು ಎಷ್ಟೋ ದಿನಗಳ ಕಾಲ ಹಾಸಿಗೆ ಹಿಡಿಯಬೇಕಾಗುತ್ತದೆ.

ಅಂಬೇಡ್ಕರರು ಈ ವಿಷಯದ ಮೇಲೆ ಬಹಳ ತನಿಖೆ ನಡೆಸಿದ ಮೇಲೆ ಗೊತ್ತಾದ ಸಂಗತಿಯನ್ನು ಹೀಗೆ ದಾಖಲಿಸಿದ್ದಾರೆ: "ರೈಲ್ವೆ ಸ್ಟೇಶನ್‌ನಿಂದ ನನ್ನನ್ನು ಮಹಾರ್‌ವಾಡಾಕ್ಕೆ ಕರೆದೊಯ್ಯಲು ತಡವಾದುದ್ದಕ್ಕೆ ಕಾರಣ, ಯಾವೊಬ್ಬ ಟಾಂಗಾವಾಲಾ ಕೂಡ ನನ್ನಂಥ ಅಸ್ಪೃಶ್ಯ ಪ್ರಯಾಣಿಕನನ್ನು ತನ್ನ ಟಾಂಗಾದಲ್ಲಿ ಕರೆದೊಯ್ಯಲು ಸಿದ್ಧನಿರಲಿಲ್ಲ. ಅದು ಅವನ ಘನತೆಗೆ ಕುಂದು ತರುವುದೆಂದು ಭಾವಿಸಿದ್ದನು. ಆದರೆ ಮಹಾರರು ನನ್ನನ್ನು ತಮ್ಮ ಓಣಿಗೆ ಕಾಲ್ನಡಿಗೆಯಲ್ಲಿ ಕರೆದುಕೊಂಡು ಹೋಗಲು ಬಯಸಲಿಲ್ಲ. ಅದು ಅವರ ಸ್ವಾಭಿಮಾನಕ್ಕೆ ಧಕ್ಕೆಯುಂಟುಮಾಡುವ ವಿಷಯವಾಗಿತ್ತು. ಹಾಗಾಗಿ ಟಾಂಗಾವಾಲಾ ಮತ್ತು ಮಹಾರರ ನಡುವೆ ಒಂದು ಸಂಧಾನವೇರ್ಪಟ್ಟಿತ್ತು. ಅದರ ಪ್ರಕಾರ ಟಾಂಗಾವಾಲಾ ತನ್ನ ಟಾಂಗಾವನ್ನು ಬಾಡಿಗೆಗೆ ಕೊಡಲು ಸಿದ್ಧನಾಗಿದ್ದನೇ ಹೊರತು, ಅದನ್ನು ತಾನೇ ನಡೆಸಲು ತಯಾರಿರಲಿಲ್ಲ. ಬೇಕಿದ್ದರೆ, ಮಹಾರರು ಟಾಂಗಾ ತೆಗೆದುಕೊಂಡು ಹೋಗಿ ಅದನ್ನು ನಡೆಸಲು ಬೇರೆ ಯಾರನ್ನಾದರೂ ನೇಮಿಸಿಕೊಳ್ಳಬಹುದಾಗಿತ್ತು. ಮಹಾರರಿಗೆ ಇದು ಒಪ್ಪಿಗೆಯಾಯಿತು. ಆದರೆ ತಮ್ಮ ಸ್ವಾಭಿಮಾನ ಹಾಗೂ ಆತ್ಮಘನತೆಗಿಂತಲೂ ಆ ಟಾಂಗಾದಲ್ಲಿ ಪ್ರಯಾಣಿಸಲಿದ್ದ ಪ್ರಯಾಣಿಕನ ಸುರಕ್ಷತೆ ಹೆಚ್ಚು ಮಹತ್ವದ್ದು ಎಂಬುದನ್ನು ಮರೆತಿದ್ದರು. ಸುರಕ್ಷತೆಯ ಬಗ್ಗೆ

ಅವರೇನಾದರೂ ಹೆಚ್ಚಿಗೆ ಚಿಂತಿಸಿದ್ದರೆ, ನನ್ನನ್ನು ಬಹು ಕಾಳಜಿಯಿಂದ ಗುರಿ ತಲುಪಿಸಬಲ್ಲ ಟಾಂಗಾವಾಲಾನನ್ನು ಹುಡುಕಲು ಯತ್ನಿಸಬಹುದಾಗಿತ್ತು.

"...ನಿಜವೆಂದರೆ ಮಹಾರ್‌ರಲ್ಲಿ ಯಾರೊಬ್ಬರಿಗೂ ಟಾಂಗಾ ಚಲಿಸಲು ಬರುತ್ತಿರಲಿಲ್ಲ. ಯಾಕೆಂದರೆ ಅದು ಅವರ ವೃತ್ತಿಯಾಗಿರಲಿಲ್ಲ. ಹಾಗಾಗಿ, ತಮ್ಮಲ್ಲಿಯೇ ಯಾರೋ ಒಬ್ಬನನ್ನು ಹಿಡಿದು ಆ ಟಾಂಗಾ ಚಲಾಯಿಸುವ ಕೆಲಸವನ್ನು ಅವನಿಗೆ ಒಪ್ಪಿಸಿದ್ದರು. ಆ ವ್ಯಕ್ತಿ ಅದರಲ್ಲೇನು ಮಹಾ ಎಂದು ಭಾವಿಸಿದ್ದೇ ಕುದುರೆಯ ಲಗಾಮನ್ನು ಕೈಗೆತ್ತಿ ಕೊಂಡಿದ್ದನು. ಆದರೆ ಅವನು ಕುದುರೆ ಚಲಿಸುತ್ತಿದ್ದಂತೆಯೇ ತನ್ನ ಹೊಣೆಗಾರಿಕೆಯ ಭಾರದ ಅರಿವಾಗಿ ಭೀತನಾದನು. ಅಳುಕುತ್ತಲೇ ಚಲಾಯಿಸತೊಡಗಿದ. ಟಾಂಗಾ ಅವನ ನಿಯಂತ್ರಣ ತಪ್ಪಿತು. ಅಥವಾ ಭೀತಿಯಿಂದ ತತ್ತರಿಸಿದ ಅವನು ನಿಯಂತ್ರಿಸುವ ಯತ್ನವನ್ನೇ ಕೈಬಿಟ್ಟಿದ್ದನು. ತನ್ನ ಘನತೆಯನ್ನು ಕಾಪಾಡುವ ಭರದಲ್ಲಿ ಚಾಳಿಸ್‌ಗಾಂವ್‌ನ ಮಹಾರರು ನನ್ನ ಜೀವನವನ್ನೇ ಅಪಾಯಕ್ಕೆ ಒಡ್ಡಿದ್ದರು. ಒಬ್ಬ ಮಾಮೂಲಿ ಹಿಂದೂ ಟಾಂಗಾವಾಲಾ, ಕನಿಷ್ಠ ಕೂಲಿ ಆಳಿನ ಸ್ಥಿತಿಯಲ್ಲಿದ್ದರೂ, ಒಬ್ಬ ಬ್ಯಾರಿಸ್ಟರ್ ಆ್ಯಟ್ ಲಾ ಪದವೀಧರನಷ್ಟು ಉಚ್ಚ ಸ್ಥಾನಮಾನದ ಅಸ್ಪೃಶ್ಯನಿಗಿಂತಲೂ ಶ್ರೇಷ್ಠನೆಂದೂ, ಹೆಚ್ಚು ಘನವಂತನೆಂದೂ ಭಾವಿಸುತ್ತಾನೆ ಎಂಬುದು ನನ್ನ ಅರಿವಿಗೆ ಬಂದಿದ್ದು ಆಗಲೇ." (ನಾನಕ್‌ಚಂದ್ ರತ್ತು (ಕನ್ನಡದಲ್ಲಿ ರಾಹು), ಅಂಬೇಡ್ಕರ್: ಸ್ಮೃತಿ–ಸಂಸ್ಕೃತಿ, ಸುಮೇಧ ಪ್ರಕಾಶನ, ಕಲಬುರ್ಗಿ, ಪುಟ.17–18).

## 20ನೇ ಶತಮಾನದ ದೈತ್ಯ ಪ್ರತಿಭೆ

ಹಿಸ್ಟರಿ–ಟಿವಿ.18 ಮತ್ತು ಸಿಎನ್‌ಎನ್/ಐಬಿಎನ್ ಆಯೋಜಿಸಿದ್ದ 2012ನೇ ವರ್ಷದ ಮತದಾನದಲ್ಲಿ ಅಂಬೇಡ್ಕರ್ ದೇಶದ ಮಹಾನ್ ವ್ಯಕ್ತಿಯಾಗಿ ಆಯ್ಕೆಯಾಗಿದ್ದರು. ಅವರಿಗೆ 20 ದಶಲಕ್ಷ ಮತಗಳು ಬಿದ್ದಿದ್ದವು. ಪ್ರಖ್ಯಾತ ಚರಿತ್ರೆಕಾರ ನರೇಂದ್ರ ಜಾಧವ್, 'ಅಂಬೇಡ್ಕರ್ ಎಲ್ಲಾ ಕಾಲಕ್ಕೂ ಅತ್ಯಧಿಕ ಶಿಕ್ಷಣ ಹೊಂದಿದ ಭಾರತದ ಬಹುದೊಡ್ಡ ಅರ್ಥಶಾಸ್ತ್ರಜ್ಞರು' ಎಂದರೆ, ಅಮರ್ತ್ಯಸೇನ್ 'ಅಂಬೇಡ್ಕರ್ ನನ್ನ ಅರ್ಥಶಾಸ್ತ್ರದ ಪಿತಾಮಹ, ಅರ್ಥಶಾಸ್ತ್ರಕ್ಕೆ ಅವರ ಕೊಡುಗೆ ಅದ್ಭುತ ಮತ್ತು ಶಾಶ್ವತವಾದದ್ದು' ಎನ್ನುತ್ತಾರೆ. ವಿವಾದಾತ್ಮಕ ಮತ್ತು ಆಧ್ಯಾತ್ಮಿಕ ಗುರು ಓಶೋ ಹೀಗೆ ಹೇಳುತ್ತಾರೆ, 'ಹಿಂದೂ ಕಾನೂನುಗಳ ಪ್ರಕಾರ ಅತ್ಯಂತ ಕೆಳ ಜಾತಿಗಳಲ್ಲಿ ಹುಟ್ಟುವವರು ಶೂದ್ರರು ಮತ್ತು ಅಸ್ಪೃಶ್ಯರು, ಅಂದರೆ ಬುದ್ಧಿಯಿಲ್ಲದ ಹೆಡ್ಡರು. ಭಾರತಕ್ಕೆ ಸ್ವಾತಂತ್ರ್ಯ ದೊರಕಿದಾಗ ಸಂವಿಧಾನ ರಚಿಸಿದವರು ಡಾ. ಬಾಬಾಸಾಹೇಬ್ ಅಂಬೇಡ್ಕರ್, ಒಬ್ಬ ಶೂದ್ರ. ಆಧುನಿಕ ಭಾರತದಲ್ಲಿ ಅವರಿಗೆ ಸರಿಸಮಾನರಾದ ಬುದ್ಧಿವಂತರು ಯಾರೂ ಇಲ್ಲದಾಗಿದೆ – ಇದು ಹೇಗೆ ಸಂಭವಿಸಿತು. ಅಂದರೆ ಹಿಂದೂ ಕಾನೂನು ತಪ್ಪಾಗಿದೆಯೇ?' ಎಂದು ಪ್ರಶ್ನಿಸುತ್ತಾರೆ. ಇನ್ನು ಅಮೆರಿಕಾದ ಅಧ್ಯಕ್ಷ ಒಬಾಮಾ 2010ರಲ್ಲಿ ಭಾರತದ ಸಂಸತ್ತಿನಲ್ಲಿ ಮಾತನಾಡುತ್ತ, 'ದಲಿತ ನಾಯಕ ಡಾ. ಅಂಬೇಡ್ಕರ್ ಸಂವಿಧಾನ ಶಿಲ್ಪಿ, ಮಾನವ ಹಕ್ಕುಗಳ ಮಹಾನ್ ಚಾಂಪಿಯನ್' ಎಂದರು.

ಅಂಬೇಡ್ಕರ್ ಅವರ ರಾಜಕೀಯ, ತತ್ವಜ್ಞಾನ, ಆರ್ಥಿಕ ಜ್ಞಾನ ಸಂಘಟನೆಯ ಬೆಳಲು ಭಾರತವಲ್ಲದೇ ವಿದೇಶಗಳಲ್ಲೂ ಹರಡಿಕೊಂಡಿದೆ. ಭಾರತದ ಬೌದ್ಧರು

ಅವರನ್ನು 'ಬೋಧೀತತ್ವ' ಎಂದೇ ಕರೆಯುತ್ತಾರೆ. ಅವರು ದೀಕ್ಷೆ ತೆಗೆದುಕೊಂಡ ನಾಗಪುರದ 'ದೀಕ್ಷಭೂಮಿ' ಮತ್ತು ಅವರನ್ನು ಅಂತ್ಯಕ್ರಿಯೆ ಮಾಡಿದ ಮುಂಬೈನ 'ಚೈತ್ಯಭೂಮಿ'ಯಲ್ಲಿ ಇಂದಿಗೂ ಸಾವಿರಾರು ಜನರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುತ್ತ / ದೀಕ್ಷೆ ತೆಗೆದುಕೊಳ್ಳುತ್ತಲೇ ಇದ್ದಾರೆ. 1990ರ ದಶಕದಲ್ಲಿ ಹಂಗೇರಿಯಾದ ರೋಮನಿ ಜನರು, ಅವರ ಬದುಕನ್ನು ಭಾರತದ ದಲಿತರಿಗೆ ಹೋಲಿಸಿಕೊಂಡು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದರು. ಭಾರತದ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು ಹೋದ ಕಡೆಯಲ್ಲೆಲ್ಲ 'ಬಾಬಾಸಾಹೇಬ್ ಅಂಬೇಡ್ಕರ್ ಅವರ ಚಮತ್ಕಾರದಿಂದ ಟೀ ಮಾರುವ ಒಬ್ಬ ಸಾಧಾರಣ ಹುಡುಗ ಈ ದೇಶದ ಪ್ರಧಾನಿಯಾಗಲು ಸಾಧ್ಯವಾಯಿತು' ಎಂದು ಹೇಳುತ್ತಿರುವುದು ಈ ದೇಶಕ್ಕೆ ಶೋಭೆ ತರುವ ಮಾತಾಗಿದೆ.

## ಹಿಂದೂ ಧರ್ಮದ ಅವಹೇಳನೆ

ಅಂಬೇಡ್ಕರ್, ಬರೋಡ ಮಹಾರಾಜರ ಸಹಾಯ ಪಡೆದು ಬ್ರಿಟನ್ ಮತ್ತು ಅಮೆರಿಕಾಗೆ ಹೋಗಿ ಉನ್ನತ ವ್ಯಾಸಂಗ ಮಾಡಿಬಂದರು. ಆ ದೇಶಗಳಲ್ಲೂ ವರ್ಣಭೇದ ನೀತಿಯ ತಾರತಮ್ಯಗಳನ್ನು ನೋಡಿ, ಅನುಭವಿಸಿದರು. ಉನ್ನತ ವ್ಯಾಸಂಗ ಮಾಡಿದ ಅಂಬೇಡ್ಕರ್ ಅವರನ್ನು ಬರೋಡ ಮಹಾರಾಜರು, ತಮ್ಮ ರಾಜ್ಯಾಡಳಿತ ಸೇವೆಗೆ ಕರೆದಾಗ ಅಂಬೇಡ್ಕರ್ ಸಂತೋಷದಿಂದ ಸ್ವದೇಶಕ್ಕೆ ಮರಳಿದರು. ಮರಳಿ ಬಂದ ಅವರು, ತಾನು ಉನ್ನತ ವ್ಯಾಸಂಗ ಪಡೆದು ಸುಶಿಕ್ಷಿತನಾಗಿರುವ ಕಾರಣ ಸ್ವದೇಶದಲ್ಲಿ ತನಗೆ ದಕ್ಕಬೇಕಾದ ಮನ್ನಣೆ ದೊರಕುತ್ತದೆ ಎಂದುಕೊಂಡಿದ್ದರು. ಆದರೆ ಅವರಿಗೆ ವಾಸಮಾಡಲು ವಸತಿಯನ್ನು ಹುಡುಕಿಕೊಳ್ಳುವ ಪರಿಸ್ಥಿತಿ ಎದುರಾಯಿತು. ಅಂಥ ಉನ್ನತ ವ್ಯಾಸಂಗ ಹೊಂದಿದ್ದ ಒಬ್ಬ ವ್ಯಕ್ತಿ 15 ದಿನಗಳ ಕಾಲ, ಸಾಮಾನ್ಯ ಮನುಷ್ಯನೊಬ್ಬ ಬೇರೆ ದೇಶ/ಬೇರೆ ಊರಿನಲ್ಲಿ ತನ್ನ ಅಸ್ತಿತ್ವಕ್ಕಾಗಿ ಬಳಸಬಹುದಾದ ಎಲ್ಲಾ ಚಾಲಾಕಿತನ ಬಳಸಿದ ನಂತರವೂ ಒಂದು ಕೊಠಡಿಯೂ ದೊರಕಲಿಲ್ಲ. ಕಾರಣ ಅಸ್ಪೃಶ್ಯನಾಗಿದ್ದು, ವಿಧಿಯಿಲ್ಲದೆ ಮಹಾರಾಜರು ನೀಡಿದ ಹುದ್ದೆಯನ್ನು ತ್ಯಜಿಸಿ ಮುಂಬೈ ಶಹರಿನಲ್ಲಿ ಬದುಕು ಸಾಗಿಸಲು ವಾಪಸ್ ಬಂದುಬಿಟ್ಟರು. ಕಹಿ ಅನುಭವ ನೀಡಿದ ಈ ವಿದ್ಯಮಾನ ನಡೆದ ಐದಾರು ವರ್ಷಗಳ ಅಂತರದಲ್ಲಿ ತನ್ನ ಕಹಿ ಅನುಭವಗಳನ್ನು ಒಂದೊಂದಾಗಿ ನೆನಪಿಸಿಕೊಳ್ಳುತ್ತಾ 'ವೇಟಿಂಗ್ ಫಾರ್ ವೀಸಾ' ಎಂಬ ಅಸ್ಪೃಶ್ಯತೆಯೊಂದಿಗಿನ ಅಪಮಾನ ಜೀವನದ ಆರು ಕಥೆಗಳನ್ನು ಬರೆದರು. ಬರೋಡ ತ್ಯಜಿಸಿ ಮುಂಬೈಗೆ ರೈಲು ಹಿಡಿಯುವುದಕ್ಕೆ ಅವರಿಗೆ ಇದ್ದ ಎರಡು ತಾಸುಗಳ ಬಿಡುವಿನಲ್ಲಿ, ಒಂದು ಉದ್ಯಾನವನದಲ್ಲಿ ಒಂಟಿಯಾಗಿ ಕುಳಿತುಕೊಂಡು ಮಗುವಿನ ಹಾಗೆ ಬಿಕ್ಕಿಬಿಕ್ಕಿ ಅತ್ತೆ ಎಂದು ಬರೆದುಕೊಂಡಿದ್ದಾರೆ.

* * *

ಅಂಬೇಡ್ಕರ್ ತನ್ನ 30 ಗೆಳೆಯರ ಜೊತೆಗೆ ಒಮ್ಮೆ ದೌಲತಾಬಾದ್‌ನ ಕೋಟೆ ನೋಡಲು ಹೋಗುತ್ತಾರೆ. ಕೋಟೆಯ ಮುಖ್ಯ ಬಾಗಿಲು ಹೊರಗಡೆ ಇದ್ದ ಒಂದು ಸಣ್ಣ ನೀರಿನ ತೊಟ್ಟಿಯಲ್ಲಿ ನೀರು ತೆಗೆದುಕೊಂಡು ಅವರೆಲ್ಲರೂ ಕಲ್ಲುಹಾಸಿನ ರಸ್ತೆಯ ಮೇಲೆ

ಕೈಕಾಲುಗಳನ್ನು ತೊಳೆದುಕೊಂಡು ಕೋಟೆಯ ಬಾಗಿಲು ಕಡೆಗೆ ನಡೆದು ಬರುತ್ತಾರೆ. ಒಳಗಡೆ ಗನ್ಸ್ ಹಿಡಿದುಕೊಂಡಿದ್ದ ಸೈನಿಕರು ಕಾವಲು ನಿಂತಿದ್ದು, ಕಾವಲುಗಾರರು ಪರವಾನಗಿಗಳನ್ನು ನೋಡಿ ಒಳಗೆ ಬಿಡುತ್ತಿದ್ದಂತೆ, ನೀಳವಾದ ಬಿಳಿದಾಡಿಯ ಮೊಹ್ಮದೀಯ ಮುದುಕನೊಬ್ಬ ಅವರ ಹಿಂದಿನಿಂದ ಅರಚುತ್ತ ಬರುತ್ತಿರುವುದು ಕಾಣಿಸಿತು. ಬರುತ್ತಿದ್ದಂತೆ 'ಥೂ... ಈ 'ಢೇಡ್' ನನ್ಮಕ್ಕಳು ತೊಟ್ಟಿಯ ನೀರನ್ನೆಲ್ಲಾ ಮೈಲಿಗೆ ಮಾಡಿಬಿಟ್ರು' ಎಂದು ಕೂಗಾಡತೊಡಗಿದ. 'ಢೇಡ್' ಎಂದರೆ ಹೊಲೆಯ ಅಸ್ಪೃಶ್ಯ ಎಂದರ್ಥ. ನೋಡುನೋಡುತ್ತಿದಂತೆಯೇ ಸುತ್ತಮುತ್ತಲಿನ ಮೊಹ್ಮದೀಯ ಮುದುಕರು, ಯುವಕರು ನಮ್ಮ ಬಳಿಗೆ ಬಂದು ಬಾಯಿಗೆ ಬಂದಂತೆ ಬೈಯಲಾರಂಭಿಸಿದರು. 'ಈ ಹೊಲೆಯರಿಗೆ ಸೊಕ್ಕು ಬಂದಿದೆ. ತಮ್ಮ ಧರ್ಮವನ್ನು ಮರೆತು ಬಿಟ್ಟಿದ್ದಾರೆ (ಅಂದರೆ ಕೆಳಜಾತಿಯವರಾದ – ದೈನ್ಯ, ಕೀಳು ಸ್ಥಿತಿ ಇತ್ಯಾದಿ). ಈ ಹೊಲೆಯರಿಗೆಲ್ಲ ಚೆನ್ನಾಗಿ ಪಾಠ ಕಲಿಸಬೇಕಾಗಿದೆ' ತಲೆಗೆ ತಿಳಿದಂತೆ ಬೈಯುತ್ತ ಮೇಲೇರಿ ಬರುತ್ತಿದ್ದ ಅವರ ಕಣ್ಣುಗಳು ಕೆಂಡ ಉಗುಳುತ್ತಿದ್ದವು. ಅವರ ಭಾವ ಭಂಗಿ ನೋಡಿದರೆ ಎಂಥವರೂ ಭೀತಿಯಿಂದ ತತ್ತರಿಸುವಂತಿತ್ತು.

ಅಂಬೇಡ್ಕರರು, ನಾವು ಹೊರಗಿನವರೆಂದೂ ಇಲ್ಲಿಯ ಆಚಾರ–ವಿಚಾರ ನಮಗೆ ಗೊತ್ತಿಲ್ಲದ್ದರಿಂದ ಸ್ಥಳೀಯ ಪದ್ಧತಿ ಉಲ್ಲಂಘಿಸಿದಂತಾಗಿದೆ ಎಂದೂ ವಿವೇದಿಸಿ ಕೊಂಡರು. ಕೂಡಲೇ ಅವರ ಸಿಟ್ಟು ಅವರ ಜೊತೆಗೆ ಬಂದಿದ್ದ ಸ್ಥಳೀಯರ ಕಡೆಗೆ ತಿರುಗಿತು. 'ಏ, ಸ್ಥಳೀಯರಾದ ನೀವ್ಯಾಕೇ ಹೊರಗಿನವರಿಗೆ ಹೇಳಿಲ್ಲ? ಅಸ್ಪೃಶ್ಯರು ಈ ತೊಟ್ಟಿಯನ್ನು ಮುಟ್ಟಬಾರದೆಂಬುದು ನಿಮಗೆ ಗೊತ್ತಿಲ್ಲವೆ? ಗೊತ್ತಿದ್ದೂ ಇಂಥ ಅವಘಡಕ್ಕೆ ಅವಕಾಶ ಕೊಟ್ಟಿದ್ದು ನಿಮ್ಮ ಉದ್ಧಟತನ, ಪರಮ ಉದ್ಧಟತನ!' ಮಾರಣಾಂತಿಕ ಭೀತಿ ಉಕ್ಕಿಸುವ ಧ್ವನಿಯಲ್ಲಿ ನೂರಾರು ಪ್ರಶ್ನೆ ಕೇಳುತ್ತ ವಾಚಾಮಗೋಚರ ಬೈದರು. ಸ್ಥಳೀಯರು ನಮ್ಮ ಜೊತೆಗೆ ಸೇರಿಕೊಳ್ಳುವ ಮುಂಚೆಯೇ ಅದೆಲ್ಲ ನಡೆದುಹೋಗಿತ್ತು ಎಂದು ಅಂಬೇಡ್ಕರರು ನಿವೇದಿಸಿಕೊಂಡರೂ, ಮೊಹ್ಮದೀಯರು ನಮ್ಮ ಸಮಜಾಯಿಸಿಗೆ ಕಿವಿಕೊಡಲು ಸಿದ್ಧರಿರಲಿಲ್ಲ. ಅವರು ನಮ್ಮನ್ನ ಮತ್ತು ಸ್ಥಳೀಯರನ್ನು ಕೂಡಿಸಿ ಬೈಯುತ್ತಲೇ ಇದ್ದರು. ತುಸು ಹೆಚ್ಚುಕಮ್ಮಿಯಾದರೆ ಗಲಭೆಯೇ ಉದ್ಭವಿಸುವ, ಅಷ್ಟೇ ಯಾಕೆ, ಕೊಲೆಗಳೂ ನಡೆಯುವ ಸಾಧ್ಯತೆಯಿತ್ತು. ನಾವು ಹೇಗೋ ಸಂಭಾಳಿಸಿಕೊಂಡು ಸಂಯಮದಿಂದ ವರ್ತಿಸಿದೆವು. ಯಾವುದೋ ಕ್ರಿಮಿನಲ್ ಮೊಕದ್ದಮೆಯಲ್ಲಿ ಸಿಕ್ಕಿಕೊಂಡು ನಮ್ಮ ಪ್ರವಾಸವನ್ನು ಮೊಟಕುಗೊಳಿಸಲು ನಮಗೆ ಇಷ್ಟವಿರಲಿಲ್ಲ (ನಾನಕ್‌ಚಂದ್ ರತ್ತು (ಕನ್ನಡದಲ್ಲಿ ರಾಹು), ಅಂಬೇಡ್ಕರ್: ಸ್ಮೃತಿ–ಸಂಸ್ಕೃತಿ, ಸುಮೇಧ ಪ್ರಕಾಶನ, ಕಲಬುರ್ಗಿ, ಪುಟ.32–33).

**ಅಧ್ಯಾಯ-2**

**ನಾವು ಈ ದೇಶದ ಜಾತಿವಾದಿಗಳ ಸೇವಕರಲ್ಲ. ಈ ದೇಶ ಕಟ್ಟಿ ಬೆಳೆಸಿದ ಮೂಲ ನಿವಾಸಿಗಳು ಹಾಗೂ ಈ ದೇಶದ ವಾರಸುದಾರರು**

**-ಅಂಬೇಡ್ಕರ್.**

# ಅಂಬೇಡ್ಕರ್ ಮತ್ತು ಮಹಾತ್ಮ ಗಾಂಧೀಜಿಯ ಚಾರಿತ್ರಿಕ ಭೇಟಿ

ಕ್ರಿ. ಶ. 1931ರ ಆಗಸ್ಟ್ 14ನೇ ದಿನ. ಡಾ. ಬಿ. ಆರ್. ಅಂಬೇಡ್ಕರ್ ಮತ್ತು ಮಹಾತ್ಮ ಗಾಂಧೀಜಿ ಅವರು ಮೊದಲ ಸಲ ಒಬ್ಬರೊನ್ನೊಬ್ಬರು ಭೇಟಿಯಾದ ಚಾರಿತ್ರಿಕ ಸಂದರ್ಭ ಅದು. ಗಾಂಧೀಜಿ ಅವರಿಗೆ ಆಗ 62ರ ಮುಪ್ಪಾದರೆ, ಅಂಬೇಡ್ಕರ್ ಅವರಿಗೆ 40ರ ತಾರುಣ್ಯ. ಕ್ಷಣಕಾಲ ಅಲ್ಲಿ ಮೌನ ಆವರಿಸಿಕೊಂಡಿತ್ತು. ಅಂಬೇಡ್ಕರ್ ಅವರ ಚಡವಡಿಕೆಯನ್ನು ಕಂಡ ಗಾಂಧೀಜಿ ಕಡೆಗೂ ಮೌನ ಮುರಿದು, 'ಯಾಕೊ ನಿಮಗೆ ಕಾಂಗ್ರೆಸ್ ಮತ್ತು ನನ್ನ ಮೇಲೆ ತೀವ್ರ ಅಸಹನೆ ಇದ್ದಂತೆ ಕಾಣಿಸುತ್ತದೆ. ನೀವು ಹುಟ್ಟುವುದಕ್ಕೂ ಮುನ್ನವೇ ನನಗೆ ಅಸ್ಪೃಶ್ಯತೆಯ ಭೀಕರತೆ ತಟ್ಟಿತ್ತು. ನನ್ನ ಬಾಲ್ಯದಿಂದಲೇ ಅಸ್ಪೃಶ್ಯತೆ ಕುರಿತು ಸಾಕಷ್ಟು ಯೋಚಿಸುತ್ತಾ ಬಂದಿದ್ದೇನೆ. ಅದರ ಫಲವಾಗಿ ಇಂದು ಕಾಂಗ್ರೆಸ್, ಅಸ್ಪೃಶ್ಯತೆಯ ವಿಮೋಚನಾ ಕಾರ್ಯಕ್ರಮಗಳಿಗೆಂದೇ 20 ಲಕ್ಷ ರೂಪಾಯಿ ಖರ್ಚು ಮಾಡುವಂತೆ ಪ್ರೇರೇಪಿಸಿದ್ದೇನೆ. ಇಷ್ಟಾದರೂ ನಿಮಗೆ ನನ್ನ ಮೇಲೂ ಕಾಂಗ್ರೆಸ್ ಮೇಲೂ ಇಷ್ಟು ಸಿಟ್ಟೇಕೆಂದು ಗೊತ್ತಾಗುತ್ತಿಲ್ಲ?' ಎಂದರು.

ಅದಕ್ಕೆ ಅಂಬೇಡ್ಕರ್ 'ಕಾಂಗ್ರೆಸ್, ಅಸ್ಪೃಶ್ಯರ ವಿಮೋಚನೆಗೆಂದು ಹಣ ಖರ್ಚು ಮಾಡಿದ್ದರ ಬಗ್ಗೆ ನನ್ನ ತಕರಾರಿದೆ. ಒಬ್ಬ ಅಸ್ಪೃಶ್ಯನನ್ನೂ ಮುಟ್ಟದ, ತನ್ನ ಮನೆಯೊಳಕ್ಕೆ ಬಿಟ್ಟುಕೊಳ್ಳದ, ಸಂಕಟ ಆಲಿಸದ ಅಥವಾ ತನ್ನ ಸದಸ್ಯನನ್ನಾಗಿಸಿಕೊಳ್ಳದ ಕಾಂಗ್ರೆಸ್, ಅಸ್ಪೃಶ್ಯರ ವಿಮೋಚನೆಗೆಂದು ಹಣ ಖರ್ಚು ಮಾಡಿದ್ದಕ್ಕೆ ಏನು ಹೇಳಲಿ? ಅದು ಕಾಂಗ್ರೆಸ್‌ನ ವ್ಯರ್ಥ ಪ್ರಯತ್ನವಷ್ಟೇ. ಆ ಹಣವನ್ನು ಅಸ್ಪೃಶ್ಯರ ವಿಮೋಚನೆಯ ಬದಲು ಕಾಂಗ್ರೆಸ್ಸಿಗರ ವೈಚಾರಿಕ ಪ್ರಜ್ಞೆಯನ್ನು ವಿಸ್ತರಿಸಿಕೊಳ್ಳಲು ಬಳಸಿಕೊಂಡಿದ್ದರೆ ನಾನು ಹೆಚ್ಚು ಸಂತೋಷ ಪಡುತ್ತಿದ್ದೆ. ಕಾಂಗ್ರೆಸ್ ಸದಸ್ಯನಾಗಲು ಕಡ್ಡಾಯವಾಗಿ ಖಾದಿ ಧರಿಸಬೇಕೆಂಬ ನಿಯಮ ಏರಿ, ಅಸ್ಪೃಶ್ಯರ ಮನೆಯಲ್ಲಿ ವಾರಕ್ಕೊಮ್ಮೆಯಾದರೂ ಊಟ ಮಾಡದವನು ಕಾಂಗ್ರೆಸ್ ಸದಸ್ಯನಾಗಲು ಅನರ್ಹ ಎಂಬ ನಿಯಮವನ್ನು ಕಡ್ಡಾಯಗೊಳಿಸಿದ್ದರೆ ಆಗ ಕಾಂಗ್ರೆಸ್ ಕಾರ್ಯಕ್ರಮಗಳ ಬಗ್ಗೆ ನನ್ನಂಥವರಿಗೆ ಅಷ್ಟಿಷ್ಟಾದರೂ ಗೌರವ ಇರುತ್ತಿತ್ತು' ಎಂದಿದ್ದರು.

ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ನಡುವಿನ ಈ ಚಾರಿತ್ರಿಕ ಮುಖಾಮುಖಿ, ಮುಂದೆ ಈ ಮಹಾನ್ ವ್ಯಕ್ತಿಗಳ ಪಾಲಿಗೆ ಶೋಷಿತರ ವಿಮೋಚನೆಯ ಪ್ರಶ್ನೆ ಜೀವನ್ಮರಣದಷ್ಟೇ ಮಹತ್ವದ್ದಾಯಿತು. ದಲಿತರನ್ನು ಮುಟ್ಟಲು ಹಿಂಜರಿಯುತ್ತಿದ್ದ ಕಾಂಗ್ರೆಸ್ ಮುಂದೆ ತನ್ನ ಅನೇಕ ಸಮಿತಿಗಳಲ್ಲಿ ದಲಿತರಿಗೆ ಪ್ರವೇಶ ನೀಡಿತು. ಆ ಕ್ಷಣಕ್ಕಾದರೂ, ನೊಂದವರ ನೋವನ್ನು ಆಲಿಸಲು ನೋಯದವರ ಕಿವಿ ಕೊಂಚ ತೆರೆದುಕೊಂಡಿತ್ತು. ಈ ಘಟನೆಯಿಂದ ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ಚಾರಿತ್ರಿಕ ಮುಖಾಮುಖಿಯ ಮಹತ್ವ ಎಷ್ಟೆಂಬುದು ಗೊತ್ತಾಗುತ್ತದೆ. (ಕೆ. ಎಲ್. ಚಂದ್ರಶೇಖರ್ ಐಜೂರ್, ಪ್ರಜಾವಾಣಿ, 20.5.15) ಬಹುಶಃ ಅಂಬೇಡ್ಕರ್ ಅವರ ಮಾತುಗಳಿಂದ ಅವರು ಎಷ್ಟು ಆಳವಾದ ಬುದ್ಧಿಮತ್ತೆ ಇರುವ ವ್ಯಕ್ತಿ ಎನ್ನುವ ವಿಚಾರ ಗಾಂಧೀಜಿಯವರ ಹೃದಯಕ್ಕೆ ನಾಟಿರಬೇಕು.

## ಮಹಾಡ್ ಕೆರೆಯ ಆಂದೋಲನ

ಭಾರತೀಯ ಜಾತಿಪದ್ಧತಿಯಲ್ಲಿ ಸವರ್ಣೀಯ ಹಿಂದೂಗಳಿಂದ ದಲಿತರನ್ನು ಬೇರ್ಪಡಿಸಲಾಗಿದೆ. ಸವರ್ಣೀಯ ಹಿಂದೂಗಳು ಬಳಸುತ್ತಿದ್ದ ನೀರು, ರಸ್ತೆಗಳ ಬಳಕೆಯನ್ನು ದಲಿತರಿಗೆ ನಿಷೇಧಿಸಲಾಗಿತ್ತು. 1923ರಲ್ಲಿ ಮುಂಬೈ ವಿಧಾನ ಪರಿಷತ್ ಸರಕಾರದ ವತಿಯಿಂದ ನಿರ್ಮಿಸಲ್ಪಟ್ಟ ರಸ್ತೆಗಳಲ್ಲಿ ದಲಿತರು ಪ್ರವೇಶ ಮಾಡಬಹುದು ಎಂದಿತು. ಹಾಗೆಯೇ ಸಾರ್ವಜನಿಕ ಸ್ಥಳಗಳಲ್ಲಿರುವ ಕೆರೆಗಳಲ್ಲಿನ ನೀರನ್ನೂ ಉಪಯೋಗಿಸಬಹುದು ಎಂಬ ಆಜ್ಞೆ ನೀಡಿತು. ಆದರೆ ಹಿಂದೂಗಳ ಪ್ರತಿಭಟನೆಯಿಂದ ಬ್ರಿಟಿಷ್ ಸರಕಾರವೂ ದಲಿತರಿಗೆ ಪ್ರವೇಶ ನೀಡಲಾಗಲಿಲ್ಲ. 1827ರಲ್ಲಿ ಅಂಬೇಡ್ಕರ್ ಸಾರ್ವಜನಿಕ ಸ್ಥಳಗಳಲ್ಲಿ ನೀರನ್ನು ಉಪಯೋಗಿಸುವ ಸ್ವಾತಂತ್ರ್ಯ ಇದೆ ಎಂಬುದರ ಆಂದೋಲನವನ್ನು ಹಮ್ಮಿಕೊಂಡರು.

ಮಾರ್ಚ್ 19–20, 1927ರಲ್ಲಿ 'ಮಹಾಡ್'ನಲ್ಲಿ ಒಂದು ಸಭೆಯನ್ನು ನಡೆಸಲು ತಯಾರಿ ಮಾಡಿಕೊಂಡರು. ಈ ಸಭೆಗೆ ಸಾವಿರಾರು ಜನರು ಅಲ್ಲಿ ಸೇರಿದರು. ಸಭೆಯ ನಂತರ ಜನರೆಲ್ಲ ಮಹಾಡ್‌ನ 'ಭಾವಡಾರ್' (ಸಿಹಿ ನೀರು) ಕೆರೆಗೆ ಹೋಗಿ ನೀರು ಕುಡಿದರು. ಸವರ್ಣೀಯ ಹಿಂದೂಗಳು, ದಲಿತರು ಅಲ್ಲಿಂದ ಹೋಗಿ ದೇವಸ್ಥಾನಕ್ಕೆ ಮುತ್ತಿಗೆ ಹಾಕುತ್ತಾರೆ ಎಂಬ ವದಂತಿ ಎಬ್ಬಿಸಿ ಜನರಲ್ಲಿ ಆತಂಕ ಸೃಷ್ಟಿಸಿ ಎಲ್ಲರನ್ನು ಚದುರುವಂತೆ ಮಾಡಿಬಿಟ್ಟರು. ಅನಂತರ ಸವರ್ಣೀಯರು, ದಲಿತರು ಮುಟ್ಟಿದ ಕೆರೆಗೆ ಪೂಜೆ ಮಾಡಿ ಮೈಲಿಗೆಯನ್ನು ಶುದ್ಧೀಕರಿಸಿದರು. ಅಂಬೇಡ್ಕರ್ ಮತ್ತೆ ಡಿಸೆಂಬರ್ 26–27, 1927ರಲ್ಲಿ ಮಹಾಡ್‌ನಲ್ಲಿ ಸಭೆ ನಡೆಸುವುದಕ್ಕೆ ತಯಾರಿ ನಡೆಸಿದರು. ಸವರ್ಣೀಯ ಹಿಂದೂಗಳು ಅದು ಖಾಸಗಿ ಸ್ಥಳವೆಂದು ನ್ಯಾಯಾಲಯಕ್ಕೆ ದೂರುಕೊಟ್ಟು ಸಭೆ ನಡೆಯದಂತೆ ಮಾಡಿಬಿಟ್ಟರು. ಇದರಿಂದ ಕುಪಿತಗೊಂಡ ಅಂಬೇಡ್ಕರ್ ತಮ್ಮ ಅನುಯಾಯಿಗಳ ಜೊತೆಗೆ ಮನುಸ್ಮೃತಿಯನ್ನು ಬೆಂಕಿಗೆ ಹಾಕಿ ಸುಟ್ಟರು. ಅನಂತರ 1937ರಲ್ಲಿ ಮುಂಬೈ ಉಚ್ಚ ನ್ಯಾಯಾಲಯ ದಲಿತರು ಸಾರ್ವಜನಿಕ ಸ್ಥಳಗಳಲ್ಲಿನ ನೀರನ್ನು ಉಪಯೋಗಿಸುವ ಎಲ್ಲಾ ಹಕ್ಕು ಇದೆ ಎಂದು ತೀರ್ಪು ನೀಡಿತು.

ಇದೇ ಕಾಲದಲ್ಲಿ ನಡೆದ ಒಂದು ಘಟನೆಯನ್ನು ನೀವು ಅಂಬೇಡ್ಕರ್ ಅವರ

ಮಾತಿನಲ್ಲೇ ಕೇಳಬೇಕು. 'ಮಹಾಡ್ ಕೆರೆಯ ಸತ್ಯಾಗ್ರಹ ಸಿದ್ಧತೆಯಲ್ಲಿರುವಾಗ ನನ್ನ ಪ್ರಿಯ ಮಗನಾದ ಗಂಗಾಧರನ ಮೃತ್ಯುವಾಯಿತು. ಶವದ ಮೇಲೆ ಹೊಸ ಬಟ್ಟೆ ಹಾಕಲು ಅಂಗಡಿಯಿಂದ ತರುವುದಕ್ಕೆ ಹಣ ಬೇಕೆಂದು ಜನ ನನಗೆ ಕೇಳಿದರು. ಅಷ್ಟೂ ಹಣ ನನ್ನಲ್ಲಿ ಇರಲಿಲ್ಲ. ಆಗ ನನ್ನ ರಮಾ ತನ್ನ ಹರಿದ ಸೀರೆಯನ್ನು ಶವದ ಮೇಲೆ ಹಾಕಿ ಸಂಸ್ಕಾರ ಮಾಡಿದೆವು. ಇಂತಹ ಸ್ಥಿತಿ ಭಾರತದ ಯಾವ ನಾಯಕನಿಗೂ ಬಂದಿರಲಿಲ್ಲ. ಆದರೂ ನಾನು ಯಾರಿಗೂ ಮಾರಾಟವಾಗಲಿಲ್ಲ.'

## ಕಾಳಾರಾಮ ದೇವಾಲಯದ ಆಂದೋಲನ

ಮಾರ್ಚ್ 2, 1930ರಂದು ಸಾಯಂಕಾಲ 3 ಘಂಟೆಗೆ ಮಹಾರಾಷ್ಟ್ರದ 'ಪಂಚವಟಿ' ಪ್ರದೇಶದಲ್ಲಿರುವ ಕಾಳಾರಾಮ ದೇವಸ್ಥಾನದ ಪ್ರವೇಶ ಪಡೆಯಲು 15,000 ಜನ ದಲಿತರು ಒಟ್ಟುಗೂಡಿದರು. ಈ ಆಂದೋಲನಕ್ಕೆ ಅಂಬೇಡ್ಕರ್ ನಾಯಕತ್ವ ವಹಿಸಿದ್ದರು. ಅಂದಿಗೆ 212 ವರ್ಷಗಳ ಹಳೆಯ ಈ ದೇವಸ್ಥಾನದಲ್ಲಿರುವ ರಾಮ, ಲಕ್ಷ್ಮಣ, ಸೀತೆಯ ಶಿಲ್ಪಗಳನ್ನು ಕಪ್ಪು ಕಲ್ಲಿನಿಂದ ಕೆತ್ತಲಾಗಿದ್ದರಿಂದ ಮಂದಿರಕ್ಕೆ ಕಾಳಾರಾಮ ಎಂಬ ಹೆಸರು ಬಂದಿದೆ. ಒಂದು ಗುಂಪಿನಲ್ಲಿ 125 ಪುರುಷರು ಮತ್ತು 25 ಮಹಿಳೆಯರು ಇದ್ದರು. ಇಂತಹ ನಾಲ್ಕು ಗುಂಪುಗಳ ಜನರು ಮೊದಲಿಗೆ ದೇವಾಲಯದ ಆವರಣಕ್ಕೆ ನುಗ್ಗಿ ದೇವಾಲಯದ ಮುಖ್ಯ ದ್ವಾರದಲ್ಲಿ ನಿಂತುಕೊಂಡರು. ಉಳಿದವರು ದೂರದಲ್ಲಿ ನಿಂತುಕೊಂಡು ನೋಡುತ್ತಿದ್ದರು. ಮಂದಿರದ ಪೂಜಾರಿ ದೇವಾಲಯದ ಮುಖ್ಯ ದ್ವಾರವನ್ನು ಎಷ್ಟೊತ್ತಾದರೂ ತೆಗೆಯಲೇ ಇಲ್ಲ. ಅಲ್ಲಿದ್ದ ಜನರೂ ಸಂಯಮ ಮೀರಿ ಬಾಗಿಲನ್ನು ಮುರಿದು ಒಳಕ್ಕೆ ಹೋಗಲಿಲ್ಲ. ಕೊನೆಗೂ ಒಳಗಿದ್ದ ಕಪ್ಪು ದೇವರುಗಳು ದಲಿತರಿಗೆ ದರ್ಶನ ನೀಡಲೇ ಇಲ್ಲ. ಈ ಘಟನೆಯಾದ ಮೇಲೆ ಅಂಬೇಡ್ಕರ್ ಮತ್ತು ಅವರ ಅನುಯಾಯಿಗಳು ಬೇರೆ ಯಾವುದಾದರು ಧರ್ಮಕ್ಕೆ ಸೇರಿಕೊಳ್ಳುವುದರ ಬಗ್ಗೆ ತೀವ್ರವಾಗಿ ಆಲೋಚಿಸತೊಡಗಿದರು. ಮುಂದೆ 1956ರಲ್ಲಿ ಅಂಬೇಡ್ಕರ್ 5,00,000 ಜನರೊಂದಿಗೆ ನಾಗಪುರದಲ್ಲಿ ಬೌದ್ಧ ಧರ್ಮಕ್ಕೆ ಮಾತಾಂತರ ಹೊಂದಿ ದೀಕ್ಷೆ ಪಡೆದರು. ಆಗ ಹಿಂದೂ ಧರ್ಮದಲ್ಲಿ ಅಲ್ಲೋಲ ಕಲ್ಲೋಲವಾಗಿತ್ತು. ಅನಂತರ ಈ ಕಾಳಾರಾಮ ದೇವಾಲಯದಲ್ಲಿ ದಲಿತರಿಗೂ ಪ್ರವೇಶ ಸಿಕ್ಕಿತ್ತು. ಆದರೆ ಪ್ರಯೋಜನವೇನು? ಕಾಲ ಮಿಂಚಿಹೋಗಿತ್ತು.

ಜಾತಿ, ಅಸ್ಪೃಶ್ಯತೆ ಎನ್ನುವುದು ಸವರ್ಣೀಯರ ಮನಸ್ಸಿನಲ್ಲಿ ಯಾವ ಮಟ್ಟದ ವಿಷವಾಗಿರುತ್ತದೆ ಎನ್ನುವುದಕ್ಕೆ ದಯಾಪವಾರ್‌ರ ಆತ್ಮಕಥೆಯಲ್ಲಿ ಒಂದು ಸಣ್ಣ ಘಟನೆ ಬರುತ್ತದೆ. ದಯಾಪವಾರ್ ಇನ್ನೂ ಚಿಕ್ಕ ಹುಡುಗನಾಗಿದ್ದಾಗ ತನ್ನ ಅಜ್ಜಿಯ ಮನೆಗೆ ಬಂದಿರುತ್ತಾನೆ. ಆ ದಿನ ಆ ಊರಿನಲ್ಲಿ ದೇವಾಲಯದ ಒಳಗೆ ಏನೋ ಗದ್ದಲ ರಂಪಾಟ ನಡೆಯುತ್ತಿರುತ್ತದೆ. ಕುತೂಹಲಗೊಂಡ ಹುಡುಗ ತಾನು ಅಸ್ಪೃಶ್ಯನೆಂಬುದನ್ನು ಮರೆತು ತನಗೆ ಅರಿವಿಲ್ಲದೆಯೇ ದೇವಸ್ಥಾನ ಒಳಗೆ ಹೋಗಿ ನೋಡುತ್ತಾನೆ. ಸವರ್ಣೀಯ ಹುಚ್ಚನೊಬ್ಬ ದೇವರ ವಿಗ್ರಹಕ್ಕೆ ಚಪ್ಪಲಿ ತೆಗೆದುಕೊಂಡು ಓಗ್ಗಾಮುಗ್ಗಾ ಬಾರಿಸುತ್ತಿರುತ್ತಾನೆ. ಸುತ್ತಲು ನೆರೆದ ಜನಸ್ತೋಮ ಏನೂ ಮಾಡದೆ ಬೆರಗಾಗಿ ನೋಡುತ್ತಿರುತ್ತದೆ. ಅಷ್ಟರಲ್ಲಿ ಅಲ್ಲಿದ್ದವನೊಬ್ಬ ದಯಾಪವಾರ್ ಮಹಾರ್ ಜಾತಿಗೆ

ಸೇರಿದವನೆಂದು ಗುರುತಿಸಿ ಬಿಡುತ್ತಾನೆ. ಅಸ್ಪೃಶ್ಯ ಬಾಲಕ ದೇವಸ್ಥಾನ ಪ್ರವೇಶ ಮಾಡಿದ್ದರಿಂದ ದೇವಾಲಯ ಅಪವಿತ್ರವಾಯಿತೆಂದು ಅಲ್ಲಿದ್ದವರೆಲ್ಲ ಕೋಪಗೊಂಡ ಹುಡುಗನಿಗೆ ಚೆನ್ನಾಗಿ ಬಾರಿಸಿ ಹೊರಕ್ಕೆ ಬಿಸಾಕುತ್ತಾರೆ. ದೇವರ ವಿಗ್ರಹಕ್ಕೆ ಹೊಡೆಯುತ್ತಿದ್ದವನಿಗೆ ಹುಚ್ಚೆ ಅಥವಾ ಅಲ್ಲಿದ್ದ ಎಲ್ಲಾ ಸವರ್ಣೀಯರಿಗೂ ಹುಚ್ಚೆ ಎನ್ನುವುದನ್ನು ಯಾರು ತಾನೇ ಹೇಳುವರು!

## ಬ್ರಿಟಿಷರಿಗೆ ಅಂಬೇಡ್ಕರರ ಎಚ್ಚರ

ಇಂಗ್ಲೆಂಡ್‌ನಲ್ಲಿ ನಡೆದ ದುಂಡು ಮೇಜಿನ ಸಮಯದಲ್ಲಿ ಗಡಸು ದನಿ ಮತ್ತು ಪ್ರವಾದಿಯ ಧಾಟಿಯಲ್ಲಿ ಅಂಬೇಡ್ಕರ್ ಬ್ರಿಟಿಷರ ವಿರುದ್ಧ ಹೀಗೆ ಗುಡುಗಿದ್ದರು: 'ಬ್ರಿಟಿಷರು ಭಾರತಕ್ಕೆ ಬರುವ ಮುಂಚೆ ಭಾರತದ ನಿಮ್ನ ವರ್ಗಗಳು ಯಾವ ರೀತಿಯಲ್ಲಿ ಇದ್ದವೋ, ಬ್ರಿಟಿಷರ ಆಡಳಿತದಲ್ಲೂ ಬಹುತೇಕವಾಗಿ ಅದೇ ಸ್ಥಿತಿಯಲ್ಲಿಯೇ ಇವೆ. ಅಂದ ಮೇಲೆ ಬ್ರಿಟಿಷರ ಆಡಳಿತವನ್ನು ನಿಮ್ನ ವರ್ಗಗಳು ಏಕೆ ಸಹಿಸಿಕೊಳ್ಳಬೇಕು? ಮೊದಲೂ ನಾವು ಸಾರ್ವಜನಿಕ ಸ್ಥಳಗಳಿಂದ ನೀರನ್ನು ತೆಗೆದುಕೊಳ್ಳುವ ಹಾಗಿರಲಿಲ್ಲ. ಬ್ರಿಟಿಷ್ ಆಡಳಿತದಲ್ಲೂ ನಮಗೆ ಸಾರ್ವಜನಿಕ ಸ್ಥಳಗಳಿಂದ ನೀರು ಸಿಗುತ್ತಿಲ್ಲ. ನೀರು ಕುಡಿದು ಬದುಕುವ ಹಕ್ಕನ್ನಾದರೂ ನಮಗೆ ಬ್ರಿಟಿಷರು ಕೊಡಿಸಿದರೇ? ಮೊದಲು ನಮಗೆ ಮಂದರಿಗಳಲ್ಲಿ ಪ್ರವೇಶ ಸಿಕ್ಕಲಿಲ್ಲ; ಈಗಲೂ ಸಿಗುತ್ತಿಲ್ಲ. ಮುಂಚೆಯೂ ನಮ್ಮನ್ನು ಆಡಳಿತ ವ್ಯವಸ್ಥೆಯಲ್ಲಿ ನೇಮಕಮಾಡಿಕೊಳ್ಳಲಿಲ್ಲ; ಈಗಲೂ ನೇಮಕ ಮಾಡಿಕೊಳ್ಳುತ್ತಿಲ್ಲ. ಪೊಲೀಸ್-ಮಿಲಿಟರಿ ಸೇವೆಯಿಂದ ಮುಂಚೆಯೂ ನಮ್ಮನ್ನು ದೂರ ಇಡಲಾಗಿತ್ತು; ಈಗಲೂ ನಮ್ಮನ್ನು ದೂರ ಇಡಲಾಗಿದೆ. ಇಷ್ಟೆಲ್ಲ ಸತ್ಯ ಕಣ್ಣಿಗೆ ರಾಚುತ್ತಿರುವಾಗ, ನಾವು ಹೇಗೆ ತಾನೇ ಬ್ರಿಟಿಷರ ಆಡಳಿತದ ಮೇಲೆ ನಂಬಿಕೆ ಇಡಲು ಸಾಧ್ಯ? ಈ ಆಡಳಿತವನ್ನು ಹೇಗೆ ತಾನೇ ಸಹಿಸಲು ಸಾಧ್ಯ? ಆದ್ದರಿಂದ ಬ್ರಿಟಿಷ್ ಆಡಳಿತ ಭಾರತದಲ್ಲಿ ಕೊನೆಗೊಳ್ಳಲೇ ಬೇಕು. ನಿಮ್ನ ವರ್ಗಗಳು ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳುತ್ತವೆ' ಎಂದು ಹೂಂಕರಿಸಿದರು. ಕೆಲವು ಮೂಲಗಳಿಂದ, ಅಂಬೇಡ್ಕರ್ ಭಾರತೀಯ ಕ್ರಾಂತಿಕಾರಿಗಳ ಪಡೆಗೆ ಸೇರಿದವರೆ? ಎಂಬ ಬಗ್ಗೆ ಗುಪ್ತ ತನಿಖೆಯೂ ನಡೆದಿತ್ತು ಎನ್ನಲಾಗಿದೆ. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು. 165)

ಭಾರತದಲ್ಲಿ ಜನರು ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯಲು ಹೋರಾಡುತ್ತಿದ್ದಾಗ ಅಂಬೇಡ್ಕರ್ ನಿಮ್ನ ವರ್ಗಗಳ ಸ್ವಾತಂತ್ರ್ಯ ಹೋರಾಟಕ್ಕೆ ಅಥವಾ ಮೀಸಲಾತಿಗೆ ಕಾರ್ಯ ರೂಪಿಸಿಕೊಳ್ಳುತ್ತಿದ್ದರು. ಇದನ್ನು ಗಮನಿಸಿದ ಇಂಡಿಯನ್ ಕಾಂಗ್ರೆಸ್ಸಿಗರು ಅಂಬೇಡ್ಕರ್‌ರನ್ನು ದೇಶದ್ರೋಹಿ ಎಂದು ಹೀಯಾಳಿಸುತ್ತಿದ್ದರು. ಆ ಹೊತ್ತಿನಲ್ಲಿ ಅಂಬೇಡ್ಕರ್ ಕಾಂಗ್ರೆಸ್ಸಿಗರ ಮೇಲೆ ವಾಗ್ದಾಳಿ ಮಾಡಿದ್ದರು: 'ಬ್ರಿಟಿಷರ ಆಡಳಿತದಲ್ಲಿ ಕೇವಲ 150 ವರ್ಷಗಳ ಕಾಲವಷ್ಟೇ ಹಿಂದೂ ಸವರ್ಣೀಯರು ಗುಲಾಮಗಿರಿಯನ್ನು ಅನುಭವಿಸಿದ್ದರು. ಅದೂ ಕೂಡ ರಾಜಕೀಯವಾಗಿ ಮಾತ್ರ, ಸಾಮಾಜಿಕವಾಗಲ್ಲ. ಆದರೆ ಸಹಸ್ರಾರು ವರ್ಷಗಳಿಂದ ಅಸ್ಪೃಶ್ಯರು ಈ ಹಿಂದೂ ದೇಶದಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಸ್ವಾತಂತ್ರ್ಯ ಕಳೆದುಕೊಂಡಿರುವರು. ಗುಲಾಮಗಿರಿ ಹೇರಿದ ಬ್ರಿಟಷರಿಗೆ ಸವರ್ಣೀಯರು 'ಭಾರತ ಬಿಟ್ಟು ತೊಲಗಿ' ಎಂದು

ಅವರು ಕನಲಿ ಹೇಳುವುದಾದರೆ, 5 ಸಾವಿರ ವರ್ಷಗಳಿಂದ ಎಲ್ಲಾ ರೀತಿಯಲ್ಲೂ ಸ್ವಾತಂತ್ರ್ಯ ಕಳೆದುಕೊಂಡವರು (ನಿಮ್ನ ವರ್ಗದವರು) ಹಿಂದೂ ಸವರ್ಣೀಯರಿಗೆ ಕಟುವಾದ ಮಾತುಗಳಲ್ಲಿ ಚುಚ್ಚಬಾರದೆಂದು ಹೇಳುವುದು ಎಷ್ಟು ಸರಿ? ತಮ್ಮನ್ನು ಅಮಾನವೀಯವಾಗಿ ನಡೆಸಿಕೊಂಡವರ ಬಗ್ಗೆ ಸಮಾಧಾನದ ಮಾತುಗಳನ್ನು ಆಡಬೇಕೆಂದು ನಿರೀಕ್ಷಿಸುವುದು ಅನ್ಯಾಯ ಮತ್ತು ಅಸಹಜವಲ್ಲವೇ?' ಎಂದು ಪ್ರಶ್ನಿಸುತ್ತಾರೆ. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು. 211)

ಒಂದು ಸಾರಿ ಅಂಬೇಡ್ಕರ್ ಕಾರ್ಯಕ್ರಮವೊಂದಕ್ಕೆ ಬೆಳಗಾವಿಗೆ ರೈಲಿನಲ್ಲಿ ಬರುತ್ತಿದ್ದರು. ನೂರಾರು ಜನ ಅಭಿಮಾನಿಗಳು ಸ್ನಾನ ಮಾಡಿಕೊಂಡು ಶುಭ್ರವಾದ ಬಿಳಿ ಬಟ್ಟೆ ಧರಿಸಿ, ಅಂಬೇಡ್ಕರ್ ನಮ್ಮ ಮೇಲೆ ನಡೆದುಕೊಂಡುಹೋಗಿ ಅವರ ಪಾದಗಳು ನಮಗೆ ಸ್ಪರ್ಶವಾಗಲಿ ಎಂದು ಅಂಬೇಡ್ಕರ್ ಬರುವ ದಾರಿಯಲ್ಲಿ ಸಾಲಾಗಿ ಮಲಗಿದ್ದರು. ಆ ದೃಶ್ಯ ನೋಡಿದ ಅಂಬೇಡ್ಕರ್ ಕುಪಿತಗೊಂಡು ಕಾರ್ಯಕ್ರಮ ಏರ್ಪಡಿಸಿದ್ದ ಆಯೋಜಕನನ್ನು ಕರೆಸಿ ಪಟಾರನೆ ಕೆನ್ನೆಗೆ ಬಾರಿಸಿದರು. 'ನಾನು ನನ್ನ ಜನರಿಗೆ ಸ್ವಾಭಿಮಾನ ಕಲಿಸಿರಿ ಅಂದರೆ ಗುಲಾಮಗಿರಿಯನ್ನ ಕಲಿಸ್ತಾ ಇದ್ದೀರ ಈಡಿಯಟ್ಸ್' ಎಂದರು. ನಂತರ ಎಲ್ಲರನ್ನು ಏಳಿಸಿ ಸ್ವಾಭಿಮಾನ ಮತ್ತು ಆತ್ಮಗೌರವದ ಬಗ್ಗೆ ಹೇಳಿದರಂತೆ. ಅದೇ ರೀತಿ ಅಂಬೇಡ್ಕರ್ ಅವರು ಕೆಜಿಎಫ್‌ಗೆ ಬಂದಿದ್ದಾಗ ಚಿನ್ನದ ಗಣಿಗಳ ತಮಿಳು ದಲಿತ ಕಾರ್ಮಿಕರು ಅವರನ್ನು ದಾರಿಯ ಉದ್ದಕ್ಕೂ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತ ತಮಟೆ ಹೊಡೆಯುತ್ತ, ನೃತ್ಯ ಮಾಡುತ್ತ ಹೊರಟು ಅತಿಥಿಗೃಹ ತಲುಪಿದರಂತೆ. ಕುಪಿತಗೊಂಡ ಅಂಬೇಡ್ಕರ್, ಅವರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡು ಸಭೆಯಲ್ಲಿ ಪಾಲ್ಗೊಳ್ಳದೆ ಅತಿಥಿಗೃಹದಿಂದಲೇ ಮುಂಬೈಗೆ ಹಿಂತಿರುಗಿ ಹೊರಟುಹೋದರಂತೆ.

## ಮೀಸಲಾತಿಯ ಪೂನಾ ಒಪ್ಪಂದ

1932ರಲ್ಲಿ ಅಂದಿನ ಬ್ರಿಟಿಷ್ ಮುಖ್ಯಮಂತ್ರಿ ರಾಮ್ಸೇ ಮೆಕ್ ಡೊನಾಲ್ಡ್ ಭಾರತದಲ್ಲಿ ಜಾತಿಗಳ ಆಧಾರದ ಮೇಲಿನ ಮೀಸಲಾತಿ ಸಭೆಯಲ್ಲಿ ನಿಮ್ನ ವರ್ಗದವರಿಗೆ ಪ್ರತ್ಯೇಕ ಮತ ಕ್ಷೇತ್ರಗಳನ್ನು ನೀಡುವುದಾಗಿ ಘೋಷಿಸಿದರು. ವಿಪರ್ಯಾಸವೆಂದರೆ ಭಾರತದಲ್ಲಿದ್ದ ಮುಸಲ್ಮಾನರು, ಕ್ರೈಸ್ತರು ಮತ್ತು ಆಂಗ್ಲೋ-ಇಂಡಿಯನ್ನರಿಗೆ ಮೀಸಲಾತಿ ನೀಡಲು ಬ್ರಿಟಿಷ್ ಸರಕಾರದ ಮಾತಿಗೆ ಭಾರತದ ನಾಯಕರೆಲ್ಲ ಆಗಲೇ ಒಪ್ಪಿಗೆ ನೀಡಿದ್ದರು. ಆದರೆ ನಿಮ್ನ ವರ್ಗಗಳಿಗೆ ಮೀಸಲಾತಿ ನೀಡುವ ವಿಷಯವನ್ನು ಮೆಕ್ ಡೊನಾಲ್ಡ್ ಘೋಷಿಸಿದ್ದೆ ಗಾಂಧೀಜಿಯವರು ಅದಕ್ಕೆ ವಿರೋಧ ವ್ಯಕ್ತಪಡಿಸುತ್ತ ಪೂನಾ ಜೈಲಿನಲ್ಲಿಯೇ ಹಠ ಹಿಡಿದು ಉಪವಾಸ ಸತ್ಯಾಗ್ರಹ ಪ್ರಾರಂಭಿಸಿಬಿಟ್ಟರು. ನಿಮ್ನ ವರ್ಗಗಳಿಗೆ ಮೀಸಲಾತಿ ಪಡೆಯಲು ಅಂಬೇಡ್ಕರ್ ಮತ್ತು ನಿಮ್ನ ವರ್ಗಗಳ ನಾಯಕರು ಗಾಂಧೀಜಿ ಮತ್ತು ಸವರ್ಣೀಯ ನಾಯಕರ ಮುಂದೆ ಪಡಲಾರದ ಕಷ್ಟಗಳನ್ನು ಅನುಭವಿಸಬೇಕಾಯಿತು.

ಅನ್ನ ಆಹಾರ ಬಿಟ್ಟು ಸತ್ಯಾಗ್ರಹ ಮಾಡುತ್ತಿದ್ದ ಮಹಾತ್ಮ ಗಾಂಧೀಜಿಯನ್ನು ಹೇಗಾದರು ಮಾಡಿ ಉಳಿಸಿಕೊಳ್ಳಬೇಕು ಎನ್ನುವ ಹೋರಾಟ ದೇಶದಾದ್ಯಂತ ಹರಡಿಕೊಳ್ಳುತ್ತಿತ್ತು. ಆ ಸಮಯದಲ್ಲಿ ಕಾಂಗ್ರೆಸ್ ನಾಯಕರು, ಸವರ್ಣೀಯ ಹಿಂದೂಗಳು, ಮಾಧ್ಯಮಗಳು ಅಂಬೇಡ್ಕರ್‌ರನ್ನು ಒಬ್ಬ ದೇಶದ್ರೋಹಿಯಂತೆ ಬಿಂಬಿಸಿದವು. ಕೊನೆಗೂ ಎಲ್ಲರ

ಒತ್ತಾಯದಿಂದ ಅಂಬೇಡ್ಕರ್, ಗಾಂಧೀಜಿಯನ್ನು ನೋಡಲು ಪೂನಾದ ಯರವಾಡಾ ಜೈಲಿಗೆ ಬರುತ್ತಾರೆ. ಜೈಲಿನ ಆವರಣದಲ್ಲಿ ಒಂದು ಹೊಂಗೆ ಗಿಡದ ಕೆಳಗೆ ಹಗ್ಗದಲ್ಲಿ ನೇಯ್ದ ಮೇವಾರಿ ಮಂಚದ ಮೇಲೆ ಗಾಂಧೀಜಿ ಸುಸ್ತಾಗಿ ಆಹಾರ ಬಿಟ್ಟು ಮೀಸಲಾತಿಯ ವಿರುದ್ಧ ಸತ್ಯಾಗ್ರಹದಲ್ಲಿ ತೊಡಗಿದ್ದರು.

ಅಂಬೇಡ್ಕರ್, ಗಾಂಧಿ ಮಲಗಿದ್ದ ಕಡೆಗೆ ಹೋಗುತ್ತಿದ್ದಂತೆ ಎಲ್ಲರ ಉಸಿರಾಟ ತೀವ್ರವಾಗಿ ಏರಿ ಸ್ವಲ್ಪ ಸಮಯ ಸುತ್ತಲೂ ಗಾಢ ಮೌನ ಆವರಿಸಿಕೊಂಡಿತು. ಅರೆಕ್ಷಣ ಗಾಂಧೀಜಿಗೆ ಅಂಬೇಡ್ಕರ್ ಬಂದಿರುವುದು ಗೊತ್ತಾಗಲಿಲ್ಲ. ಈಗಲೋ ಆಗಲೋ ಪ್ರಾಣ ಬಿಡುವಂತಿರುವ ಗಾಂಧೀಜಿಯನ್ನು ಅಂಬೇಡ್ಕರ್ ನೋಡಿದರೆ ಸಾಕು, ತಮ್ಮ ನಿಲುವನ್ನು ಬದಲಾಯಿಸಿಕೊಳ್ಳುತ್ತಾರೆ ಎಂಬುದಾಗಿ ಹಿಂದೂ ನಾಯಕರಾದ ಜಯಕರ್ ಸ್ವಲ್ಪ ಹಿಂದೆಯೇ ಹೇಳಿದ್ದರು. ಗಾಂಧೀಜಿಯನ್ನು ನೋಡಿದ ಅಂಬೇಡ್ಕರ್ ಅವರ ಹೃದಯ ಕೆಲವು ಕ್ಷಣಗಳು ಕುದಿಯತೊಡಗಿ, ಅನಂತರ ಅನುಕಂಪ ಮತ್ತು ಅಸಮಾಧಾನಗಳು ಏಕಕಾಲಕ್ಕೆ ಉಂಟಾದವು. ಅವರ ಮುಖ ಬಿಗಿದುಕೊಂಡಿತು. ಗಾಂಧೀಜಿಯವರ ಪ್ರಾಣ ಅಂಬೇಡ್ಕರ್ ಕೈಯಲ್ಲಿದೆ ಎಂಬುದಾಗಿ ಇಡೀ ದೇಶ ಮಾತನಾಡಿಕೊಳ್ಳುತ್ತಿತ್ತು. ಈ ಸಂಕಟದ ಪರಿಸ್ಥಿತಿಯಲ್ಲಿ ಅಂಬೇಡ್ಕರ್ ಆಗಲೇ ನಲುಗಿಹೋಗಿದ್ದರು. ಸಾಲದ್ದಕ್ಕೆ ಕಸ್ತೂರಿಬಾ ಅವರು 'ನನ್ನ ತಾಳಿಯನ್ನು ಉಳಿಸಿಕೊಡಿ' ಎಂದು ಅಂಬೇಡ್ಕರ್ ಮುಂದೆ ಭಿಕ್ಷೆ ಬೇಡುವಂತೆ ಕೇಳಿಕೊಂಡಿದ್ದರು. ಅಂಬೇಡ್ಕರ್ ಕರುಣೆಯನ್ನು ತೋರಬೇಕೋ? ತನ್ನ ಧ್ಯೇಯವನ್ನು ಉಳಿಸಿಕೊಳ್ಳಬೇಕೋ, ತನ್ನ ಬುದ್ಧಿಯ ಆದೇಶವನ್ನು ಪಾಲಿಸಬೇಕೋ? ಭವಿಷ್ಯದಲ್ಲಿ ಒಳ್ಳೆಯದನ್ನು ಆಶಿಸಿ, ನಡೆದುಹೋದುದೆಲ್ಲವನ್ನೂ ಕ್ಷಮಿಸಬೇಕೋ, ಇಲ್ಲ ಮುಂದಿನ ಭದ್ರತೆಯನ್ನು ಖಾತ್ರಿಪಡಿಸಿಕೊಳ್ಳಬೇಕೋ? ಹೀಗೆ ಅನೇಕಾನೇಕ ತಾಕಲಾಟಗಳಿಗೆ ಸಿಲುಕಿಕೊಂಡಿದ್ದರು.

ಒಂದು ದೀರ್ಘ ನೋಟವನ್ನು ಗಾಂಧಿಯ ಇಡೀ ದೇಹದ ಮೇಲೆ ಬೀರಿದ ಅಂಬೇಡ್ಕರ್ ಅತ್ಯಂತ ಆಳದ ಉಸಿರು ತೆಗೆದುಕೊಂಡು ಮೆಲುದನಿಯಲ್ಲಿ – ಆದರೆ ದೃಢವಾಗಿ ಮಾತನಾಡಲು ಪ್ರಾರಂಭಿಸಿದರು. 'ಮಹಾತ್ಮಾಜಿ, ನೀವು ನಮಗೆ ಘೋರ ಅನ್ಯಾಯ ಮಾಡುತ್ತಿದ್ದೀರಿ' ಎಂದರು. ಗಾಂಧಿ ಇಳಿದನಿಯಲ್ಲಿ 'ನಾನು ನಿಮಗೆ ಯಾವಾಗಲೂ ಹೀಗೆಯೇ ಕಂಡಿದ್ದೀನಿ' ಎಂದರು. ಒಂದೆರಡು ಕ್ಷಣ ಆದ ಮೇಲೆ, ಗಾಂಧೀಜಿ 'ನಿಮ್ಮ ಸಂಕಟ ನನಗೆ ಅರ್ಥವಾಗುತ್ತಿದೆ. ನನ್ನ ಸಂಪೂರ್ಣ ಸಹಾನುಭೂತಿ ನಿಮ್ಮ ಕಡೆಗಿದೆ. ನಾನು ನಿಮ್ಮೊಂದಿಗಿದ್ದೇನೆ. ಡಾಕ್ಟರ್, ನನ್ನ ಪ್ರಾಣ ಉಳಿಯಬೇಕೆಂದು ನೀವು ಬಯಸುತ್ತೀರಿ ಅಲ್ಲವೇ?' ಎಂದು ಪ್ರಶ್ನಿಸಿದಾಗ, ಅಂಬೇಡ್ಕರ್‌ರರು 'ಹೌದು ಮಹಾತ್ಮಾಜಿ, ನಿಮ್ಮ ಪ್ರಾಣ ಉಳಿಯಬೇಕು; ನಿಮ್ನ ವರ್ಗಗಳ ಏಳ್ಗೆಯನ್ನು ದಯವಿಟ್ಟು ನೀವು ಕೈಗೆತ್ತಿಕೊಳ್ಳಿ; ಅವರನ್ನು ಮುನ್ನಡೆಸಿರಿ, ನಮ್ಮೆಲ್ಲರ ನೇತಾರರಾಗಿ' ಎಂದರು. ಗಾಧೀಜಿ ವಕೀಲ ವೃತ್ತಿಯ ಶೈಲಿಯಲ್ಲಿ, 'ಹಾಗಾದರೆ ನೀವು ಯಾವುದನ್ನು ಕೈಬಿಡಬೇಕು ಮತ್ತು ಯಾವುದನ್ನು ಒಪ್ಪಿಕೊಳ್ಳಬೇಕು ಎಂಬುದನ್ನು ಬಲ್ಲಿರಿ; ಅದನ್ನು ಮಾಡಿ ನನ್ನ ಪ್ರಾಣ ಉಳಿಸಿರಿ' ಎಂದರು. ಅಂಬೇಡ್ಕರ್ ಮೊದಲ ಬಾರಿಗೆ ಗಾಂಧೀಜಿಯನ್ನು ಭೇಟಿ ಮಾಡಲು ಅವರಿದ್ದ ಸ್ಥಳಕ್ಕೆ ಹೋದಾಗ, ಗಾಂಧೀಜಿ, ಅಂಬೇಡ್ಕರ್ ಅವರನ್ನು ಸೌಜನ್ಯಕ್ಕಾದರು ಒಳಕ್ಕೆ ಕರೆಯದೆ ಅವರು ಕಾಯುತ್ತಿದ್ದ ಸ್ಥಳಕ್ಕೆ ಬಂದು

ಮಾತನಾಡಿಸಿದ್ದರು. ಆದರೆ ಈ ದಿನ ಗಾಂಧೀಜಿ ಅವರು ಅಂಬೇಡ್ಕರ್ ಮುಂದೆ ತಮ್ಮ ಪ್ರಾಣ ಭಿಕ್ಷೆಯನ್ನು ಕೇಳುವ ಸ್ಥಿತಿಗೆ ಬಂದಿದ್ದರು.

ಆಗ ಒಡಂಬಡಿಕೆಯಾಯಿತು ಪೂನಾ ಒಪ್ಪಂದ. ಈ ಒಡಂಬಡಿಕೆಯಲ್ಲಿ ನಿಮ್ನ ವರ್ಗಗಳಿಗೆ ಪ್ರತ್ಯೇಕ ಮತ ಕ್ಷೇತ್ರಗಳಿಗೆ ಬದಲಾಗಿ ಮೀಸಲಾತಿಯನ್ನು ಪಡೆಯಲಾಯಿತು. ಮೊದಲಿಗೆ 71 ಸೀಟುಗಳನ್ನು ಕೊಡುವುದಾಗಿ ಬ್ರಿಟಿಷ್ ಸರಕಾರ ಹೇಳಿತ್ತು. ಅಂಬೇಡ್ಕರ್ ಜನಸಂಖ್ಯೆಗೆ ಅನುಗುಣವಾಗಿ 197 ಸೀಟುಗಳನ್ನು ಕೇಳಿದರು. ಅಂಬೇಡ್ಕರ್ ಅನುಯಾಯಿಗಳು ಮತ್ತು ಗಾಂಧೀಜಿ ಪರವಾದ ಕಾಂಗ್ರೆಸ್ ನಾಯಕರ ಜೊತೆಗೆ ದೀರ್ಘ ಮಾತುಕತೆಗಳು ನಡೆದು ಕೊನೆಗೆ 148 ಸೀಟುಗಳನ್ನು ದಲಿತರಿಗೆ ಕೊಡುವುದಾಗಿ ಎರಡೂ ಕಡೆ ಒಪ್ಪಿಗೆಯಾದ ಮೇಲೆ ಒಪ್ಪಂದವಾಯಿತು. ಈ ಒಪ್ಪಂದಕ್ಕೆ ಸೆಪ್ಟೆಂಬರ್ 24, 1932ರಂದು ಯರವಾಡಾ ಜೈಲಿನಲ್ಲಿ ಅಂಬೇಡ್ಕರ್ ಮತ್ತು ಮದನ ಮೋಹನ್ ಮಾಳವೀಯ ಅವರು ಸಹಿ ಮಾಡಿದರು. ಬ್ರಿಟಿಷ್ ಸರಕಾರ ಆಗ ದಲಿತರನ್ನು 'ನಿಮ್ನ ವರ್ಗ' ಎಂದು ಕರೆಯುತ್ತಿತ್ತು. ಅನಂತರ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಸಂವಿಧಾನದಲ್ಲಿ 'ಪರಿಶಿಷ್ಟ ಜಾತಿ' ಮತ್ತು 'ಪರಿಶಿಷ್ಟ ವರ್ಗ'ಗಳೆಂದು ಕರೆಯಲಾಯಿತು. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು. 232-234).

## ಕೊನೆಗೂ ಸಂದ ಗೌರವ

2015ರ ನವೆಂಬರ್ 26, ಒಂದು ಐತಿಹಾಸಿಕ ಲೋಪವನ್ನು ಸರಿಪಡಿಸಿದ ಸುದಿನವಾಗಿ ಸಮಕಾಲೀನ ಚರಿತ್ರೆಯ ಪುಟಗಳಲ್ಲಿ ದಾಖಲಾಯಿತು. ಈ ದಿನವನ್ನು ಸಂವಿಧಾನ ದಿನವೆಂದು ಆಚರಿಸಿದ ನರೇಂದ್ರ ಮೋದಿ ಸರಕಾರ ಆಧುನಿಕ ಭಾರತ ಗಣರಾಜ್ಯದ ನಿರ್ಮಾತೃಗಳ ಮೊದಲ ಸಾಲಿನಲ್ಲಿ ನಿಲ್ಲುವ ಅಂಬೇಡ್ಕರ್ ಅವರಿಗೆ ಕಳೆದ 65 ವರ್ಷಗಳಿಂದ ನಿರಾಕರಿಸಿದ್ದ ಸ್ಥಾನಮಾನವನ್ನು ಸಾರ್ವಜನಿಕವಾಗಿ ಒಪ್ಪಿಕೊಂಡು ನ್ಯಾಯಪಾಲನೆ ಮಾಡಲಾಯಿತು. ಸ್ವತಂತ್ರ ಭಾರತದಲ್ಲಿ ವರ್ಷಗಟ್ಟಲೇ ಅಧಿಕಾರ ನಡೆಸಿದ ಕಾಂಗ್ರೆಸ್ ಪಕ್ಷ, ನೆಹರೂ ಅವರ ಕುಟುಂಬವನ್ನು ಬಿಟ್ಟು ಉಳಿದವರನ್ನೆಲ್ಲ ಕಡೆಗಣಿಸಿತು. ಎಲ್ಲವೂ ನೆಹರೂ, ನೆಹರೂ ಮನೆತನ ಕೇಂದ್ರಿತವಾಗಿ ಹಲವು ಹೋರಾಟಗಾರರು, ದೇಶಕಟ್ಟಿದ ಧೀಮಂತರು ಅನ್ಯಾಯಕ್ಕೆ ಒಳಗಾದರು; ಅಂಥವರಲ್ಲಿ ಅಂಬೇಡ್ಕರ್ ಮುಖ್ಯರು.

ಅಂಬೇಡ್ಕರ್ ಸಂವಿಧಾನ ಕರಡು ಸಮಿತಿಯ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ, ಹಾಕಿದ ಶ್ರಮ, ಪಟ್ಟಪಾಡನ್ನು ತಪಸ್ಸಿಗೆ ಮಾತ್ರ ಹೋಲಿಸಬಹುದು. ಇದನ್ನು ಟಿ. ಟಿ. ಕೃಷ್ಣಮಾಚಾರಿ ಹೀಗೆ ಹೇಳುತ್ತಾರೆ: 'ಒಬ್ಬ ಸದಸ್ಯ ರಾಜೀನಾಮೆ ನೀಡಿದರು, ಇನ್ನೊಬ್ಬ ಸದಸ್ಯ ಅಮೆರಿಕಾ ಪ್ರವಾಸದಲ್ಲಿ ತೇಲಿಹೋಗಿದ್ದರು, ಮತ್ತೊಬ್ಬ ಸದಸ್ಯ ರಾಷ್ಟ್ರ-ರಾಜ್ಯಗಳ ವ್ಯವಹಾರಗಳಲ್ಲಿ ಮಗ್ನರಾಗಿದ್ದರು. ಇನ್ನಿಬ್ಬರು ಅನಾರೋಗ್ಯದ ಕಾರಣದಿಂದ ಸಮಿತಿಯ ಕಲಾಪಗಳಲ್ಲಿ ಭಾಗವಹಿಸಲಿಲ್ಲ. ಹಾಗಾಗಿ ಈ ಸಂಪಿಧಾನ ಕರಡನ್ನು ಬರೆದು ಸಿದ್ಧಪಡಿಸುವ ಸಂಪೂರ್ಣ ಭಾರವನ್ನು ಅಂಬೇಡ್ಕರ್ ಅವರೇ ಹೊರಬೇಕಾಯಿತು. ಒಟ್ಟು ಏಳು ಸದಸ್ಯರ ಕೆಲಸವನ್ನು ಹಗಲು ರಾತ್ರಿ ತಾವೇ ಮಾಡಿದ ಅಂಬೇಡ್ಕರ್ ಸಂಪಿಧಾನದ 90 ಸಾಪಿರ ಸಾಲುಗಳನ್ನು ಕೈಯಲ್ಲೇ ಬರೆದು ಕರಡು ಪ್ರತಿ

ಸಿದ್ಧಪಡಿಸಿದರು. ಈ ಅಮೂಲ್ಯ ಹಸ್ತಾಕ್ಷರದ ಪ್ರತಿಯನ್ನು ಸುರಕ್ಷಿತವಾಗಿ ಸಂಸತ್ತಿನ ಗ್ರಂಥಾಲಯದಲ್ಲಿ ಇಡಲಾಗಿದೆ. ಬಹಳಷ್ಟು ಅಂಬೇಡ್ಕರ್ ವಿರೋಧಿಗಳು ಸಂವಿಧಾನವನ್ನು ಅಂಬೇಡ್ಕರ್ ಒಬ್ಬರೇ ರಚಿಸಿದರೆ ಎಂದು ಪ್ರಶ್ನಿಸುತ್ತಾರೆ. ಅವರೆಲ್ಲ ಸಂಸತ್ ಭವನದಲ್ಲಿರುವ ಈ ಕರಡನ್ನು ನೋಡಬೇಕಾಗಿದೆ.

ಕಾಶ್ಮೀರದ ಇಂದಿನ ಗೊಂದಲಮಯ ಪರಿಸ್ಥಿತಿಗೆ ನೆಹರೂ ಕಾರಣವೆಂದರೆ ತಪ್ಪಾಗಲಾರದು. ಸಂವಿಧಾನ 370ನೇ ವಿಧಿ ಕಾಶ್ಮೀರಕ್ಕೆ ಪ್ರತ್ಯೇಕ ಸ್ಥಾನಮಾನ ನೀಡಿದೆ. ನೆಹರೂ ಅವರ ಈ ಕ್ರಮವನ್ನು ಒಪ್ಪದ ಅಂಬೇಡ್ಕರ್ ತೀವ್ರ ಪ್ರತಿರೋಧ ತೋರಿದ್ದರು. ಅದರ ಫಲಿತಾಂಶವನ್ನು ನಾವು ಈಗ ನೋಡುತ್ತಿದ್ದೇವೆ. ಕಾಶ್ಮೀರದ ಮುಖಂಡ ಶೇಖ್ ಅಬ್ದುಲ್ಲಾ ಅಂಬೇಡ್ಕರ್‌ರನ್ನು ಭೇಟಿ ಮಾಡಿ 370ನೇ ವಿಧಿಗೆ ಬೆಂಬಲ ನೀಡಿ ಎಂದಾಗ, ಅಂಬೇಡ್ಕರ್ ತಮ್ಮ ನಿಲುವನ್ನು ಹೀಗೆ ವಿವರಿಸಿದ್ದರು: 'ಶ್ರೀಮಾನ್ ಅಬ್ದುಲ್ಲಾರವರೇ, ಕಾಶ್ಮೀರವನ್ನು ಭಾರತ, ಪಾಕಿಸ್ತಾನದಿಂದ ರಕ್ಷಿಸಬೇಕು ಎಂದು ನೀವು ಬಯಸುತ್ತೀರಿ. ಕಾಶ್ಮೀರವನ್ನು ಅಭಿವೃದ್ಧಿಗೊಳಿಸಬೇಕು, ಕಾಶ್ಮೀರಿಗಳಿಗೆ ಸಮಾನ ಹಕ್ಕುಗಳನ್ನು ನೀಡಬೇಕು ಆದರೆ, ಅದೇ ಕಾಶ್ಮೀರದಲ್ಲಿ ಭಾರತದ ನಾಗರಿಕರಿಗೆ ಯಾವುದೇ ಹಕ್ಕುಗಳನ್ನು ಕೊಡುವುದಿಲ್ಲ ಎನ್ನುತ್ತೀರಿ. ಇದು ಯಾವ ನ್ಯಾಯ? ನಾನು ಭಾರತದ ಕಾನೂನು ಮಂತ್ರಿ, ನನ್ನ ದೇಶಕ್ಕೆ ದ್ರೋಹ ಬಗೆಯಲು ನಾನು ತಯಾರಿಲ್ಲ' ಎನ್ನುತ್ತಾರೆ. ಅಂಬೇಡ್ಕರ್ ಒಬ್ಬ ಕಟ್ಟಾ ದೇಶಾಭಿಮಾನಿ ಎನ್ನುವುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ. ಆದರೆ ಅರುಣ ಶೌರಿ ಮಾದರಿಯ ಅನೇಕರು ಅಂಬೇಡ್ಕರ್ ಅವರ ದೇಶ ಪ್ರೇಮದ ಬಗ್ಗೆ ಮಾತನಾಡುತ್ತಾರೆ.

ಕಾಶ್ಮೀರದಲ್ಲಿ ಜನಮತ ಗಣನೆ ನಡೆದರೆ ಪಾಕಿಸ್ತಾನ ಮತ್ತು ಬಹುಸಂಖ್ಯಾತ ಮುಸಲ್ಮಾನರಿಗೆ ಲಾಭವಾಗಿ, ಅಲ್ಪಸಂಖ್ಯಾತರಾದ ಹಿಂದೂ, ಬೌದ್ಧ ಮತ್ತು ಸಿಖ್ಖರಿಗೆ ಅನ್ಯಾಯವಾಗುತ್ತದೆ ಎಂದು ಕಂಡುಕೊಂಡ ಅಂಬೇಡ್ಕರ್ ಜನಗಣ ಮತ ನಡೆದರೆ ಮುಸ್ಲಿಂ, ಹಿಂದೂ, ಬೌದ್ಧ, ಸಿಖ್ಖರ ಪ್ರಾಬಲ್ಯದ ಭಾಗಗಳಲ್ಲಿ ಪ್ರತ್ಯೇಕವಾಗಿ ನಡೆಯಬೇಕೆಂದು ಮತ್ತು ಆಯಾ ವರ್ಗಗಳ ಅಭಿಪ್ರಾಯಗಳನ್ನು ಮಾನ್ಯ ಮಾಡಬೇಕೆಂದು ಅಂಬೇಡ್ಕರ್ ಪಟ್ಟು ಹಿಡಿದರು. ನೆಹರೂ ಬೇರೆ ದಾರಿ ಇಲ್ಲದೆ ಜನಮತ ಗಣನೆಯಿಂದ ದೂರ ಸರಿಯಬೇಕಾಯಿತು. ನೆಹರೂ ಅವರಿಂದ ಪಾಕಿಸ್ತಾನಕ್ಕೆ ಸೇರಿಹೋಗಲಿದ್ದ ಕಾಶ್ಮೀರ ಕೊನೆಗೆ ಭಾರತದಲ್ಲಿಯೇ ಉಳಿದುಕೊಂಡಿತು.

ಏಕರೂಪ ನಾಗರಿಕ ಸಂಹಿತೆ ಮತ್ತು ಗೋಹತ್ಯಾ ನಿಷೇಧ ನಮ್ಮ ದೇಶದಲ್ಲಿ ತೀವ್ರ ಸಮಸ್ಯೆಗಳಾಗಿ ಪರಿಣಮಿಸಿವೆ. ಈ ಎರಡೂ ವಿಷಯಗಳಲ್ಲಿ ಅಂಬೇಡ್ಕರ್ ಆಗಲೇ ಸ್ಪಷ್ಟ ನಿಲುವು ತಾಳಿದ್ದರು. ಭಾರತೀಯ ಸಮಾಜದ ಒಟ್ಟಾರೆ ಪ್ರಗತಿಯ ದೃಷ್ಟಿಯಿಂದ ಏಕರೂಪ ನಾಗರಿಕ ಸಂಹಿತೆ ಒಂದು ಅವಶ್ಯಕ ಕ್ರಮ ಎಂದು ಅವರು ತಿಳಿದಿದ್ದರು. ಹಾಗೆಯೇ ಹಿಂದೂ ಧರ್ಮ, ಸಂಸ್ಕೃತಿ ಹಾಗೂ ದೇಶದ ಕೃಷಿ ವ್ಯವಸ್ಥೆಯಲ್ಲಿ ಗೋವಿಗಿದ್ದ ಪ್ರಮುಖ ಪಾತ್ರ ಮತ್ತು ಸ್ಥಾನಮಾನವನ್ನು ಅರ್ಥ ಮಾಡಿಕೊಂಡಿದ್ದರು. ಈ ಕಾರಣಗಳಿಂದ ಏಕರೂಪ ನಾಗರಿಕ ಸಂಹಿತೆ (ಸಂವಿಧಾನದ 44ನೇ ವಿಧಿ) ಮತ್ತು ಗೋಹತ್ಯೆ ನಿಷೇಧ (48ನೇ ವಿಧಿ) ವಿಷಯಗಳನ್ನು ಸಂವಿಧಾನದ ನಿರ್ದೇಶನ ತತ್ವಗಳಲ್ಲಿ ಅಳವಡಿಸಿದರು. ಆದರೆ ಏಕರೂಪ ನಾಗರಿಕ ಸಂಹಿತೆಯನ್ನು ಬಲವಂತವಾಗಿ

ಅನುಷ್ಠಾನಗೊಳಿಸಬಾರದು ಎಂಬುದು ಅವರ ಅಭಿಪ್ರಾಯವಾಗಿತ್ತು (ಬಿ. ಸೋಮಶೇಖರ್, ಪ್ರಜಾವಾಣಿ, 12.12.2015). ಇದನ್ನೆಲ್ಲ ಅರಿಯದ ದಲಿತ ಬಾಂಧವರು ಕೆಲವರು ಟೌನ್ ಹಾಲ್ ಮುಂದೆ, ಬೀದಿಗಳಲ್ಲಿ ಸಾರ್ವಜನಿಕವಾಗಿ ಗೋಮಾಂಸ ಭಕ್ಷಣೆ ಮಾಡಿದರು. ಅಂಬೇಡ್ಕರ್ ಇದ್ದಿದ್ದರೆ ಇವರಿಗೆಲ್ಲ ಏನು ಹೇಳಿರಬಹುದು? ಒಟ್ಟಿನಲ್ಲಿ ಅಂಬೇಡ್ಕರ್ ಅವರು ಯಾವುದೇ ಸಂದರ್ಭದಲ್ಲೂ ರಾಷ್ಟ್ರೀಯ ಹಿತಾಸಕ್ತಿಗಳನ್ನು ಕಡೆಗಣಿಸಲಿಲ್ಲ ಎನ್ನುವುದನ್ನು ಈ ದೇಶದ ಜನರು ಅರಿಯಬೇಕಿದೆ.

## ಮಹಾತ್ಮ ಗಾಂಧೀಜಿಯ ಕೊಲೆ

ದೇಶದ ವಿಭಜನೆಗೆ ಸಂಬಂಧಪಟ್ಟ ಹಾಗೇ ಭಯಂಕರ ಆಘಾತದ ಅಲೆಗಳು ಒಂದಾದ ಮೇಲೊಂದರಂತೆ ಎಡಬಿಡದೆ ಅಪ್ಪಳಿಸುತ್ತಲೇ ಇದ್ದವು. 1948ರ ಜನವರಿ 13ರಂದು ಮಹಾತ್ಮ ಗಾಂಧೀಜಿ ದೆಹಲಿಯಲ್ಲಿ ಉಪವಾಸ ಸತ್ಯಾಗ್ರಹ ಆರಂಭಿಸಿದ್ದರು. ಕೋಮು ಹಿಂಸೆಗೆ ಒಳಗಾಗಿದ್ದ ದೆಹಲಿ ಮುಸಲ್ಮಾನರಿಗೆ ಕೂಡಲೇ ಪುನರ್ ವಸತಿ ಕಲ್ಪಿಸಬೇಕು, ಅವರ ಮಸೀದಿಗಳನ್ನು ಒಡನೆಯೇ ಪುನಃ ಅವರ ಸುಪರ್ದಿಗೆ ಒಪ್ಪಿಸಬೇಕು ಎಂಬ ಬೇಡಿಕೆಗಳ ಜೊತೆಗೆ ಇನ್ನೂ ಐದು ಕಾರಣಗಳಿಗಾಗಿ ಗಾಂಧೀಜಿ ಉಪವಾಸ ಸತ್ಯಾಗ್ರಹ ಆರಂಭಿಸಿದರು. ತತ್ಪರಿಣಾಮವಾಗಿ ಭಾರತ ಸರಕಾರಕ್ಕೆ ಪಾಕಿಸ್ತಾನ 55 ಕೋಟಿ ರೂಪಾಯಿ ಮೊತ್ತದ ಹಣವನ್ನು ಕೊಡಲೇಬೇಕಾದ ಅನಿವಾರ್ಯತೆ ಉಂಟಾಯಿತು. ಇದನ್ನು ಅನೇಕ ಜನರು ಕಟುವಾಗಿ ಖಂಡಿಸಿದ್ದಲ್ಲದೆ, ಹಣ ಕೊಡಬಾರದೆಂದು ಗಟ್ಟಿ ಧ್ವನಿಯಲ್ಲಿ ವಿರೋಧ ವ್ಯಕ್ತಪಡಿಸಿದರು. ಇಂತಹ ಕರಾಳ ಸನ್ನಿವೇಶದ ಗೊಂದಲ, ವಿಕೃತ ವಿನಾಶದ ಮಧ್ಯದಲ್ಲಿಯೇ ನಾಥುರಾಮ್ ಗೋಡ್ಸೆ ಎಂಬ ಮತಾಂಧ 1948ರ ಜನವರಿ 30ರಂದು ಗಾಂಧೀಜಿ ಅವರ ಎದೆಗೆ ಗುಂಡಿಟ್ಟು ಕೊಂದುಬಿಟ್ಟನು. ಇಡೀ ಪ್ರಪಂಚ ಆ ಭಯಾನಕ ಆಘಾತದಿಂದ ತತ್ತರಿಸಿಹೋಯಿತು. ನಾಗರಿಕತೆಯ ಪ್ರಪಂಚದಲ್ಲಿಯೇ ಅತ್ಯಂತ ಶ್ರೇಷ್ಠ ಪುರುಷರಲ್ಲಿ ಒಬ್ಬರಾಗಿದ್ದ, ಅಹಿಂಸೆ ಆಂದೋಳನದ ರೂವಾರಿಯಾಗಿದ್ದ ಗಾಂಧೀಜಿ ಕೊಲೆಯಾದ ಸುದ್ದಿ ಇಡೀ ನಾಗರಿಕ ಪ್ರಪಂಚವನ್ನು ಭೀತಿಯಿಂದ ತತ್ತರಿಸುವಂತೆ ಮಾಡಿತ್ತು.

ಅಂಬೇಡ್ಕರ್, ಗಾಂಧೀಜಿ ಜೊತೆಗೆ ನಿಮ್ನ ವರ್ಗಗಳ ಸಾಮಾಜಿಕ ನ್ಯಾಯಕ್ಕಾಗಿ ಉಗ್ರ ಹೋರಾಟ ನಡೆಸಿದ್ದರೂ, ಗಾಂಧೀಜಿ ಬಗ್ಗೆ ತಮಗಿದ್ದ ಎಲ್ಲ ಕಹಿ ಅನುಭವಗಳನ್ನು ಮರೆತು ಅವರ ದುರಂತ ಸಾವಿಗೆ ಮಮ್ಮಲ ಮರುಗಿದರು. ಬಿರ್ಲಾ ಹೌಸ್‌ನಲ್ಲಿ ಸಂಭವಿಸಿದ ಈ ಆಘಾತಕಾರಿ ಹತ್ಯೆಯ ಸುದ್ದಿ ಕೇಳಿದ್ದೆ ತಡ, ಅಂಬೇಡ್ಕರ್ ಪ್ರಗಾಢವಾಗಿ ದುಃಖಿಸಿದರು. ತಮ್ಮ ದೈಹಿಕ ಅಶಕ್ತತೆಯಿಂದ ನಡೆದಾಡಲೂ ಸಹ ಸಾಧ್ಯವಿಲ್ಲದಂತಹ ಅಸ್ವಾಸ್ಥ್ಯದ ಸ್ಥಿತಿಯಲ್ಲಿದ್ದರೂ ಒಡನೆಯೇ ಅವರು ಬಿರ್ಲಾ ಹೌಸ್ ಕಡೆಗೆ ಧಾವಿಸಿ ಬಂದರು. ಅಲ್ಲಿ ಗಾಂಧೀಜಿ ಮೃತ ದೇಹವನ್ನು ಕಂಡು ನಖಶಿಖಾಂತ ಕಂಪಿಸಿದರು. ದುಃಖ ಉಮ್ಮಳಿಸಿ ಬಂದಿತು. ಅನಂತರ ಗಾಂಧೀಜಿಯ ಶವಯಾತ್ರೆಯಲ್ಲಿ ಪಾಲ್ಗೊಂಡಿದ್ದಲ್ಲದೆ, ಪಾರ್ಥಿವ ಶರೀರವನ್ನು ಅಗ್ನಿಗೆ ಅರ್ಪಿಸುವ ಸ್ಥಳದವರೆಗೂ ಹೋದರು. ಅಂಬೇಡ್ಕರರದ್ದು ಸಂಕೀರ್ಣ ವ್ಯಕ್ತಿತ್ವ, ಮಾನವೀಯ ಮಾರ್ದವತೆ, ಕಹಿಯ ಅನುಭವದ ಕಡುಕೋಪಿ, ಸಲ್ಲಿಲ್ಲದ ಹೃದಯವಂತಿಕೆ – ಈ ಮೂರು ಮುಪ್ಪುರಿಗೊಂಡು ನಿರ್ಮಾಣವಾಗಿದ್ದ ವ್ಯಕ್ತಿತ್ವ ಅವರದು. (ಧನಂಜಯ ಕೀರ್, ಡಾ. ಅಂಬೇಡ್ಕರ್: ಲೈಫ್ ಆ್ಯಂಡ್ ಮಿಶನ್, ಪು. 400).

## ಅಧ್ಯಾಯ–3

**ನನ್ನ ಜನರಿಗೆ ಅಧಿಕಾರ ಇದ್ದಿದ್ದರೆ ಈ ದೇಶ ಎಂದೂ ತನ್ನ ಸ್ವಾತಂತ್ರ್ಯ ಕಳೆದುಕೊಳ್ಳುತ್ತಿರಲಿಲ್ಲ**

**–ಅಂಬೇಡ್ಕರ್.**

# ಸಂಘಟನೆ ಮತ್ತು ಉಪದೇಶ

1942ರ ಜುಲೈ 20ರಂದು ನಾಗಪುರದಲ್ಲಿ ನಡೆದ 'ಆಲ್ ಇಂಡಿಯಾ ಡಿಪ್ರೆಸ್ಡ್ ವುಮೆನ್ಸ್ ಕಾನ್‌ಫೆರನ್ಸ್'ನಲ್ಲಿ 75 ಸಾವಿರಕ್ಕೂ ಹೆಚ್ಚು ಜನರು ಸಮಾವೇಶಗೊಂಡಿದ್ದರು. ಅದರಲ್ಲಿ 25 ಸಾವಿರ ಮಹಿಳೆಯರು ಸೇರಿದ್ದು ಒಂದು ವಿಶೇಷ. ಆ ಸಂದರ್ಭದಲ್ಲಿ ಅಂಬೇಡ್ಕರರು ಮಹಿಳೆಯರನ್ನು ಉದ್ದೇಶಿಸಿ ಹೀಗೆ ಮಾತನಾಡಿದ್ದರು: 'ಈ ಸಂದರ್ಭದಲ್ಲಿ ತಮ್ಮೆಲ್ಲರನ್ನು ಉದ್ದೇಶಿಸಿ ಮಾತನಾಡಲು ನನಗೆ ಬಹಳ ಸಂತೋಷವಾಗುತ್ತಿದೆ. ದಮನಿತ ವರ್ಗಗಳ ಮುನ್ನಡೆಯ ಬಗ್ಗೆ ಆಸಕ್ತಿ ಇರುವ ಯಾರೊಬ್ಬರಿಗೂ ಇದಕ್ಕಿಂತಲೂ ಹೆಚ್ಚಿನ ಸಂತೋಷದ ಸಂದರ್ಭ ಒದಗಿ ಬರಲು ಸಾಧ್ಯವಿದೆಯೇ? ಅದರಲ್ಲೂ ವಿಶೇಷವಾಗಿ, ಇಷ್ಟು ಬೃಹತ್ ಸಂಖ್ಯೆಯಲ್ಲಿ ಸಮಾವೇಶಗೊಂಡಿರುವ ಮಹಿಳೆಯರನ್ನು ನೋಡುವುದೇ ಒಂದು ಅತುಲ ಸಂತೋಷದ ಸಂಗತಿ ಹಾಗೂ ಅಷ್ಟೇ ಮಹತ್ವದ ಚರಿತ್ರಾರ್ಹ ಸಂದರ್ಭ. ಕೇವಲ 10 ವರ್ಷಗಳ ಹಿಂದೆ 20–25 ಸಾವಿರದಷ್ಟು ಸಂಖ್ಯೆಯ ಮಹಿಳೆಯರು ಹೀಗೆ ಸಾರ್ವಜನಿಕವಾಗಿ ಸಮಾವೇಶಗೊಳ್ಳುವುದರ ಬಗ್ಗೆ ಕಲ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ನನಗೆ ಮಹಿಳೆಯರ ಸಂಘಟನೆಯಲ್ಲಿ ಅಪಾರ ನಂಬಿಕೆ ಇದೆ. ಅವರಿಗೆ ಒಂದೇ ಒಂದು ಸಲ ಮನವರಿಕೆಯಾದರೆ ಸಾಕು, ಸಮಾಜದ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿ ಅವರು ಏನು ಬೇಕಾದರೂ ಮಾಡಬಲ್ಲರು ಎಂಬುದು ನನಗೆ ಗೊತ್ತಿದೆ. ಸಾಮಾಜಿಕ ಅನಿಷ್ಟಗಳನ್ನು ಕಿತ್ತೊಗೆಯುವಲ್ಲಿ ಅವರು ಮಹಾನ್ ಸೇವೆ ಸಲ್ಲಿಸಿದ್ದಾರೆ. ಇದನ್ನು ನಾನು ನನ್ನ ಸ್ವಂತ ಅನುಭವದಿಂದಲೇ ಸಾಬೀತುಗೊಳಿಸಬಲ್ಲೆ. ನಾನು ದಮನಿತ ವರ್ಗಗಳ ಮಧ್ಯೆ ಕೆಲಸ ಮಾಡಲಾರಂಭಿಸಿದ ದಿನದಿಂದಲೂ ಪುರುಷರೊಂದಿಗೆ ಮಹಿಳೆಯರನ್ನು ಕೂಡ ಮುನ್ನಡೆಸಿಕೊಂಡು ಹೋಗಲು ತೀರ್ಮಾನಿಸಿದ್ದೆ. ಆದ್ದರಿಂದಲೇ ನಮ್ಮ ಸಮ್ಮೇಳನಗಳು ಯಾವಾಗಲೂ ಹೆಣ್ಣು–ಗಂಡು ಮಿಶ್ರಣದ ಸಮ್ಮೇಳನಗಳಾಗಿರುವುದನ್ನು ನೀವೆಲ್ಲ ಕಾಣುತ್ತಿದ್ದೀರಿ. ಮಹಿಳೆಯರು ಸಾಧಿಸಿರುವ ಪ್ರಗತಿಯ ಮಟ್ಟದ ಆಧಾರದ ಮೇಲೆಯೇ ನಾನು ಒಟ್ಟು ಸಮುದಾಯದ ಪ್ರಗತಿಯನ್ನು ಅಳೆಯುತ್ತೇನೆ. ಹಾಗಾಗಿ ಇಂಥ ಸಮ್ಮೇಳನಗಳನ್ನು ನೋಡಿದಾಗ ಸಹಜವಾಗಿಯೇ ನನಗೆ ನಮ್ಮ ಪ್ರಗತಿಯ ಬಗ್ಗೆ

ಸಂತೋಷವಾಗುತ್ತದೆ, ಹೆಮ್ಮೆ ಚಿಮ್ಮುತ್ತದೆ. ಈ ಸಂದರ್ಭದಲ್ಲಿ ತಾವು ಮನವರಿಕೆ ಮಾಡಿಕೊಂಡು ಸದಾ ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ ಕೆಲವು ಸಂಗತಿಗಳನ್ನು ನಿಮಗೆ ಹೇಳಬಯಸುತ್ತೇನೆ.

...ನೀವು ಯಾವಾಗಲೂ ಸ್ವಚ್ಛವಾಗಿರುವುದನ್ನು ಕಲಿತುಕೊಳ್ಳಬೇಕು. ಎಲ್ಲ ದುಶ್ಚಟಗಳಿಂದ ದೂರವಿರಬೇಕು; ನಿಮ್ಮ ಮಕ್ಕಳಿಗೆ ಸಾಧ್ಯವಾದಷ್ಟು ಹೆಚ್ಚಿನ ಶಿಕ್ಷಣ ಕೊಡಿಸಲು ಯತ್ನಿಸಬೇಕು. ಇದಕ್ಕಿಂತಲೂ ಮುಖ್ಯವಾಗಿ, ಅವರೊಳಗೆ ಮಹತ್ವಾಕಾಂಕ್ಷೆಯನ್ನು ಬೆಳೆಸಬೇಕು. ಮನಸ್ಸು ಮಾಡಿದರೆ ಅವರು ಮಹಾನ್ ವ್ಯಕ್ತಿಗಳಾಗಬಲ್ಲರು ಎಂಬ ಅದಮ್ಯ ವಿಶ್ವಾಸವನ್ನು ಅವರ ಧಮನಿಗಳಲ್ಲಿ ತುಂಬಬೇಕು. ಅವರೊಳಗೆ ಈಗಾಗಲೇ ಮನೆ ಮಾಡಿಕೊಂಡಿರುವ ಕೀಳರಿಮೆಯನ್ನು ಕಿತ್ತೊಗೆಯಬೇಕು. ಮಕ್ಕಳ ಮದುವೆ ಮಾಡಲು ಅವಸರಿಸಬಾರದು. ಅವರು ಬೆಳೆದು ಪ್ರಬುದ್ಧರಾಗುವವರೆಗೆ ತಾಳ್ಮೆಯಿಂದ ಕಾಯಬೇಕು. ಯಾಕೆಂದರೆ ಮದುವೆ ಅವರ ಹೆಗಲಿಗೆ ಜವಾಬ್ದಾರಿಯ ಭಾರ ಹೊರಿಸುತ್ತದೆ. ಆದ್ದರಿಂದ ವಿವಾಹದ ಮೂಲಕ ಅವರು ನಿರ್ವಹಿಸಲೇಬೇಕಾದ ಜವಾಬ್ದಾರಿಯನ್ನು ನಿಭಾಯಿಸುವ ಶಕ್ತಿ ಪಡೆದುಕೊಳ್ಳುವವರೆಗೆ, ಆರ್ಥಿಕವಾಗಿ ಸಬಲರಾಗಬೇಕು. ಇನ್ನು ವಿವಾಹವಾಗುವ ದಂಪತಿಗಳು ಹತ್ತಾರು ಮಕ್ಕಳನ್ನು ಹಡೆಯುವ ಗೋಜಿಗೆ ಹೋಗಬಾರದು. ಹೆಚ್ಚು ಮಕ್ಕಳನ್ನು ಹಡೆದು ಅವರ ಪಾಲನೆ, ಪೋಷಣೆ ಸೂಕ್ತವಾಗಿ ಮಾಡದೇ ಇರುವುದು ಒಂದು ಅಪರಾಧ. ತಾವೆಲ್ಲರೂ ಇದನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು.

...ಪ್ರತಿಯೊಬ್ಬ ತಂದೆ-ತಾಯಿಯ ಆದ್ಯ ಕರ್ತವ್ಯವೆಂದರೆ, ತಮ್ಮ ಮಕ್ಕಳು ತಮಗಿಂತಲೂ ಹೆಚ್ಚು ಸುಖವಾಗಿರುವಂತೆ ನೋಡಿಕೊಳ್ಳಬೇಕು. ತಮ್ಮ ದಾಂಪತ್ಯದ ಆರಂಭದ ದೆಸೆಗಿಂತಲೂ ಉತ್ತಮವಾದ ದಾಂಪತ್ಯದ ಆರಂಭವನ್ನು ತಮ್ಮ ಮಕ್ಕಳಿಗೆ ಕಲ್ಪಿಸಿಕೊಡಬೇಕು. ಇದೆಲ್ಲಕ್ಕೂ ಮಿಗಿಲಾಗಿ, ಮದುವೆಯಾಗುವ ಪ್ರತಿಯೊಬ್ಬ ಹುಡುಗಿಯೂ ತನ್ನ ಪತಿಯ ಸಮಾನ ಮನಸ್ಕಳಾಗಿ ಹೆಜ್ಜೆ ಹಾಕುವ ತಾಕತ್ತನ್ನು ಮೈಗೂಡಿಸಿಕೊಳ್ಳಬೇಕು. ಎಲ್ಲಾ ಸಂದರ್ಭಗಳಲ್ಲಿಯೂ ತನ್ನ ಪತಿಯ ಪ್ರೀತಿಯ ಸ್ನೇಹಿತಳಾಗಿ, ಸಮಾನ ವ್ಯಕ್ತಿತ್ವದ ಸಂಗಾತಿಯಾಗಿ ಇರಬೇಕೇ ವಿನಾ, ಅವನ ಗುಲಾಮಳಾಗಲು ಸುತರಾಂ ಒಪ್ಪಬಾರದು. ನಾನು ಇಲ್ಲಿ ಸಾದರಪಡಿಸಿರುವ ಈ ನಾಲ್ಕಾರು ಉಪದೇಶದ ಮಾತುಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಚಾಚೂ ತಪ್ಪದೆ ಅನುಸರಿಸಿದರೆ ನೀವು ನಿಮಗೆ ಕೀರ್ತಿ ತರಬಲ್ಲಿರಿ. ಜೊತೆಗೆ ದಮನಿತ ವರ್ಗಗಳ ಅಭ್ಯುದಯ ಸಾಧಿಸಬಲ್ಲಿರಿ. ಈ ಮೂಲಕ ಅಪಾರ ಗೌರವದ ಮಾರ್ಗದಲ್ಲಿ ಹೆಜ್ಜೆ ಹಾಕಬಲ್ಲಿರಿ. (ಆಲ್ ಇಂಡಿಯಾ ಡಿಪ್ರೆಸ್ಡ್ ವುಮೆನ್ಸ್ ಕಾನ್‌ಫೆರನ್ಸ್, ನಾಗಪುರದ ಅಧಿವೇಶನದ ನಡವಳಿಕೆಗಳ ವರದಿ, ಪುಟ-65).

* * *

ಡಾ. ಬಾಬಾಸಾಹೇಬ್ ಅಂಬೇಡ್ಕರರು ಶಿಕ್ಷಣದ ಬಗ್ಗೆ ಅನನ್ಯ ಕಾಳಜಿ ಹೊಂದಿದ್ದ ಮಹಾ ಬುದ್ಧಿಜೀವಿಯಾಗಿದ್ದರು. ತಮ್ಮ ದೇಶದ ಪರಿಶಿಷ್ಟ ಜಾತಿ ಹಾಗೂ ಇತರ ಹಿಂದುಳಿದ ವರ್ಗಗಳ ಶೈಕ್ಷಣಿಕ ಮುನ್ನಡೆ ಸಾಧಿಸುವುದೇ ಅವರ ಪರಮ ಗುರಿಯಾಗಿತ್ತು. ಸಾಮಾನ್ಯವಾಗಿ ಅವರೊಬ್ಬ ಶಾಂತ ಸ್ವಭಾವದ ಸಂಭಾವಿತ

ವ್ಯಕ್ತಿಯಾಗಿದ್ದರು. ಆದರೆ ಪರಿಶಿಷ್ಟ ಜಾತಿಗಳನ್ನು ಕುರಿತು ಯಾರಾದರೂ ಅವಹೇಳನಕಾರಿಯಾಗಿ ನಡೆದುಕೊಂಡರೆ, ತುಚ್ಛೀಕರಿಸಿ ಅವಮಾನಿಸುವ ಮಾತಾಡಿದರೆ ಅವರು ಒಡನೆಯೇ ಕೋಪಾವಿಷ್ಟರಾಗಿ ಗುಡುಗುತ್ತಿದ್ದರು. ಸವರ್ಣೀಯ ಹಿಂದೂ ಟೀಕಾಕಾರರಿಗೆ ಅವರು ಹೀಗೆ ಹೇಳುತ್ತಿದ್ದರು: 'ನೋಡಿ ನನ್ನ ಜನರು ಸಾವಿರಾರು ವರ್ಷಗಳಿಂದ ಕಲ್ಪನಾತೀತ ಕಷ್ಟಕೋಟಲೆಗಳಿಗೆ ಬಲಿಯಾಗುತ್ತಾ ಬಂದಿದ್ದಾರೆ. ಕ್ರೌರ್ಯ, ಬಡತನದ ದವಡೆಗೆ ಸಿಕ್ಕಿ ನುಜ್ಜು-ಗುಜ್ಜಾಗಿದ್ದಾರೆ. ಮೇಲ್ಜಾತಿ ಮೇಲ್ವರ್ಗಗಳ ತುಳಿತಕ್ಕೆ ಒಳಗಾದರೂ ಇನ್ನೂ ಬದುಕಿ ಉಳಿದಿದ್ದಾರೆ. ನಾನೀಗ ಇಲಾಖೆಯ ಸಚಿವನಾಗಿ ನಿಮ್ಮ ಮುಂದೆ ನಿಂತಿದ್ದೇನೆ. ಇದು ಮಹತ್ವದ ಸಾಧನೆಯಲ್ಲವೆ?'

ಹಾಗೇ ಮುಂದುವರಿದು ತಮ್ಮ ಸುತ್ತಲಿನವರಿಗೆ ಹೀಗೆ ಹೇಳುತ್ತಿದ್ದರು: 'ಬಾಳಿಗೊಂದು ಮಹತ್ವದ ಗುರಿಯಿರದಿದ್ದರೆ ಸಾಧಿಸಬೇಕಾದ ಮಹಾಮಣಿಹವೊಂದಿರದಿದ್ದರೆ ದೀರ್ಘ ಬದುಕಿನ ಪ್ರಯೋಜನವಾದರೂ ಏನು?' ಅವರ ಬದುಕಿನುದ್ದಕ್ಕೂ ನಡೆಸಿದ ಹೋರಾಟವೊಂದರ ಬಗ್ಗೆ ಅವರಿಗಿದ್ದ ಬದ್ಧತೆ ಹಾಗೂ ಭಕ್ತಿಯನ್ನು ಬಿಚ್ಚಿಡುವ ಒಂದು ಘಟನೆ ನನಗೆ (ಸೋಹನ್‌ಲಾಲ್ ಶಾಸ್ತ್ರಿ) ನೆನಪಾಗುತ್ತದೆ. 1948ನೇ ವರ್ಷ, ಹಾರ್ಡಿಂಗ್ ಅವೆನ್ಯೂನ ಅನತಿ ದೂರದಲ್ಲಿದ್ದ ಶ್ರೀಲಂಕಾದ ಹೈಕಮಿಷನರ್ ಬಂಗಲೆಯಲ್ಲಿ ಅದರ ಸ್ವಾತಂತ್ರ್ಯ ದಿನಕ್ಕೆ ಸಂಬಂಧಿಸಿದ ಒಂದು ಕಾರ್ಯಕ್ರಮವಿತ್ತು. ಆಗಿನ ಗವರ್ನರ್ ಜನರಲ್ ಲಾರ್ಡ್ ಮೌಂಟ್‌ಬ್ಯಾಟನ್ ಹಾಗೂ ಭಾರತದ ಪ್ರಧಾನ ಮಂತ್ರಿ ಜವಾಹರಲಾಲ್ ನೆಹರೂ ಅವರನ್ನೊಳಗೊಂಡ ಅನೇಕ ಗಣ್ಯಾತಿಗಣ್ಯರು ಅಲ್ಲಿ ಸಮಾವೇಶಗೊಂಡಿದ್ದರು. ನಾನು (ಸೋಹನ್‌ಲಾಲ್ ಶಾಸ್ತ್ರಿ) ಬಾಬಾಸಾಹೇಬರಿಗೆ ಕೇಳಿದೆ, 'ನೀವೇಕೆ ಅದರಲ್ಲಿ ಪಾಲ್ಗೊಳ್ಳಲು ಹೋಗುತ್ತಿಲ್ಲ?' ಅವರು ಚಕ್ಕನೆ ಉತ್ತರಿಸಿದರು. 'ನನ್ನ ಅಮೂಲ್ಯ ಸಮಯವನ್ನು ಹಾಳು ಮಾಡಬಯಸುವುದಿಲ್ಲ. ಮೇಲಾಗಿ ಅಲ್ಲಿ ಪ್ರತಿಯೊಬ್ಬರಿಗೂ ಕೊಡಲಾಗುತ್ತಿರುವ ವೈನ್ ಮತ್ತು ವಿಸ್ಕಿ ಆಕರ್ಷಣೆ ನನಗಿಲ್ಲ. ಅಂಥ ಆಮಿಷಗಳನ್ನು ಮೀರಿ ನಿಂತವನು ನಾನು' ಎಂದಿದ್ದರು.

... ಡಾ. ಅಂಬೇಡ್ಕರರು ಕಾನೂನು ಸಚಿವರಾಗಿದ್ದಾಗ ನಾನು ಅವರ ಬಂಗಲೆಯಲ್ಲಿ ಮೂರು ವರ್ಷಗಳ ಕಾಲ ಅವರೊಂದಿಗೆ ವಾಸವಾಗಿದ್ದೆ. ಹಾಗಾಗಿ ಅವರ ಪ್ರತಿಯೊಂದು ನಡೆ, ನುಡಿ, ಹವ್ಯಾಸ ಎಲ್ಲವನ್ನೂ ಹತ್ತಿರದಿಂದ ಕಾಣುವ ಅವಕಾಶ ನನಗೆ ದೊರಕಿತ್ತು. ಅವರು ಸಕಲ-ಸದ್ಗುಣಗಳ ಸಾಕಾರವಾಗಿದ್ದರು. ಅವರದು ಒಬ್ಬ ಸಂತನ ಬದುಕು. ಭಗವಾನ್ ಬುದ್ಧನ ಒಬ್ಬ ಸಚ್ಚರಿತ್ರ ಶಿಷ್ಯನಲ್ಲಿ ನಿರೀಕ್ಷಿಸಲಾಗುವ ಎಲ್ಲ ಗುಣಗಳು ಅವರಲ್ಲಿ ಸಮ್ಮಿಳಿತಗೊಂಡಿದ್ದವು. ಅವರ ಚಾರಿತ್ರ್ಯದ ರಚನೆಯಲ್ಲಿ ಮೂವರು ಮಹಾನ್ ವ್ಯಕ್ತಿಗಳ ಬೋಧನೆಯ ಪಾತ್ರ ಬಹು ಹಿರಿದಾಗಿತ್ತು. ಈ ಮೂವರು ಅವರ ಆದರ್ಶ ಪುರುಷರಾಗಿದ್ದರು. ಮಹಾದಲಿತ ಮಹಾತ್ಮ ಜ್ಯೋತಿಬಾ ಫುಲೆ, ಸಂತ ಕವಿ ಕಬೀರ ಹಾಗೂ ಮಹಾಬೋಧಿಸತ್ವ ಭಗವಾನ್ ಬುದ್ಧ. ಈ ಮೂವರಿಂದಲೂ ಅವರು ಕಲಿತ ಪಾಠಗಳೆಂದರೆ ದಮನಿತ ಜನತೆಯ ಸೇವೆಗೆ ಹಗಲು-ರಾತ್ರಿ ದುಡಿಯುವುದು; ನಕಲಿ ಹಿಂದೂ ಧರ್ಮಗ್ರಂಥಗಳು ಹಾಗೂ ಧಾರ್ಮಿಕ ವಿಧಿ-ಕರ್ಮಗಳನ್ನು ನಿರ್ಭೀತಿಯಿಂದ, ನಿಜದ ನೆಲೆಯಲ್ಲಿ ನಿಂತು ಖಂಡಿಸುವುದು ಹಾಗೂ ನಿರಂತರ ಜ್ಞಾನಪಿಪಾಸುವಾಗಿ ಪ್ರಕಾಂಡ ಪಾಂಡಿತ್ಯದ ಮಾರ್ಗವನ್ನು ಅನುಸರಿಸುವುದು.

ಒಮ್ಮೆ ಖಾಸಗಿಯಾಗಿ ಮಾತನಾಡುತ್ತಿದ್ದಾಗ ಬಾಬಾಸಾಹೇಬರು ನನಗೆ ಹೇಳಿದ ಮಾತು ಮಾನವೀಯವಾಗಿದೆ: 'ಒಬ್ಬ ನೇತಾರನ ಖಾಸಗಿ ಬದುಕು ಮತ್ತು ಸಾರ್ವಜನಿಕ ಜೀವನದ ನಡುವೆ ಕಂದರವಿರಬಾರದು. ಅವು ಅಭಿನ್ನವಾಗಿರಬೇಕು, ಇಲ್ಲದಿದ್ದರೆ ಅವನು ತನ್ನ ಕರ್ತವ್ಯದಲ್ಲಿ ವಿಫಲನಾಗುವುದು ಖಂಡಿತ' ಎಂದಿದ್ದರು. ಅಂಬೇಡ್ಕರ್ ಅವರಿಗೆ ಯಾವುದೇ ವಿಧದ ಮಾದಕವಸ್ತು ಮತ್ತು ಪಾನೀಯಗಳಲ್ಲಿ ಆಸಕ್ತಿಯಿರಲಿಲ್ಲ. ಇನ್ನು ಸಿಗರೇಟ್ ಬೀಡಿಗಳಂತೂ ಎಂದೂ ಸೇದಿದವರಲ್ಲ. ಒಮ್ಮೆ ಅವರು ಕೆಮ್ಮಿನಿಂದ ಬಳಲುತ್ತಿದ್ದಾಗ ಪಾನ್ ತಿನ್ನಬೇಕೆಂದು ನಾನು ಸೂಚಿಸಿದ್ದಲ್ಲದೆ ಒಂದು ಪಾನ್‌ಬಿಡಾ ತಂದುಕೊಟ್ಟೆ. ಅವರು ಅದನ್ನು ಬಾಯಲ್ಲಿಟ್ಟು ಕಚ್ಚಿ ರುಚಿ ನೋಡಿದ್ದೆ ತಡ ಪಟ್ಟನೇ ಉಗುಳಿಬಿಟ್ಟರು. ಅದರ ಕಹಿಯಾದ ರುಚಿ ತಮಗೆ ಎಳ್ಳಷ್ಟೂ ಸೇರಲಿಲ್ಲ ಎಂದು ಹೇಳಿದರು. ಅವರು ಭೋಜನಪ್ರಿಯರೂ ಆಗಿರಲಿಲ್ಲ. ಹಾಗಾಗಿ ಅವರ ಊಟ ತುಂಬಾ ಸರಳವಾಗಿರುತ್ತಿತ್ತು. ಒಂದು ಸಜ್ಜೆ ರೊಟ್ಟಿ, ಒಂದಿಷ್ಟು ತರಕಾರಿ ಪಲ್ಯ, ಸ್ವಲ್ಪ ಅನ್ನ, ಮೊಸರು ಮತ್ತು ಮೀನಿನ ಎರಡು ಮೂರು ತುಂಡುಗಳು. ಮಹಿಳೆಯರ ಬಗ್ಗೆ ಅವರಿಗಿದ್ದ ನಿಲುವು ತುಂಬಾ ಆಸಕ್ತಿದಾಯಕವಾಗಿತ್ತು. ಮಹಿಳೆಯರನ್ನು ಅವರು ಯಾವಾಗಲೂ ಪೂಜ್ಯ ಭಾವನೆಯಿಂದ ನೋಡಿ ಗೌರವಿಸುತ್ತಿದ್ದರು. ಈ ಎಲ್ಲ ಕಾರಣಗಳಿಂದಾಗಿ ಡಾ. ಬಾಬಾಸಾಹೇಬ್ ಭೀಮಾರಾವ್ ಅಂಬೇಡ್ಕರ್ ನಿಜವಾಗಿಯೂ ಒಬ್ಬ ಮಹಾಮಾನವರಾಗಿದ್ದರು. ಮಾನವತೆಯ ಬಗ್ಗೆ ಎಲ್ಲ ಸದ್ಗುಣಗಳು ಶಿವಮಯವಾದ, ಒಳ್ಳೆಯ ಗುಣಗಳು ಅವರಲ್ಲಿ ನೆಲೆಗೊಂಡಿದ್ದವು. ಅವರೊಂದಿಗೆ ಹೋಲಿಸಲು ನಮಗೆ ಇನ್ನೊಬ್ಬ ಭಾರತೀಯ ನೇತಾರ ದೊರೆಯುವುದು ದುರ್ಲಭ. ಆದ್ದರಿಂದಲೇ ಅವರೊಬ್ಬ ಬೋಧಿಸತ್ವರಾಗಿದ್ದರು ಎಂಬುದು ನಿರ್ವಿವಾದ (ಸೋಹನ್‌ಲಾಲ್ ಶಾಸ್ತ್ರಿ, ಡಾ.ಅಂಬೇಡ್ಕರ್ (ಸ್ಮರಣ ಸಂಚಿಕೆ) ಮೆಮೋರಿಯಲ್ ಕಮಿಟಿ ಆಫ್ ಗ್ರೇಟ್ ಬ್ರಿಟನ್, ವುಲ್ವರ್‌ಹ್ಯಾಮ್‌ಟನ್, ಯು.ಕೆ, 1972, ಪುಟ.82).

## ಅನಾರೋಗ್ಯ ಮತ್ತು ಎರಡನೇ ಮದುವೆ

ರಮಾಬಾಯಿ ತೀರಿಕೊಂಡು 14 ವರ್ಷಗಳು ಕಳೆದರೂ ಅಂಬೇಡ್ಕರರು ಒಂಟಿಯಾಗಿಯೇ ಬಾಳುತ್ತ ಬಂದರು. ಅಷ್ಟೇ ಅಲ್ಲ, ತಾವು ಮತ್ತೆ ಮದುವೆ ಮಾಡಿಕೊಳ್ಳಬಾರದೆಂದು ತೀರ್ಮಾನಿಸಿದ್ದರು. ತಮ್ಮ ಪತ್ನಿಯ ಸಾವಿನ ನಂತರ ಸುಮಾರು 10 ವರ್ಷಗಳವರೆಗೆ ಅವರ ಆರೋಗ್ಯ ಕೂಡ ಅಷ್ಟೇನೂ ಚೆನ್ನಾಗಿರಲಿಲ್ಲ. ಕೆಲವು ದಿನಗಳವರೆಗೆ ಅಪೆಂಡಿಸೈಟಿಸ್‌ನಿಂದ ನರಳಿದರೆ ಆಮೇಲೆ ರಕ್ತದ ಒತ್ತಡದಿಂದ ಬಳಲಿದರು. ವಯಸ್ಸು ಹೆಚ್ಚಾದಂತೆಲ್ಲ ಮಧುಮೇಹ ತೀವ್ರಗೊಂಡಿತು. ಅದರಿಂದಾಗಿ ಅವರ ಆರೋಗ್ಯ ಇನ್ನಷ್ಟು ಹದಗೆಟ್ಟಿತು. ಕಣ್ಣಿನ ದೃಷ್ಟಿ ಏರುಪೇರಾಯಿತು. ಜೀವನದುದ್ದಕ್ಕೂ ಅವಿರತವಾಗಿ ನಡೆಸುತ್ತಲೇ ಬಂದ ಹೋರಾಟ, ದಮನಿತರಿಗಾಗಿ ಪಟ್ಟಪಾಡು, ಅನುಭವಿಸಿದ ನೋವು, ಹಗಲುರಾತ್ರಿ ಎನ್ನದೇ ನಿರಂತರ ಓದು-ಬರಹ ಇತ್ಯಾದಿಗಳು ಅವರ ಆರೋಗ್ಯದ ಮೇಲೆ ಅಪಾರ ದುಷ್ಪರಿಣಾಮವನ್ನು ಬೀರಿದ್ದವು. ಅವರ ವಿಶ್ರಮವಿಲ್ಲದ ಬದುಕು ಮೊದಲೇ ಶಿಥಿಲಗೊಂಡಿದ್ದ ಆರೋಗ್ಯವನ್ನು ಮತ್ತಷ್ಟು ಹದಗೆಡಿಸಿತು. ದಿನಂಪ್ರತಿ ಅವನತಿಯ ದಾರಿ ಹಿಡಿದಿದ್ದ ಅವರ ಆರೋಗ್ಯ ಹಲವರನ್ನು

ಕಳವಳಕ್ಕೀಡುಮಾಡಿತು. ವಿಶೇಷವಾಗಿ ಅವರ ಕಟ್ಟಾ ಅನುಯಾಯಿಗಳು ಹಾಗೂ ಹಿತೈಷಿಗಳು ಭೀತಿಯಿಂದ ತತ್ತರಿಸಿದರು. ಇನ್ನೂ ಹೆಚ್ಚಿನದೆಂದರೆ, ಅವರ ಬಲಗೈ ಬಂಟರಂತಿದ್ದ ಕೆಲವರು ದ್ರೋಹ ಬಗೆದು ಅವರಿಂದ ದೂರವಾದರೆ, ಮತ್ತೆ ಕೆಲವರು ನಾಚಿಕೆಗೇಡಿನ ನಡವಳಿಕೆಗಳಲ್ಲಿ ನಿರತರಾದರು. ಇವೆಲ್ಲ ಅಂಬೇಡ್ಕರರ ಮೇಲೆ ಅನಿರ್ವಚನೀಯ ದುಷ್ಪರಿಣಾಮಗಳನ್ನು ಬೀರಿತು. ಅವರ ಹೋರಾಟದ ಫಲವಾಗಿ ಏನೆಲ್ಲ ಲಾಭ ಪಡೆದ ಕೆಲವರು ಆ ಸಂದಿಗ್ಧ ಸಮಯದಲ್ಲಿ ಪಲಾಯನಗೈದರು. ಇಂಥ ಹಲವು ಹತ್ತು ಸಂಗತಿಗಳು ಅಂಬೇಡ್ಕರ್ ಅವರ ಮೇಲೆ ಅಮಿತ ಪರಿಣಾಮವನ್ನುಂಟು ಮಾಡಿದವು.

ಅವರ ಕಟ್ಟಾ ಅನುಯಾಯಿಗಳ ಸದಭಿಲಾಷೆ ಹಾಗೂ ದಿನದಿಂದ ದಿನಕ್ಕೆ ಉಲ್ಬಣಿಸುತ್ತಿದ್ದ ಅನಾರೋಗ್ಯದಿಂದ ವೈದ್ಯರು ನೀಡಿದ ಸಲಹೆ ಸೂಚನೆಗಳ ಮೇರೆಗೆ ಬಾಬಾಸಾಹೇಬರು ತಮ್ಮ ಹಿಂದಿನ ನಿರ್ಧಾರವನ್ನು ಪುನರ್ ಪರಿಶೀಲಿಸಬೇಕಾಗಿ ಬಂದಿತು. ಪರಿಣಾಮವಾಗಿ ಅವರು ತಮ್ಮ ಆರೈಕೆಗೆ ಒಬ್ಬ ಮಹಿಳೆಯನ್ನು ನೇಮಿಸಿಕೊಳ್ಳಬೇಕೆಂಬ ಸಲಹೆ ಬಂದಾಗ ಅವರು ನಿರ್ಭಿಡತೆಯಿಂದ ಹೀಗೆ ಹೇಳಿದರು: 'ಅಂಥ ಮಹಿಳೆ ಬರುವುದಾದರೆ ಬರಲಿ, ಆದರೆ, ಅವಳು ಕಾಯ್ದೆಬದ್ಧವಾಗಿ ನನ್ನೊಂದಿಗೆ ವಿವಾಹವಾದ ಪತ್ನಿಯಾಗಿರಬೇಕೇ ವಿನಾ ಯಾವುದೇ ಒಬ್ಬ ನರ್ಸ್ ಅಥವಾ ಸಂಗಾತಿಯಾಗಿರಬಾರದು. ನರ್ಸ್ ಅಥವಾ ಒಬ್ಬ ಸಹವರ್ತಿಯ ಮಹಿಳೆಯ ಸೇವೆಯನ್ನು ನಾನು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ' ಎಂದಿದ್ದರು.

ಆರೋಗ್ಯವನ್ನು ಅರಸುತ್ತ, ಸಾಧ್ಯವಿದ್ದ ಉತ್ತಮ ಆರೋಗ್ಯ ಉಪಚಾರಕ್ಕಾಗಿ ಹಂಬಲಿಸುತ್ತ ಅಂಬೇಡ್ಕರರು ಮುಂಬೈಗೆ ಬಂದರು. ಅಲ್ಲಿ ಡಾ. ಮಿಸ್. ಶಾರದಾ ಕಬೀರ ಅವರ ಭೇಟಿಯಾಯಿತು. ಅವರು ಜಾತಿಯಿಂದ ಸಾರಸ್ವತ ಬ್ರಾಹ್ಮಣರಾಗಿದ್ದರು. ಪರಿಚಯವಾದದ್ದು ಡಾ. ಮಾಧವ ಜಿ. ಮಾಳ್ವಂಕರ್ ಅವರ ಕ್ಲೀನಿಕ್‌ನಲ್ಲಿ. ಡಾ. ಶಾರದಾ ಕಬೀರ ಅವರು ಅಂಬೇಡ್ಕರರ ಉಪಚಾರಕ್ಕೆ ನಿಯುಕ್ತರಾಗಲು ಮುಂದಾದರು. ತಮ್ಮ ಕರಾಳ ಭವಿಷ್ಯತ್ತಿನ ಬಗ್ಗೆ ಅವಲೋಕಿಸಿದ ಬಾಬಾಸಾಹೇಬರು ತುಸು ಕಾಲ ಚಿಂತನೆ ಮಾಡಿ ಮತ್ತೆ ಗಂಭೀರವಾದ ನಿರ್ಧಾರದ ಬಗ್ಗೆ ಮತ್ತೆಮತ್ತೆ ಯೋಚಿಸಿದರು. ಕೆಲ ಸಮಯದ ಕಾಲ ಡಾ. ಮಿಸ್. ಶಾರದಾ ಕಬೀರರ ಜೊತೆಗೂ ವಿಚಾರ ನಡೆಸಿದ ಮೇಲೆ ಅಂಬೇಡ್ಕರ್ ಅವರು ಕೊನೆಗೂ ಎರಡನೇ ಮದುವೆಯಾಗಲು ತೀರ್ಮಾನ ತೆಗೆದುಕೊಂಡರು. 1948ರ ಏಪ್ರಿಲ್ 15 ಗುರುವಾರದಂದು ಅಂಬೇಡ್ಕರ್ ತಮ್ಮ ದೆಹಲಿ ನಿವಾಸದಲ್ಲಿ ಸಿವಿಲ್ ಮ್ಯಾರೇಜ್ ಆ್ಯಕ್ಟಿನ ಪ್ರಕಾರ ಮದುವೆ ಮಾಡಿಕೊಂಡರು. ದೆಹಲಿಯ ಹಾರ್ಡಿಂಜ್ ಅವೆನ್ಯೂದಲ್ಲಿದ್ದ ಬಾಬಾಸಾಹೇಬರ ಮನೆಯಲ್ಲಿ ವಿವಾಹ ಯಾವುದೇ ಸದ್ದುಗದ್ದಲವಿಲ್ಲದೆ ಸರಳ ರೀತಿಯಲ್ಲಿ ನಡೆಯಿತು.

## ಅಂಬೇಡ್ಕರರ ಓದು ಬರಹದ ದಾಹ

ಯು. ಆರ್. ರಾವ್ (ವಿಜ್ಞಾನಿ ಯು.ಆರ್.ಆರ್.ರಾವ್ ಅಲ್ಲ) ಅಂಬೇಡ್ಕರ್ ಬಗ್ಗೆ ದಾಖಲಿಸಿರುವ ಕೆಲವು ವಿಷಯಗಳು ಹೀಗಿವೆ: 'ನನಗಿನ್ನೂ ಚೆನ್ನಾಗಿ ನೆನಪಿದೆ. 1935–37ರಲ್ಲಿ ನಾನು ಮುಂಬೈಯ ಸರ್ಕಾರಿ 'ಲಾ' ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ

ಡಾ. ಅಂಬೇಡ್ಕರರು ಕೆಲಕಾಲದವರೆಗೆ ಆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರು ನಮಗೆ ಮರ್ಕೆಂಟೈಲ್ ಲಾ ಬೋಧಿಸುತ್ತಿದ್ದರು. ಕ್ಲಾಸಿನಲ್ಲಿ ಮೆಲ್ಲನೆ ಅಳೆದು ತೂಗಿದಂತೆ ಶಬ್ದಗಳನ್ನು ಬಳಸುತ್ತ, ತುಂಬು ಧ್ವನಿಯಲ್ಲಿ ಪಾಠ ಮಾಡುತ್ತಿದ್ದ ಅವರ ವ್ಯಕ್ತಿತ್ವದ ನಿಲುವಿನ ಘನಗಾಂಭೀರ್ಯ ಠೀವಿ ನನ್ನ ಮನದ ಮೇಲೆ ಇವತ್ತಿಗೂ ಅಚ್ಚೊತ್ತಿದಂತಿದೆ. ಕಾನೂನು ವಿದ್ಯಾರ್ಥಿಯಾಗಿದ್ದ ನಾನು ಆಗ ಅವರನ್ನು ಕಂಡು ಮಾತನಾಡುವ ಹೆಚ್ಚಿನ ಸಂದರ್ಭಗಳೇನೂ ಒದಗಿ ಬಂದಿರಲಿಲ್ಲ. ಆಮೇಲೆ ಎಷ್ಟೋ ವರ್ಷಗಳ ನಂತರವೇ ನಾನು ಅವರನ್ನು ವೈಯಕ್ತಿಕವಾಗಿ ಅರಿಯುವ, ನನ್ನನ್ನು ಪರಿಚಯಿಸಿಕೊಳ್ಳುವ ಅವಕಾಶ ಲಭಿಸಿತು. ಮುಂಬೈನ ಠಕ್ಕರ್ ಸಂಸ್ಥೆ ಪ್ರಕಟಿಸುತ್ತಿದ್ದ ಕೃತಿಗಳಿಗೆ ನಾನು ಸಲಹೆಗಾರನಾಗಿದ್ದೆ.

...ಠಕ್ಕರ್ ಸಂಸ್ಥೆಯಲ್ಲಿ ಪ್ರಕಟವಾಗುತ್ತಿದ್ದ ಅಂಬೇಡ್ಕರರ ಎಷ್ಟೋ ಕೃತಿಗಳು ಭರದಿಂದ ಮಾರಾಟವಾಗಿ ಹಲವು ಆವೃತ್ತಿಗಳನ್ನು ಕಾಣುತ್ತಿದ್ದವು. ಆ ಎಲ್ಲಾ ಆವೃತ್ತಿಗಳ ರಾಯಧನದ ಗಮನಾರ್ಹ ಭಾಗವನ್ನು ಅವರು ಮತ್ತೆಮತ್ತೆ ಪುಸ್ತಕ ಖರೀದಿಸುವುದಕ್ಕಾಗಿಯೇ ಖರ್ಚು ಮಾಡುತ್ತಿದ್ದರು. ಹೀಗಾಗಿ ಅವರ ಸ್ವಂತದ ಗ್ರಂಥಾಲಯ ಅಗಾಧವಾಗಿ ಬೆಳೆಯುತ್ತಲೇ ಹೋಯಿತು. ನಿಜವೆಂದರೆ, ಒಂದು ಸಲವಂತೂ ಅವರು ಖರೀದಿಸಿದ ಪುಸ್ತಕಗಳ ಒಟ್ಟು ಮೊತ್ತ ಅವರಿಗೆ ಬರಬೇಕಾಗಿದ್ದ ರಾಯಧನಕ್ಕಿಂತಲೂ ಹೆಚ್ಚಾಗಿತ್ತು. ಪರಿಣಾಮವಾಗಿ ಅವರು ಹಣದ ಅಡಚಣೆಯ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದು ನನಗೆ ಇವೊತ್ತಿಗೂ ಮರೆಯಲಾಗುತ್ತಿಲ್ಲ.

ಬಾಬಾಸಾಹೇಬ್ ಅವರು ನಗರಕ್ಕೆ ಬಂದಿಳಿದ ಸುದ್ದಿ ನೋಡುನೋಡುವುದರಲ್ಲಿಯೇ ಪುಸ್ತಕ ವಿಭಾಗದ ತುಂಬಾ ಸುತ್ತಾಡುತ್ತಿತ್ತು. ಅಂಗಡಿಯ ಸಹಾಯಕರೆಲ್ಲ ಥಟ್ಟನೆ ಎಚ್ಚರಗೊಂಡವರಂತೆ ತಮ್ಮನ್ನು ತಾವು ಚಟುವಟಿಕೆಯಿಂದ ತೊಡಗಿಸಿಕೊಂಡು ಅನೇಕ ವಿಷಯಗಳ ಕುರಿತು ಪುಸ್ತಕಗಳನ್ನು ಸಂಗ್ರಹಿಸಿ ಅವುಗಳ ಪಟ್ಟಿಯನ್ನು ತಯಾರಿಸಿ ಇಡುತ್ತಿದ್ದರು. ಅಂಬೇಡ್ಕರರ ಆಸಕ್ತಿಯ ಕ್ಷೇತ್ರಗಳು ಅವರಿಗೆಲ್ಲ ಚಿರಪರಿಚಿತವಾಗಿದ್ದವು. ಅಂಬೇಡ್ಕರರು ಠಕ್ಕರ್ ಪುಸ್ತಕ ಅಂಗಡಿಗೆ ಬರುವ ವೇಳೆಗಾಗಲೇ ಅವರು ಸಾಮಾನ್ಯವಾಗಿ ಕುಳಿತುಕೊಳ್ಳುತ್ತಿದ್ದ ವಿಶೇಷ ಕುರ್ಚಿಯ ಪಕ್ಕದ ಮೇಜಿನ ಮೇಲೆ ಹಲವಾರು ಗ್ರಂಥಗಳನ್ನು ಪೇರಿಸಿ ಇಡುತ್ತಿದ್ದರು. ಅವರು ಬಂದು ಕುಳಿತುಕೊಂಡಿದ್ದೆ, ಮ್ಯಾನೇಜರ್ ಒಂದೊಂದು ಪ್ರತಿಯನ್ನು ಎತ್ತಿ ಬಾಬಾಸಾಹೇಬರ ಕೈಗೆ ಕೊಡುತ್ತಿದ್ದರು. ಅವರು 'ಇರಲಿ' ಅಥವಾ 'ಬೇಡ' ಎಂಬ ಸಂಕ್ಷಿಪ್ತ ಆದೇಶದ ಮೂಲಕ ಗ್ರಂಥಗಳನ್ನು ಸ್ವೀಕರಿಸುವ ಇಲ್ಲವೇ ತಿರಸ್ಕರಿಸುವ ಕೆಲಸದಲ್ಲಿ ತೊಡಗಿರುತ್ತಿದ್ದರು. ಒಂದೆರಡು ಗಂಟೆಗಳವರೆಗೆ ಅವರು ಹೀಗೆ ಕುಳಿತು ಆಯ್ಕೆ ಮಾಡಿದ್ದರ ಪರಿಣಾಮವಾಗಿ ಸಂಗ್ರಹಗೊಂಡ ಪುಸ್ತಕಗಳನ್ನು ಇಬ್ಬರು/ಮೂವರ ಸಹಾಯದಿಂದ ಹೊತ್ತೊಯ್ಯಬೇಕಾಗುತ್ತಿತ್ತು. ಪುಸ್ತಕಗಳ ಬಂಡಲ್‌ಗಳನ್ನು ಎತ್ತಿ ಅವರ ಕಾರಿನೆಡೆಗೆ ಸಾಗಿಸುತ್ತಿದ್ದರೆ, ಕೈಗಳಲ್ಲಿ ಹಿಡಿದುಕೊಂಡ ಕೃತಿಗಳು ಬಂಡಲ್‌ಗಳು ಅವರ ತುಟಿ–ಗದ್ದಗಳಿಗೆ ತಾಗುತ್ತಿದ್ದವು. ಇದು ಯಾವಾಗಲೋ ಒಮ್ಮೆ ಸಂಭವಿಸುತ್ತಿದ್ದ ಘಟನೆ ಅಲ್ಲ, ಬಾಬಾಸಾಹೇಬರು ನಗರಕ್ಕೆ ಬಂದು ಠಕ್ಕರ್ ಅಂಗಡಿಗೆ ಭೇಟಿ ಕೊಟ್ಟಾಗಲೆಲ್ಲ ಇಂಥ ಪ್ರಸಂಗಗಳು ಪುನರಪಿ ಸಂಭವಿಸುತ್ತಲೇ ಇರುತ್ತಿದ್ದವು.

ಬಾಬಾಸಾಹೇಬರು ಹೀಗೆ ನಿಯಮಿತವಾಗಿ ಅಂಗಡಿಯಿಂದ ಒಯ್ಯುತ್ತಲೇ ಇದ್ದ ಅಗಣಿತ ಗ್ರಂಥಗಳ ರಾಶಿ ನೋಡಿ ದಿಗಿಲುಗೊಂಡ ನಾನು ಸುಮ್ಮನಿರಲಾರದೆ ಒಮ್ಮೆ ಕೇಳಿಯೇ ಬಿಟ್ಟೆ, 'ಪ್ರಿಯ ಡಾಕ್ಟರ್ ಸಾಹೇಬರೆ ನಾನು ನಿಮಗೊಂದು ಪ್ರಶ್ನೆ ಕೇಳಬಹುದೆ? ನೀವು ಖರೀದಿಸುವ ಈ ಎಲ್ಲಾ ಗ್ರಂಥಗಳನ್ನು ಓದಲು ನಿಮಗೆ ಸಮಯವಾದರೂ ಹೇಗೆ ಸಿಕ್ಕುತ್ತದೆ?' ಬಾಬಾಸಾಹೇಬರು ತಮ್ಮ ಕನ್ನಡಕದ ಒಳಗಿನಿಂದಲೇ ನನ್ನೆಡೆಗೆ ದೃಷ್ಟಿ ಬೀರಿ ಕೇಳಿದರು, 'ರಾವ್ ಅವರೆ, ಓದುವುದೆಂದರೆ ಏನೆಂದು ಅರ್ಥಮಾಡಿಕೊಂಡಿದ್ದೀರಿ? ಮೊದಲು ಅದು ಹೇಳಿ ನನಗೆ' ಎಂದರು. ಒಮ್ಮೆಲೆ ತುಸು ಚಕಿತನಾದ ನಾನು ಮೆಲ್ಲನೆ ಉಸುರಿದೆ. 'ಆಂ... ನನ್ನ... ಮಾತಿನ ಅರ್ಥ... ಪುಸ್ತಕವನ್ನು ಓದುವುದೆಂದರೆ ಮೊದಲಿನಿಂದ ಕೊನೆಯ ಪುಟದವರೆಗೂ ಎಲ್ಲವನ್ನೂ ಅವಲೋಕಿಸುವುದು... ಅಂದರೆ ಅವಲೋಕಿಸಿ ಅರಗಿಸಿಕೊಳ್ಳುವುದು'. ಡಾಕ್ಟರ್ ಮುಗುಳ್ನಕ್ಕು ಹೇಳಿದರು 'ಅದು ನನ್ನ ಓದಿನ ಶೈಲಿ ಅಲ್ಲ, ನಾನು ಹೀಗೆ ಆದಿಯಿಂದ ಅಂತ್ಯದವರೆಗೆ ಓದುವುದು ವಿರಳ. ಮೊದಲಿನಿಂದ ಕೊನೆಯ ಪುಟದವರೆಗೂ ಆಳವಾದ ಅಧ್ಯಯನಕ್ಕೆ ಅರ್ಹವಾದ ಕೆಲವೇ ಕೆಲವು ಗ್ರಂಥಗಳಿರುತ್ತವೆ. ಒಂದು ವಿಷಯ ಕುರಿತು ನನ್ನ ಆಸಕ್ತಿಯ ಒಂದು ಗ್ರಂಥ ಹೊಸದಾಗಿ ಕಣ್ಣಿಗೆ ಬಿದ್ದರೆ ನಾನು ಮೊದಲು ಓದುವುದು ಅದರ ಬೆನ್ನುಡಿ ಮತ್ತು ಮುನ್ನುಡಿಗಳನ್ನು. ಪ್ರಸ್ತಾವನೆಯನ್ನು ಓದುವ ಮುಂಚೆ ಅದರ ಪರಿವಿಡಿಯ ಮೇಲೆ ಕಣ್ಣಾಡಿಸುತ್ತೇನೆ. ಯಾವ ಅಧ್ಯಾಯಗಳು... ಉದಾಹರಣೆಗೆ ಸಮಾಜವಾದದ ಕುರಿತು ನನಗೆ ಹೊಸ ವಿಚಾರಗಳನ್ನು ಕೊಡಬಹುದೆ ಇಲ್ಲವೇ ಎಂಬುವುದನ್ನು ನಿರ್ಧರಿಸುತ್ತೇನೆ. ಆನಂತರ ಕೇವಲ ಆ ಪುಟಗಳನ್ನು ಮಾತ್ರ ಓದಿ ಮನನ ಮಾಡಿಕೊಳ್ಳುತ್ತೇನೆ. ಇನ್ನು ಉಳಿದಿದ್ದೆಲ್ಲ ಪರಿಚಯವಿರುವಂಥದ್ದೆ. ಇಷ್ಟು ಮಾಡಿ ಮುಗಿಸಿದರೆ ಸಾಕು ನಾನು ಆ ಗ್ರಂಥಗಳನ್ನು ಓದಿ ಮುಗಿಸಿದೆನೆಂದೇ ಅರ್ಥ.'

ವಾಚನ, ವ್ಯಾಸಂಗದಲ್ಲಿ ಅವರು ತೋರುತ್ತಿದ್ದ ವಿವೇಕ ಹಾಗೂ ಸೂಕ್ಷ್ಮ ದೃಷ್ಟಿಗೆ ಅವರ ಮಾತು ಸಾಕ್ಷಿಯನ್ನೊದಗಿಸಿತು. ನಿಜವಾಗಿಯೂ ಅದು ತಂಬ ಫಲಪ್ರದವಾದ ಓದಿನ ವಿಧಾನವೆಂಬುದು ನನಗೆ ಮನದಟ್ಟಾಯಿತು. ಪ್ರಾಯಶಃ ಇಂಥ ಆಯ್ಕೆಯ ಓದಿನ ಮೂಲಕವೇ ಅವರು ಅಪಾರ ಜ್ಞಾನರಾಶಿಯನ್ನು ಪಡೆದುಕೊಂಡಿದ್ದರು. ಯಾವುದೇ ದೃಷ್ಟಿಯಿಂದ ನೋಡಿದರೂ ಅವರ ಓದಿನ ಅರಿವು ಅಗಾಧವಾಗಿತ್ತು. (ಮಹಾತ್ಮ ಗಾಂಧಿ–ಬಾಬಾಸಾಹೇಬ ಡಾ. ಅಂಬೇಡ್ಕರರ ಸಮಗ್ರ ಸಂಗ್ರಹಿತ ಕೃತಿಗಳ ಉಪಮುಖ್ಯ ಸಂಪಾದಕರು, ಅಂಬೇಡ್ಕರ್ ಲೋಕೋಪಕಾರಿ ಸಂಸ್ಥಾನ, ನವದೆಹಲಿ).

ಅವರ ಇನ್ನೊಂದು ರೀತಿಯ ಓದು ಹೇಗಿತ್ತೆಂದರೆ, ಪೊಲೋನಿಯಸ್ ಎಂಬವರು ಹೀಗೆ ದಾಖಲಿಸಿದ್ದಾರೆ: 'ಅವರು (ಅಂಬೇಡ್ಕರ್) ತಮ್ಮ ಮನದ ಮೇಲೆ ಅತ್ಯಂತ ತೀವ್ರ ಪ್ರಭಾವ ಅಚ್ಚೊತ್ತಿದ್ದ ಪುಸ್ತಕಗಳ ಬಗ್ಗೆ ನನಗೆ ಒಮ್ಮೆ ಹೇಳಿದ್ದರು. ಟಾಲ್‌ಸ್ಟಾಯ್‌ನ ಜೀವನ ಕುರಿತ ಕೃತಿ, ವಿಕ್ಟರ್ ಹ್ಯೂಗೋನ ಲೇ ಮಿಜರಬಲ್ ಹಾಗೂ ಥಾಮಸ್ ಹಾರ್ಡಿಯ ಫಾರ್ ಫ್ರಾಮ್ ದ ಕ್ರೌಡ್ ಗ್ರಂಥಗಳನ್ನು ಓದಿ ಅವರು ಎಷ್ಟೋ ಸಲ ಅತ್ತಿದ್ದರಂತೆ. ಪುಸ್ತಕಗಳ ಬಗ್ಗೆ ಅವರಿಗಿದ್ದ ಭಕ್ತಿ ಎಷ್ಟು ಪ್ರಗಾಢವಾಗಿತ್ತೆಂದರೆ ಎಷ್ಟೋ ಸಲ ಕೈಗೆತ್ತಿಕೊಂಡ ಕೃತಿಯನ್ನು ಮುಗಿಯುವವರೆಗೂ ಕೆಳಗಿಡುತ್ತಿರಲಿಲ್ಲ. ಪ್ರತಿದಿನ ರಾತ್ರಿ ಓದಲು ಕುಳಿತರೆ ಒಮ್ಮೊಮ್ಮೆ ಮಾರನೆಯ ದಿನದ ಬೆಳಗಿನ ಜಾವದವರೆಗೂ ಓದುತ್ತಲೇ

ಇರುತ್ತಿದ್ದರು. ಇನ್ನು ಬರವಣಿಗೆಯ ಬಗ್ಗೆ ಹೇಳುವುದಾದರೆ, ಅವರದು ಬಹು ಬಲಿಷ್ಠವಾದ ಬರವಣಿಗೆ; ಸ್ವೋಪಜ್ಞತೆಯಿಂದ ಕೂಡಿದ್ದ ಶಕ್ತಿಯುತವಾದ ಶೈಲಿ. ಅವರು ಲೇಖನ ಬರೆಯುವ ಕಲೆಯಲ್ಲಿ ಉಜ್ವಲ ಯಜಮಾನರಾಗಿದ್ದರು. (ಪೊಲೋನಿಯಸ್, ಜೈಭೀಮ್ ಪತ್ರಿಕೆಯ ವಿಶೇಷ ಸಂಚಿಕೆ, ಏಪ್ರಿಲ್ 13, 1947 ಪು.10)

ಇನ್ನು ತೋಟಗಾರಿಕೆಯ ಬಗ್ಗೆ ಹೇಳುವುದಾದರೆ ಅವರ ದೆಹಲಿ ಮನೆಯ ಆವರಣದಲ್ಲಿದ್ದ ತೋಟ ಅತ್ಯುತ್ತಮವೆಂಬ ಖ್ಯಾತಿಗೆ ಪಾತ್ರವಾಗಿತ್ತು. ಅಷ್ಟೇ ವರ್ಣಮಯವಾಗಿತ್ತು. ಅದನ್ನು ಲಂಡನ್ನಿನ 'ಡೇಲಿ ಮೇಲ್' ಪತ್ರಿಕೆ ಪ್ರಶಂಸಿಸಿತ್ತು. ಬಾಬಾಸಾಹೇಬರಿಗೆ ನಾಯಿಗಳೆಂದರೆ ಎಲ್ಲಿಲ್ಲದ ಪ್ರೀತಿ. ಅವರ ಶ್ವಾನ ಪ್ರೇಮ ಅನನ್ಯವಾಗಿತ್ತು. ಪ್ರಾಯಶಃ ಅದಕ್ಕೆ ಕಾರಣ, ನಾಯಿ ಅತ್ಯಂತ ಸ್ವಾಮಿನಿಷ್ಠೆಯ ಪ್ರಾಣಿ ಎನ್ನುವುದು. ಒಮ್ಮೆ ಅದರ ಜೊತೆಗೆ ಆಪ್ತತೆ ಸಾಧಿಸಿಕೊಂಡರೆ ಅಂತಿಮ ಕಾಲದವರೆಗೂ ಕೃತಜ್ಞತಾ ಮೂರ್ತಿಯಾಗಿ ಉಳಿದುಕೊಳ್ಳುತ್ತದೆ. ಒಮ್ಮೆ ಅವರ ಸಾಕು ನಾಯಿಯೊಂದು ಅಪಘಾತದಲ್ಲಿ ಸತ್ತಾಗ ಬಾಬಾಸಾಹೇಬರು ಚಿಕ್ಕ ಮಗುವಿನ ಹಾಗೆ ಬಿಕ್ಕಿಬಿಕ್ಕಿ ಅತ್ತಿದ್ದರಂತೆ.

## ಬಡವರ ಬಗ್ಗೆ ಕಾಳಜಿ

ಬಾಲ್ಯ ಮತ್ತು ತಾರುಣ್ಯದಲ್ಲಿ ಅತ್ಯಂತ ಬಡತನ ಅನುಭವಿಸಿದ್ದ ಅಂಬೇಡ್ಕರ್ ಅನಂತರ ಸಾಮಾಜಿಕ ದಬ್ಬಾಳಿಕೆ ಅನುಭವಿಸುವವರ ಮಹಾ ಮಿತ್ರರಾಗಿದ್ದುದರಲ್ಲಿ ಸೋಜಿಗ ಏನೂ ಇಲ್ಲ. ಅವರು ವೈಸರಾಯ್‌ನ ಎಕ್ಸಿಕ್ಯೂಟಿವ್ ಕಛೇರಿಯಿಂದ ಹಿಂದಿರುಗುವಾಗ ಓಣಿಯೊಂದರ ಮೂಲೆಯಲ್ಲಿ ಒಬ್ಬ ಮುದುಕ ಹರಿದ ಬಟ್ಟೆಯಲ್ಲಿ ಮುದ್ದೆಯಾಗಿ ಬಿದ್ದುಕೊಂಡು ನೋವಿನಿಂದ ನರಳುತ್ತಿರುವುದು ಅವರ ಗಮನಕ್ಕೆ ಬಂದಿತು. ಆ ನಿರ್ಭಾಗ್ಯ ಜೀವಿಯನ್ನು ಕಂಡು ಅವರ ಹೃದಯ ಕರಗಿ ನೀರಾಯಿತು. ವಯೋವೃದ್ಧ ರೋಗಿಯನ್ನು ತಮ್ಮ ಕಾರಿನಲ್ಲಿ ಮನೆಗೊಯ್ದು ಊಟಕೊಟ್ಟು ಆಶ್ರಯ ಕಲ್ಪಿಸಿ ಬಟ್ಟೆಬರೆಗಳನ್ನು ನೀಡಿ ಅವರ ವೈದ್ಯಕೀಯ ಉಪಚಾರಕ್ಕೆ ಸೂಕ್ತ ವ್ಯವಸ್ಥೆ ಮಾಡಿಸಿದರು. ಆ ವ್ಯಕ್ತಿ ಗುಣಮುಖನಾದ ಮೇಲೆ ಅವರನ್ನು ತಮ್ಮ ಮನೆಯಲ್ಲಿಯೇ ಕೆಲಸಕ್ಕಿಟ್ಟುಕೊಂಡರು.

ದೆಹಲಿಯಲ್ಲಿದ್ದಾಗ ಅವರ ನವದೆಹಲಿಯ ಬಂಗ್ಲಾ ಪ್ರತಿನಿತ್ಯವೂ ನೂರಾರು ಜನರ ಆಗಮನಕ್ಕೆ ಸಾಕ್ಷಿಯಾಗಿತ್ತು. ಎಷ್ಟೋ ಜನ ಸರಕಾರಿ ಕಿರಿಯ ಅಧಿಕಾರಿಗಳು, ಪ್ಯೂನ್, ಅಟೆಂಡರ್‌ಗಳು, ಕಾರ್ಮಿಕರು ಹೀಗೆ ಇನ್ನೆಷ್ಟೋ ತರಹದ ಜನರು ತಮ್ಮ ಸಮಸ್ಯೆ ದುಃಖ-ದುಮ್ಮಾನಗಳನ್ನು ಹೊತ್ತು ಬಾಬಾಸಾಹೇಬರ ಬಳಿಗೆ ಬರುತ್ತಿದ್ದರು. ಅವರೆಲ್ಲಾ ಸಮಸ್ಯೆಗಳನ್ನು ಕಿವಿಕೊಟ್ಟು ಕೇಳಿ ಸಾಧ್ಯವಿದ್ದ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದರು, ಇಲ್ಲವೇ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಈ ಕಾರ್ಯಕ್ರಮಗಳ ತೀವ್ರತೆಯ ವ್ಯಾಪ್ತಿ ಎಷ್ಟು ವಿಸ್ತರಿಸಿತ್ತೆಂದರೆ ಕ್ರಮೇಣ ಅವರ ಬಂಗ್ಲೆಯ ಸುತ್ತಮುತ್ತಲಿನ ಜನರು ಅವರ ಮನೆಯನ್ನು ಇನ್ಸಾಫ್-ಕಿ-ಕೋಟೆ (ನ್ಯಾಯದ ಅರಮನೆ) ಎಂದು ಕರೆಯಲಾರಂಭಿಸಿದರು. ಬಾಬಾಸಾಹೇಬರು ದೆಹಲಿಯ ತಮ್ಮ ಕಚೇರಿಯನ್ನು ಖಾಲಿ ಮಾಡಿದಾಗ ಅವರು ಮೊಟ್ಟಮೊದಲು ಕೈಗೊಂಡ ಕೆಲಸವೆಂದರೆ, ತಮ್ಮ ಕಚೇರಿ ಮತ್ತು ಮನೆಯಲ್ಲಿ ಕೆಲಸಕ್ಕಿದ್ದ ಸಿಬ್ಬಂದಿಗೆ ಸೂಕ್ತ ಬದಲಿ ಕೆಲಸದ ವ್ಯವಸ್ಥೆ ಮಾಡಿಸಿದ್ದು; ತಮ್ಮ

ಖಾಸಗಿ, ಆಪ್ತ ಕಾರ್ಯದರ್ಶಿಗಳಿಂದ ಹಿಡಿದು ಕಸ ಗುಡಿಸುವವರವರೆಗೂ ಎಲ್ಲರ ವರ್ತಮಾನ ಮತ್ತು ಭವಿಷ್ಯತ್ತಿನ ಯೋಗಕ್ಷೇಮಕ್ಕಾಗಿ ಅವಶ್ಯವಿದ್ದ ಕ್ರಮಗಳನ್ನು ಕೈಗೊಂಡಿದ್ದರು. (ಪೊಲೋನಿಯಸ್, ಜೈಭೀಮ್ ಪತ್ರಿಕೆಯ ವಿಶೇಷ ಸಂಚಿಕೆ, ಏಪ್ರಿಲ್ 13, 1947 ಪು.12)

## ಪತ್ರಕರ್ತರ ಜೊತೆಗೆ

ಜೇಮ್ಸ್ ವಿನ್ಸೆಂಟ್ ಶೀಯೆನ್ ಎಂಬ ಅಮೇರಿಕಾದ ಪತ್ರಕರ್ತ (1899–1975) ಮತ್ತು ಕಾದಂಬರಿಕಾರ ಆಗಾಗ ಇಂಡಿಯಾಗೆ ಬರುತ್ತಿದ್ದರು. ಬಂದಾಗಲೆಲ್ಲ ಅಂಬೇಡ್ಕರರನ್ನು ನೋಡಿ ಮಾತನಾಡಿಸದೆ ಹೋಗುತ್ತಿರಲಿಲ್ಲ. ಅವರು ಅಂಬೇಡ್ಕರರ ಬಗ್ಗೆ 'ಥಾಟ್ಸ್ ಆನ್ ಅಂಬೇಡ್ಕರ್' – ಸಿದ್ಧಾರ್ಥ್ ಎಜ್ಯುಕೇಶನಲ್ ಆ್ಯಂಡ್ ಕಲ್ಚರಲ್ ಸೊಸೈಟಿ, ಆಗ್ರಾ' ಪ್ರಕಟಿಸಿರುವ ಲೇಖನದಲ್ಲಿ ಹೀಗೆ ದಾಖಲಿಸಿದ್ದಾರೆ. 'ಡಾ.ಅಂಬೇಡ್ಕರರು ಒಬ್ಬ ಅಸ್ಪೃಶ್ಯರಾಗಿದ್ದರು. ಪ್ರಾಯಶಃ ಆ ಕಾರಣಕ್ಕಾಗಿಯೇ ಅವರು ಬಹು ಉಗ್ರ ಸ್ವಭಾವದವರಾಗಿದ್ದರು. ಯಾರ ಮೇಲೆಯೇ ದಾಳಿ ಇಟ್ಟರೂ ಅದು ದುರ್ದಮ್ಯ ದಾಳಿಯಾಗಿರುತ್ತಿತ್ತು. ಸ್ವಭಾವತಃ ಕಡು ವಿಮರ್ಶಕರಾಗಿದ್ದ ಅವರು ಭಾರತೀಯ ಸಮಾಜದ ಸಮಸ್ತ ಆಯಾಮಗಳ ಬಗ್ಗೆ ಕಟ್ಟಾ ಟೀಕಾಕಾರರಾಗಿದ್ದರು. ಅವರು ನನ್ನ ಗೆಳೆಯರಾಗಿದ್ದರು ಎಂದು ಹೇಳುವ ಹಕ್ಕು ನನಗಿದೆ. ಅವರ ಜೊತೆಗೆ ಹಲವಾರು ವಿಷಯಗಳ ಕುರಿತು ಸುದೀರ್ಘವಾದ ವಾದ–ವಿವಾದಗಳು ನಡೆಯುತ್ತಿದ್ದವು. ಆ ಎಲ್ಲಾ ಚರ್ಚೆ ಜಿಜ್ಞಾಸೆಗಳ ಸಂದರ್ಭದಲ್ಲಿ ದೀರ್ಘವಾಗಿ ಮಾತನಾಡುತ್ತಿದ್ದರು. ನಾನು ಉದ್ದಕ್ಕೂ ಕುಳಿತು ತದೇಕ ಚಿತ್ತದಿಂದ ಅವರ ಮಾತುಗಳನ್ನು ಆಲಿಸುತ್ತಿದ್ದೆ. ಅವರ ಮಾತಿನ ಮೊನಚು ಬಹು ತೀಕ್ಷ್ಣವಾಗಿರುತ್ತಿತ್ತು, ನಾಲಿಗೆ ಹರಿತವಾದ ಖಡ್ಗದಂತಿತ್ತು. ಅವರು ಬಾಯ್ದೆರೆದು ಝಳಪಿಸಿದರೆ ಸಾಕು. ಎಲ್ಲರ ಒಳಹೊರಗನ್ನು ಜಾಲಾಡಿಸುತ್ತಿದ್ದರು. ಅನೇಕ ವ್ಯಕ್ತಿಗಳ ಬಗ್ಗೆ ಅವರಿಗೆ ಕಿಂಚಿತ್ ಗೌರವವಿರಲಿಲ್ಲ. ಸ್ಪಷ್ಟವಾಗದ ಸಂಗತಿಗಳ ಬಗ್ಗೆಯಾಗಲಿ, ವ್ಯಕ್ತಿಗಳ ಬಗ್ಗೆಯಾಗಲಿ ಒಮ್ಮೊಮ್ಮೆ ಬಹು ಬಿರುಬೀಸಿನ ಮಾತುಗಳಿಂದ ತುಂಡರಿಸುತ್ತಿದ್ದರು. ಅವರ ವರ್ಣನೆಯೂ ಕೂಡ ಅಷ್ಟೇ ತೀಕ್ಷ್ಣವಾಗಿರುತ್ತಿತ್ತು.

ನಯ ನಾಜೂಕಿಲ್ಲದ ತುಸು ಒರಟು ಸ್ವಭಾವದ ಸ್ಥೂಲಕಾಯದ ಅಂಬೇಡ್ಕರರ ನಡೆ–ನುಡಿಯಲ್ಲಿ ಸದಾ ಸಂಗ್ರಾಮಶೀಲತೆ ಚಿಮ್ಮುತ್ತಿತ್ತು. ಹೆಜ್ಜೆಹೆಜ್ಜೆಯಲ್ಲೂ ಸಂಗ್ರಾಮ ತುಳುಕುತ್ತಿತ್ತು. ನನಗೆ ಪರಿಚಯವಿದ್ದ ಅದೆಷ್ಟೋ ಹಿಂದೂಗಳಿಗಿಂತಲೂ ಅವರು ತುಂಬ ಭಿನ್ನವಾಗಿದ್ದರು. ಅವರ ಭಿನ್ನತೆಯೇ ನನಗೆ ಅಚ್ಚುಮೆಚ್ಚಿನದಾಗಿತ್ತು. ಅವರ ವ್ಯಕ್ತಿ ವಿಶಿಷ್ಟತೆಯಲ್ಲಿ ಒಂದು ವಿಧದ ಪ್ರತಿಭೆ ಸಾಕಾರಗೊಂಡಂತಿತ್ತು. ಅಂಬೇಡ್ಕರರು ಆಗಾಗ ನನ್ನನ್ನು ಕೆಣಕಿ ಚುಚ್ಚುತ್ತಿದ್ದರು; 'ಶೀಯೆನ್ ಸಾಹೇಬರೆ ನಮ್ಮ ಬ್ರಾಹ್ಮಣರ ಸರ್ಕಾರದ ಬಗ್ಗೆ ನಿಮಗೆ ಇಷ್ಟು ಉತ್ಕಟ ಪ್ರೀತಿ ಇರುವುದಾದರೆ, ಅದನ್ನು ಸುರಳಿಸುತ್ತಿ ಮೂಟೆ ಕಟ್ಟಿ ನೀವು ಅಮೆರಿಕೆಗೆ ಯಾಕೆ ಹೊತ್ತಯ್ಯಬಾರದು. ನಮಗೆ ಈ ಸರ್ಕಾರದ ಅವಶ್ಯಕತೆ ಇಲ್ಲ. ನಿಮಗೆ ಅದರ ಅವಶ್ಯಕತೆ ಇರಬಹುದೇನೋ ಗೊತ್ತಿಲ್ಲ'. ಆಗ ನಾನು 'ನಮ್ಮಲ್ಲಿಯೂ ನಮ್ಮದೇ ಆದ ಬ್ರಾಹ್ಮಣರಿದ್ದಾರೆ, ಸರ್' ಎಂದು ಉತ್ತರಿಸುತ್ತಿದ್ದೆ. 'ಹೌದೆ? ಆದರೆ ಅವರು ನಮ್ಮವರಂತಹ ಬ್ರಾಹ್ಮಣರು ಇರಲಿಕ್ಕಿಲ್ಲ ಬಿಡಿ.'

... ನೆಹರೂ ಮತ್ತು ಗಾಂಧಿ ಇಬ್ಬರ ಬಗ್ಗೆಯೂ ಅಂಬೇಡ್ಕರರಿಗೆ ಒಂದು ಒಗಟಿನ ಸದೃಶವಾದ ನಿಲುವಿತ್ತು. ಅವರ ಬಗ್ಗೆ ಎಷ್ಟೋ ಸಲ ಜರಿದು ಮಾತನಾಡುತ್ತಿದ್ದುಂಟು. ಅವರ ನಿಲುವು ನಿಟ್ಟುಗಳ ಬಗ್ಗೆ ಅಪನಂಬಿಕೆಗಳನ್ನು ವ್ಯಕ್ತಪಡಿಸುತ್ತಿದ್ದರು. ಆದರೆ ಆ ಎಲ್ಲ ಸಂದರ್ಭಗಳಲ್ಲಿಯೂ ಏನೋ ಒಂದು ವಿಧದ ಪ್ರೀತಿ ಗೌರವ ಆದರಗಳು ಕೂಡ ಡಾ. ಅಂಬೇಡ್ಕರರ ನಡೆ-ನುಡಿಯಲ್ಲಿ ಒಸರುತ್ತಿದ್ದವು. 'ನಮ್ಮ ಬ್ರಾಹ್ಮಣ ಸರ್ಕಾರ' ಎಂದು ಅವರು ಪದೇಪದೇ ಜರಿದು ಮಾತನಾಡುತ್ತಿದ್ದುದನ್ನು ನಾನು ಕೇಳಿದ್ದೇನೆ. ಮತ್ತೊಂದು ಸಂದರ್ಭದಲ್ಲಿ ಇದೇ ಮಾತನ್ನು ಅವರು ಖಾಸಗಿಯಾಗಿ ಗಾಂಧೀಜಿಯ ಬಗ್ಗೆಯೂ ಹೇಳಿದ್ದರು. 'ನೀವು ಅಮೆರಿಕನ್ನರು ಗಾಧೀಜಿಯನ್ನು ಇಷ್ಟು ಉತ್ಕಟವಾಗಿ ಪ್ರೀತಿಸುತ್ತೀರಲ್ಲ. ಅದಕ್ಕೆ ಕಾರಣ, ನನಗೆ ಇವತ್ತಿಗೂ ಅರ್ಥವಾಗಿಲ್ಲ. ಇಷ್ಟು ಪ್ರಿಯವಾಗಿರುವ ಗಾಂಧೀಜಿಯನ್ನ ನೀವು ಬಹು ಹಿಂದೆಯೇ ಅಮೆರಿಕಾಗೆ ಆಮದು ಮಾಡಿಕೊಂಡಿದ್ದರೆ, ಬಹು ಒಳ್ಳೆಯದಾಗಿತ್ತು. ಕೊನೆ ಪಕ್ಷ, ನಮಗೆ ಅವರಿಂದ ಬಿಡುಗಡೆಯಾದರೂ ದೊರೆಯುತ್ತಿತ್ತು.'

ಡಾ. ಅಂಬೇಡ್ಕರರು ತಮ್ಮ ಕಹಿ ಅನುಭವವನ್ನು ಮೆಟ್ಟಿ ಮೀರಿ ಮೇಲೇರಲು ಸಾಧ್ಯವಾಗದೇ ಇದ್ದುದರಿಂದ ಅವರು ಮಹಾನ್ ವ್ಯಕ್ತಿಯಾಗಿ ಬೆಳೆಯುವುದಕ್ಕೆ ಅಡ್ಡಿಯಾಗಿದೆ ಎಂಬುದನ್ನು ನಾನು (ಎಂ.ಓ.ಮಥ್ಯಾ) ನನ್ನ ಗೆಳೆಯ ಪಣಿಕ್ಕರ್ ಅವರಿಗೆ ಒಮ್ಮೆ ಹೇಳಿದ್ದೆ. ಅದನ್ನು ತಿಳಿದುಕೊಂಡಿದ್ದ ಅಂಬೇಡ್ಕರರು ಒಂದು ಭಾನುವಾರ ಮುಂಜಾನೆ ನನಗೆ ಫೋನ್ ಮಾಡಿ ಅಂದು ಸಂಜೆ ಚಹಾ ಕುಡಿಯಲು ತಮ್ಮಲ್ಲಿಗೆ ಬರಬೇಕೆಂದು ಆಮಂತ್ರಿಸಿದ್ದರು. ಪಣಿಕ್ಕರ್ ಅವರಿಗೂ ಕರೆಯುತ್ತಿರುವುದಾಗಿ ಹೇಳಿದರು. ನಾನು ನಿಗದಿತ ಸಮಯಕ್ಕೆ ಸರಿಯಾಗಿ ಅವರಲ್ಲಿಗೆ ಹೋದೆ. ಆರಂಭದ ಕುಶಲೋಪರಿಗಳು ನಡೆದ ಮೇಲೆ ತಮ್ಮ ಸದ್ಭಾವನ ಸದಾಶಯಕ್ಕೆ ಒಂದಿನಿತೂ ಚ್ಯುತಿಯಾಗದಂತೆ ಬಹು ಹಗುರ ಹೃದಯದಿಂದಲೇ ನುಡಿದರು: 'ಸರಿ, ಹಾಗಾದರೆ ತಾವು ನನ್ನೊಳಗೆ ಒಂದಿಷ್ಟು ದೋಷ ಕಂಡಿದ್ದೀರಿ ಅಂತಲ್ಲವೆ; ಸರಿ ಆಯ್ತು, ನಾನು ನಿಮ್ಮ ಟೀಕೆಯನ್ನು ಸ್ವೀಕರಿಸಲು ಸಿದ್ಧವಾಗಿದ್ದೇನೆ' ಅನಂತರ ಅವರು ಅಸ್ಪೃಶ್ಯತೆಯ ಬಗ್ಗೆ ಮಾತಾಡುತ್ತ 'ರೇಲ್ವೆಗಳು ಹಾಗೂ ಫ್ಯಾಕ್ಟರಿಗಳು ಮಾಡಿದ ಕೆಲಸ ಬಹುಮಹತ್ವದ್ದು' ಎಂದರು. ಮತ್ತೆ 'ಅಸ್ಪೃಶ್ಯತೆಯನ್ನು ತೊಲಗಿಸಲು ಗಾಂಧೀಜಿಯವರು ಹೂಡಿದ ವೈಯಕ್ತಿಕ ಆಂದೋಲನಗಳಿಗಿಂತಲೂ ಹೆಚ್ಚಿನ ಸಾಧನೆಯನ್ನು ರೈಲು, ಫ್ಯಾಕ್ಟರಿಗಳೇ ಮಾಡಿವೆ. ಅಸ್ಪೃಶ್ಯ ನೈಜ ಸಮಸ್ಯೆ ಆರ್ಥಿಕ ಸ್ವರೂಪದ್ದಾಗಿದೆಯೇ ವಿನಾ ಗಾಂಧೀಜಿ ಪ್ರತಿಪಾದಿಸಿದಂತೆ, ಮಂದಿರ ಪ್ರವೇಶಕ್ಕೆ ಸಂಬಂಧಿಸಿದ್ದಲ್ಲ' ಎಂದು ಒತ್ತಿ ಹೇಳಿದರು.

ಮುಂದುವರಿದು ಅಂಬೇಡ್ಕರ್ ಹೇಳಿದರು, 'ನಮ್ಮ ಸಂವಿಧಾನವು ಅಸ್ಪೃಶ್ಯತೆಯನ್ನು ತೊಲಗಿಸುತ್ತದೆ ಎಂಬುದು ನಿಸ್ಸಂಶಯ. ಆದರೆ, ಅದು ಕಾಗದದ ಮೇಲೆ ಮಾತ್ರ. ಹಾಗಾಗಿ ಅಸ್ಪೃಶ್ಯತೆ ಒಂದು ವೈರಸ್ ಆಗಿ ಭಾರತದಲ್ಲಿ ಕನಿಷ್ಠಪಕ್ಷ ಒಂದು ನೂರು ವರ್ಷಗಳ ಕಾಲ ಅಸ್ತಿತ್ವದಲ್ಲಿರುತ್ತದೆ. ಅದು ಜನಮಾನಸದ ಆಳಕ್ಕೆ ಬೇರು ಬಿಟ್ಟು ಸ್ಥಾಯಿಗೊಂಡಿದೆ.' ಅವರು ಅಮೆರಿಕಾದಲ್ಲಿನ ಗುಲಾಮ ವ್ಯವಸ್ಥೆಯ ನಿರ್ಮೂಲನೆಯನ್ನು ನೆನಪಿಸಿಕೊಂಡು, ನೂರಾ ಐವತ್ತು ವರ್ಷ ಕಳೆದ ನಂತರ ಅಲ್ಲಿಯ ನೀಗ್ರೋಗಳ ಸ್ಥಿತಿ-ಗತಿಗಳು ಸಾವಕಾಶವಾಗಿ ಸುಧಾರಿಸುತ್ತಿವೆ, ಎಂದರು. ನಿಮ್ಮ ಮಾತಿನ ಬಗ್ಗೆ ನನಗೆ

ಸಮ್ಮತಿಯಿದೆ, ಎಂದು ಪ್ರತಿಕ್ರಿಯಿಸಿದ ನಾನು ನನ್ನ ತಾಯಿಯ ಕಥೆಯನ್ನು ಹೇಳಿದೆ. ಸುಮಾರು ಎರಡು ಸಾವಿರ ವರ್ಷಗಳಷ್ಟು ದೀರ್ಘ ಕಾಲದ ಚರಿತ್ರೆಯ ಹಿನ್ನೆಲೆಯುಳ್ಳ ಕ್ರಿಶ್ಚನ್ ಧರ್ಮಿಯಾಗಿ ಕೂಡ ಅವಳು ಅಸ್ಪೃಶ್ಯತೆಯನ್ನು ಆಚರಿಸುತ್ತಾಳೆ. ಆ ಆಚರಣೆಯ ತೀವ್ರತೆ ಎಷ್ಟು ಪ್ರಖರವಾಗಿದೆ ಅಂದರೆ, ಪಂಡಿತ್ ಮದನ್ ಮೋಹನ್ ಮಾಳ್ವಿಯ ಅವರು ಆಚರಿಸುವ ಅಸ್ಪೃಶ್ಯತೆಗೆ ಎಳ್ಳಷ್ಟೂ ಅದು ಕಡಿಮೆಯಿಲ್ಲ. ಬೇಸಿಗೆಯಲ್ಲಿ ನೀರಿನ ಕೊರತೆ ಕಾಣಿಸಿಕೊಂಡಾಗಲೂ ಹರಿಜನರು ನಮ್ಮ ಬಾವಿಯಿಂದ ನೀರು ಸೇದಿಕೊಳ್ಳುವುದಕ್ಕೆ ಅವಳು ಅವಕಾಶ ಕೊಡುವುದಿಲ್ಲ. ಅವಳ ಆಸುಪಾಸಿನ ಅಸ್ಪೃಶ್ಯರು ಅಕ್ಕಪಕ್ಕದಲ್ಲಿ ಹಾದುಹೋದರೂ ಸಾಕು, ಅವಳು ಒಡನೆಯೇ ಬಚ್ಚಲಿಗೆ ಧಾವಿಸಿ ಸ್ನಾನದ ಶುಚಿಯಲ್ಲಿ ತೊಡಗುತ್ತಾಳೆ.

....ಅನಂತರ ಅಂಬೇಡ್ಕರರು ಹೆಮ್ಮೆಯಿಂದ ಹೇಳಿದರು: 'ಹಿಂದೂಗಳಿಗೆ ವೇದಗಳು ಬೇಕಾಗಿದ್ದವು. ಅವುಗಳನ್ನು ಸೃಷ್ಟಿ ಮಾಡಲರಿಯದವರು ಒಬ್ಬ ವ್ಯಾಸನ ಮೊರೆ ಹೊಕ್ಕರು. ವ್ಯಾಸ ಜಾತಿಯಿಂದ ಹಿಂದೂವಾಗಿರಲಿಲ್ಲ. ಹಿಂದೂಗಳಿಗೆ ಒಂದು ಮಹಾಕಾವ್ಯ ಬೇಕಾಗಿತ್ತು. ಅವರು ಒಡನೆಯೇ ಮಹಾಕವಿ ವಾಲ್ಮೀಕಿ ಪಾದಕ್ಕೆರಗಿದರು. ವಾಲ್ಮೀಕಿ ಜನ್ಮತಃ ಒಬ್ಬ ಅಸ್ಪೃಶ್ಯನಾಗಿದ್ದನು. ಹಿಂದೂಗಳಿಗೆ ಒಂದು ಸಂವಿಧಾನ ಬೇಕಾಗಿತ್ತು. ಅವರು ಕೂಡಲೇ ನನಗೆ ಕರೆ ಕಳಿಸಿದರು.' ಅಂಬೇಡ್ಕರರು ನೊಂದು ನುಡಿದರು: 'ಭಾರತದಲ್ಲಿ ಹಿಂದಿ ಪ್ರದೇಶದ ಪರಮ ದುರಂತವೆಂದರೆ, ಈ ಭಾಗದ ಜನರು ವಾಲ್ಮೀಕಿಯನ್ನು ತಿರಸ್ಕರಿಸಿ ಅವರ ಸ್ಥಾನದಲ್ಲಿ ತುಳಸಿದಾಸನನ್ನು ಪ್ರತಿಷ್ಠಾಪಿಸಿದ್ದಾರೆ. ಈ ಭಾಗದ ಜನರು ತುಳಸಿದಾಸನ ಸ್ಥಾನದಲ್ಲಿ ಮತ್ತೆ ಮಹರ್ಷಿ ವಾಲ್ಮೀಕಿಯನ್ನು ವಿರಾಜಮಾನವಾಗಿಸುವವರೆಗೂ ಅವರು ಮುಂದುವರಿಯಲಾರರು. ಹೀಗೇ ಹಿಂದುಳಿದು ನಿಗೂಢವಾದದ ಹುದುಲಲ್ಲಿಯೇ ಒದ್ದಾಡುತ್ತಾರೆ.' ತಮ್ಮ ಮಾತು ಮುಂದುವರಿಸುತ್ತಾ ಅವರು ವಾಲ್ಮೀಕಿ ರಾಮಾಯಣದ ಕೆಲವು ಘಟನೆಗಳನ್ನು ನೆನಪಿಸಿದರು.

'ರಾಮ-ಲಕ್ಷ್ಮಣರು ಭಾರದ್ವಾಜನ ಆಶ್ರಮಕ್ಕೆ ಬಂದಾಗ ಆ ಋಷಿ ನೆರವೇರಿಸಿದ ಉಪಚಾರ ಹೇಳಲಸದಳ...' ಡಾ. ಅಂಬೇಡ್ಕರರು ಮಹರ್ಷಿ ಭಾರದ್ವಾಜನ ಆಶ್ರಮದಲ್ಲಿ ರಾಮ ಮತ್ತು ಅವನ ಪರಿವಾರದವರಿಗೆ ದೊರೆತ ಅತಿಥಿ ಸತ್ಕಾರದ ಬಗ್ಗೆ ಸಂಕ್ಷಿಪ್ತವಾಗಿ ಹೇಳಿ... 'ಆದರೆ ತುಳಸಿದಾಸ ಈ ಕಥಾನಕದಲ್ಲಿ ಈ ಭಾಗಕ್ಕೆ ಕತ್ತರಿ ಹಾಕಿದ್ದಾನೆ' ಎಂದರು. ಅವರ ಮಾತಿನ ಎಳೆಯನ್ನು ಹಿಡಿದ ನಾನು ಹೇಳಿದೆ. 'ವಾತ್ಸಾಯನ ತನ್ನ ಕಾಮಸೂತ್ರದಲ್ಲಿ ಮದುವೆಗೆ ಮುಂಚೆ ಕನಿಷ್ಠ ಆರು ತಿಂಗಳ ಕಾಲವಾದರೂ ಭಾವಿ ಯುವ ದಂಪತಿಗಳಿಗೆ ಕರುವಿನ ಮಾಂಸ ತಿನ್ನಿಸಬೇಕೆಂದು ಹೇಳಿದ್ದಾನೆ.' ಅಂಬೇಡ್ಕರರು ನನ್ನ ಕಡೆಗೆ ಬೆರಳು ಮಾಡಿ ನುಡಿದರು. 'ನೀವು ಮಲಯಾಳಿಗಳು ಈ ದೇಶಕ್ಕೆ ಅಪಾರ ಹಾನಿ ಮಾಡಿದ್ದೀರಿ' ಎಂದರು. ನಾನು ಒಮ್ಮೆಲೆ ಚಕಿತನಾಗಿ, 'ಅದು ಹೇಗೆ?' ಎಂದು ಕೇಳಿದೆ. ಅವರು ಗಂಭೀರವಾಗಿ ಹೇಳಿದರು: 'ನೀವು ಶಂಕರಾಚಾರ್ಯನೆಂಬ ಕಳಂಕಿತ, ತರ್ಕಶಾಸ್ತ್ರ ಪಾರಂಗತನನ್ನು ಪಾದಯಾತ್ರೆಗೆ ಕಳುಹಿಸಿದಿರಿ. ಅವನು ಉತ್ತರ ಭಾರತದಲ್ಲೆಲ್ಲ ನಡೆದಾಡಿ ಇಲ್ಲಿಯ ಬೌದ್ಧ ಧರ್ಮವನ್ನು ಬಡಿದೋಡಿಸಿದನು.' ಅಂಬೇಡ್ಕರರು ಹಾಗೇ ಮುಂದುವರಿದರು: 'ಭಾರತ ಸೃಷ್ಟಿಸಿರುವ

ಪರಮ ಮಹಾತ್ಮರಲ್ಲಿ ಬುದ್ಧನೊಬ್ಬ. ಇತ್ತೀಚಿನ ಶತಮಾನಗಳಲ್ಲಿ ಭಾರತ ಸೃಷ್ಟಿಸಿರುವ ಇನ್ನೊಬ್ಬ ಮಹಾನ್ ವ್ಯಕ್ತಿ ಸ್ವಾಮಿ ವಿವೇಕಾನಂದರೆ ಹೊರತು ಗಾಂಧಿಯಲ್ಲ'.

ನಾನು ಅಂಬೇಡ್ಕರರಿಗೆ ಒಂದು ಸಂಗತಿಯನ್ನು ನೆನಪಿಸುವ ಅರಿಕೆಯನ್ನು ನುಡಿದೆ: 'ನಿಮ್ಮನ್ನು ಭಾರತ ಸರ್ಕಾರದಲ್ಲಿ ಸೇರಲು ಆಮಂತ್ರಿಸುವುದಕ್ಕೆ ನೆಹರೂ ಅವರಿಗೆ ಸಲಹೆ ಕೊಟ್ಟವರೇ ಗಾಂಧೀಜಿ' ಈ ಸಂಗತಿ ಅವರಿಗೆ ಗೊತ್ತಿರಲಿಲ್ಲವಾದ್ದರಿಂದ ಅದೊಂದು ಹೊಸ ಸುದ್ದಿಯೆನಿಸಿತು. ಆಮೇಲೆ ನನಗೆ ಒಂದು ವಿಚಾರ ಹೊಳೆದು ನನ್ನ ಮಾತನ್ನು ಸ್ವಲ್ಪ ತಿದ್ದಿಕೊಂಡು ಹೇಳಿದೆ, 'ಇಲ್ಲ ಈ ವಿಚಾರ ಗಾಂಧೀ ಮತ್ತು ನೆಹರೂ ಇಬ್ಬರಿಗೂ ಏಕ ಕಾಲಕ್ಕೇ ಹೊಳೆದಿತ್ತು' ಎಂದೆ. ನಿಜವೆಂದರೆ, ಡಾ. ಅಂಬೇಡ್ಕರರೆ ಸಂವಿಧಾನ ಸಭೆಯಲ್ಲಿ ಸಂವಿಧಾನದ ಮಸೂದೆಯನ್ನು ಮಂಡಿಸಿ ಮುನ್ನಡೆಸಿದ್ದರು. (ಎಂ. ಓ. ಮಥ್ಯಾ, ಪ್ರಧಾನಿ ನೆಹರೂ ಅವರ ಆಪ್ತ ಕಾರ್ಯದರ್ಶಿ, ನೆಹರೂ ಯುಗದ ನೆನಪುಗಳು, ಪು.24).

ಒಮ್ಮೆ ಒಬ್ಬ ರಾಷ್ಟ್ರೀಯವಾದಿ ದೇಶಭಕ್ತ ಅಂದನು, ಅಂಬೇಡ್ಕರ್ ಅವರಿಗೆ 'ಡಾಕ್ಟರ್, ನೀವೂ ನಿಮ್ಮ ಈ ಪಾಶ್ಚಾತ್ಯ ಪೋಷಾಕನ್ನು ಕಳೆದೊಗೆದು ರಾಷ್ಟ್ರೀಯ ವಸ್ತ್ರಗಳನ್ನು ಉಡಬೇಕು.' ಡಾ. ಅಂಬೇಡ್ಕರರು ಒಡನೆಯೇ ನುಡಿದರು ತಮ್ಮ ಮುಗ್ಧತೆಯನ್ನು ಮೆರೆಯುತ್ತ; 'ಮಾನ್ಯರೆ, ರಾಷ್ಟ್ರೀಯ ಪೋಷಾಕೆಂದರೆ ಯಾವುದು? ಯಾವ ದಿರಿಸನ್ನು ಕುರಿತು ನೀವು ಮಾತಾಡುತ್ತೀರಿ?' ದೇಶಭಕ್ತ ಮಹಾಶಯ ತಡಮಾಡದೆ ಮರಳಿ ಹೇಳಿದ. 'ರಾಷ್ಟ್ರೀಯ ಪೋಷಾಕೆಂದರೆ ನಮ್ಮ ಪೂರ್ವಜರು ಧರಿಸುತ್ತಿದ್ದಂಥವು.' ಅದಕ್ಕೆ ತರ್ಕ ಪಾಂಡಿತ್ಯದ ಸಾಕಾರವಾಗಿದ್ದ ಡಾಕ್ಟರು ಹೀಗೆ ನುಡಿದರು: 'ಹಾಗೆಂದರೆ ನೀವು ನಮ್ಮ ಪೂರ್ವಜರೊಳಗೆ ತಾರತಮ್ಯ ಮಾಡುವಂತಿಲ್ಲ ಒಬ್ಬರ ವೇಷಭೂಷಣಗಳನ್ನು ಆಯ್ಕೆ ಮಾಡಿ ಉಳಿದವರ ವಸ್ತ್ರ ಸಂಪ್ರದಾಯವನ್ನು ಧಿಕ್ಕರಿಸುವುದು ಸರಿಯಲ್ಲ. ಆದ್ದರಿಂದ ಪೂರ್ವಜರ ಬಗ್ಗೆ ಸಮಾನ ಗೌರವ ತೋರುವುದೆಂದರೆ ನಾನು ನಮ್ಮ ಪೂರ್ವಜರಾಗಿರುವ ಆಡಮ್ ಮತ್ತು ಈವ್‌ರನ್ನೇ, ಅವರ ವೇಷಭೂಷಣಗಳನ್ನೇ ಆದರ್ಶವೆಂದು ಅನುಸರಿಸಬೇಕಾಗುತ್ತದೆ. ಆದರೆ ಅವರಿಬ್ಬರು ಬಟ್ಟೆಯನ್ನೇ ಉಟ್ಟುಕೊಳ್ಳುತ್ತಿರಲಿಲ್ಲ. ನೀವು ಅವರನ್ನು ಅನುಸರಿಸಬಯಸುವಿರೋ?' ಎಂದಿದ್ದೆ ಆ ರಾಷ್ಟ್ರೀಯವಾದಿ ದೇಶಭಕ್ತ ಒಮ್ಮೆಲೆ ಅವಕ್ಕಾದನು. ಡಾ. ಅಂಬೇಡ್ಕರರಿಂದ ಇಂಥ ಪ್ರತ್ಯುತ್ತರ ನಿರೀಕ್ಷಿಸದಿದ್ದ ರಾಷ್ಟ್ರೀಯವಾದಿ ಗರಬಡಿದವನಂತೆ ಅರೆಕ್ಷಣ ಮೂಕವಿಸ್ಮಿತನಾಗಿ ಸಾವಕಾಶವಾಗಿ ಸುಧಾರಿಸಿಕೊಂಡು ತನ್ನ ಮಾತಿನ ವಿಷಯವನ್ನು ಬದಲಿಸಿದನು. (ಪೋಲೋನಿಯಸ್/ನಾನಕ್‌ಚಂದ್ ರತ್ತು (ಕನ್ನಡದಲ್ಲಿ ರಾಹು), ಅಂಬೇಡ್ಕರ್: ಸ್ಮೃತಿ–ಸಂಸ್ಕೃತಿ, ಸುಮೇಧ ಪ್ರಕಾಶನ, ಕಲಬುರ್ಗಿ, ಪುಟ.267).

## ಆತ್ಮಚರಿತ್ರೆ ಬರೆಯದೇಹೋದ ದುರಂತ

ಬಾಬಾಸಾಹೇಬರು ಒಂದು ವಿಸ್ತೃತವಾದ ಆತ್ಮಚರಿತ್ರೆ ಬರೆಯದೇ ಹೋದದ್ದು, ಭಾರತದ ಸಾಮಾಜಿಕ ಹೋರಾಟಗಳಿಗೆ ಒಂದು ದೊಡ್ಡ ಕೊರತೆಯಾಗಿ ಉಳಿದುಹೋಯಿತು. ಅವರು ಬರೆದಿದ್ದರೆ ಬಹುಶಃ ಅದು ಕೇವಲ ಅವರ ಬದುಕಿನ ಚರಿತ್ರೆಯಾಗಿರುತ್ತಿರಲಿಲ್ಲ. ಈ ನೆಲದ ಹಲವು ಕೋಟಿ ಜನರ ನೋವಿನ, ಅಪಮಾನದ

ಚರಿತ್ರೆಯ ಜೊತೆಗೆ ಅದನ್ನು ಎದುರಿಸಿ ನಿಲ್ಲುವ ಚೈತನ್ಯದ ಒಂದು ಆಕರವಾಗುತ್ತಿತ್ತು. ಬಹುಶಃ ಅವರು ಬರೆದಿದ್ದರೆ ಅದು ನೆಲ್ಸನ್ ಮಂಡೇಲಾ ಆತ್ಮಕಥೆಯನ್ನು ಮೆಟ್ಟಿ ನಿಲ್ಲುತ್ತಿತ್ತೋ ಏನೊ? ಚರಿತ್ರೆ ಎಂದೂ ಹೆಣ್ಣುಮಕ್ಕಳ ಪರವಾಗಿ ಇರಲಿಲ್ಲ. ಇತಿಹಾಸದ ಯಾವ ಘಟ್ಟವೂ ಇವರ ಪಾಲಿಗೆ ಸಂತಸ ತರುವ ಸಂಗತಿಯಾಗಿರಲಿಲ್ಲ. ಬದಲಿಗೆ ಅದೊಂದು ಯಾತನಾಮಯ ಅನುಭವವಾಗಿಯೇ ಇಂದಿಗೂ ಉಳಿದುಕೊಂಡಿದೆ. ಮೇಲ್ಜಾತಿಯವರ ಪಾಲಿಗೆ, ಬಲಿಷ್ಠ ಜಾತಿಗಳಿಗೆ ಇಲ್ಲಿ ಸಂಭ್ರಮಿಸಬೇಕಾದ ಸಂಗತಿಗಳು ಬೇಕಾದಷ್ಟಿವೆ. ಹಾಗಾಗಿ ಅವರು ಹಿಂದಕ್ಕೆ ಹೋಗಲು (ಹಿಂದಿನ ಸನಾತನ ಪದ್ಧತಿಗಳನ್ನು ಉಳಿಸಿಕೊಳ್ಳಲು ಹೆಣಗಾಡುತ್ತಾರೆ) ಹಂಬಲಿಸುತ್ತಾರೆ. ಹೆಣ್ಣುಮಕ್ಕಳಿಗೆ, ತುಳಿಸಿ ಕೊಳ್ಳುತ್ತಿರುವವರಿಗೆ, ಅಸ್ಪೃಶ್ಯರ ಪಾಲಿಗೆ ಚರಿತ್ರೆಯ ನೆನಪೆಂದರೆ ಉರಿವ ಕೊಳ್ಳಿ ಎದೆಯೊಳಗೆ ಗೂರಾಡುವ ಅನುಭವ. (ಎಸ್. ನಟರಾಜ ಬೂದಾಳು, 21.6.2015, ಪ್ರಜಾವಾಣಿ/ಅಂಬೇಡ್ಕರ್:ಸ್ಮೃತಿ-ಸಂಸ್ಕೃತಿ ಕೃತಿ ವಿಮರ್ಶೆಯಲ್ಲಿ).

ಅಸ್ಪೃಶ್ಯತೆ ಎನ್ನುವುದು ಒಂದು ಸಂಕೀರ್ಣವಾದ ಆಚಾರ ಮತ್ತು ವಿಚಾರ ಸಂಹಿತೆಯನ್ನು ಒಳಗೊಂಡ ವ್ಯವಸ್ಥೆ. ಇದಕ್ಕೆ ಬೇಕಾದ ಸಮಾಜೋಧಾರ್ಮಿಕ ಒಪ್ಪಿಗೆಯನ್ನು ನಮ್ಮ ಇತಿಹಾಸ, ಪರಂಪರೆಗಳು ಉತ್ಪಾದಿಸಿಕೊಟ್ಟಿವೆ. ಸವರ್ಣೀಯ ಹಿಂದೂಗಳು ಅಸ್ಪೃಶ್ಯರೊಡನೆ ನಡೆದುಕೊಳ್ಳುವ ರೀತಿಯನ್ನು ತಾತ್ವೀಕರಿಸುವುದಕ್ಕಿಂತ ದೈನಂದಿನ ಬದುಕಿನಲ್ಲಿ ಅದು ಜಾರಿಗೆ ಬರುವ ರೀತಿಯನ್ನು ಘಟನೆಗಳ ಮೂಲಕ ಅಂಬೇಡ್ಕರ್ ಅವರ ಸಂಚಾಲಕರಾಗಿದ್ದ ರತ್ತು ಅವರು ತಮ್ಮ ಕೃತಿ 'ಅಂಬೇಡ್ಕರ್: ಸ್ಮೃತಿ ಮತ್ತು ಸಂಸ್ಕೃತಿ'ಯಲ್ಲಿ ಪರಿಣಾಮಕಾರಿಯಾಗಿ ಬಾಬಾಸಾಹೇಬರ ಆತ್ಮಚರಿತ್ರೆಯನ್ನು ನಿರೂಪಿಸಿದ್ದಾರೆ. ಈ ಕೃತಿಯಲ್ಲಿ ಒಂದು ಕ್ರಮವನ್ನು ಪಾಲಿಸಿದ್ದೀನಿ, ಎನ್ನುವ ಅವರು ಮೊದಲ ಭಾಗದಲ್ಲಿ ಅಂಬೇಡ್ಕರ್ ತಮ್ಮ ಬಾಲ್ಯದಲ್ಲಿ ಅನುಭವಿಸಿದ ನಾನಾರೀತಿಯ ಅಸ್ಪೃಶ್ಯ ಆಚರಣೆಯ ಅಪಮಾನಗಳನ್ನು ದಾಖಲಿಸಿದ್ದಾರೆ. ಇಂತಹ ಘನಘೋರ ಅನುಭವಗಳು ಈ ದೇಶದ ಯಾರೇ ಅಸ್ಪೃಶ್ಯನಿಗೆ ಆಗಿರಲು ಸಾಧ್ಯ. ಅಷ್ಟೇ ಅಲ್ಲ, ಒಬ್ಬ ವ್ಯಕ್ತಿ ಹಿಂದೂಗಳಿಗೆ ಅಸ್ಪೃಶ್ಯನಾಗಿದ್ದರೆ, ಆತ ಪಾರ್ಸಿಗಳಿಗೂ, ಮುಸ್ಲಿಮರಿಗೂ, ಜೈನರಿಗೂ ಅಸ್ಪೃಶ್ಯನೆ ಆಗಿದ್ದಲ್ಲಿ ಉಳಿದ ಧರ್ಮಗಳು ಯಾವ ರೀತಿಯಲ್ಲಿ ಅಸ್ಪೃಶ್ಯರಿಗೆ ಒಳಿತನ್ನು ಬಯಸಲು ಸಾಧ್ಯ? ಸಾವಿರಾರು ವರ್ಷಗಳ ಮನುಷ್ಯ ಚರಿತ್ರೆಯಲ್ಲಿ ಇದಕ್ಕಿಂತ ದೊಡ್ಡ ದುರಂತ ಯಾವುದಾದರೂ ಇರಲು ಸಾಧ್ಯವೇ? ರತ್ತು ಅವರು 'ಈ ಕೃತಿಯಲ್ಲಿ ಒಂದೊಂದಕ್ಕೂ ಅಂಬೇಡ್ಕರ್ ಅನುಭವಿಸಿದ ಬದುಕಿನ ಘಟನೆಗಳನ್ನೇ ಉದಾಹರಣೆಯಾಗಿ ದಾಖಲಿಸುತ್ತಾ ಹೋಗಿದ್ದೇನೆ' ಎನ್ನುತ್ತಾರೆ.

ಅಂಬೇಡ್ಕರ್ ಇನ್ನೊಂದು ಕಡೆ ಹೀಗೆ ಹೇಳಿದ್ದಾರೆ: 'ನನ್ನ ಆಧ್ಯಾತ್ಮಿಕ ಬೆಳವಣಿಗೆಗಾಗಲಿ, ನೈತಿಕ ನಿಲುವಿಗಾಗಲಿ ಅಥವಾ ಸಾಮಾಜಿಕ ಸ್ಥಿತಿ-ಗತಿ, ಸ್ಥಾನ-ಮಾನ ಈ ಯಾವುದಕ್ಕೂ ಗಾಂಧೀಜಿ ನನಗೆ ಯಾವುದೇ ರೀತಿಯ ಕಾಣಿಕೆ ನೀಡಿಲ್ಲ. ನಾನು ಪರಮ ಋಣಿಯಾಗಿರುವ ಏಕೈಕ ವ್ಯಕ್ತಿಯೆಂದರೆ ಗೌತಮ, ಹೌದು, ನಿಜವಾಗಿಯೂ ನನ್ನ ಸರ್ವಸ್ವವೂ ಅವನಿಂದಲೇ. ಇನ್ನೂ ನೇರವಾಗಿ ಉತ್ತರಿಸಬೇಕೆಂದರೆ, ನನ್ನ ದೃಷ್ಟಿಯಲ್ಲಿ ಬುದ್ಧನ ಧರ್ಮ ಪರಮೋತ್ತಮವಾದುದು. ಬೇರೆ ಯಾವೊಂದು ಧರ್ಮವನ್ನೂ ಕೂಡ ಅದರೊಂದಿಗೆ ಹೋಲಿಸಲಾಗದು. ವಿಜ್ಞಾನವನ್ನು ಚೆನ್ನಾಗಿ

ತಿಳಿದಿಕೊಂಡಿರುವ ಆಧುನಿಕ ವ್ಯಕ್ತಿಯೊಬ್ಬನು ಒಂದು ಧರ್ಮವನ್ನು ಆಯ್ಕೆ ಮಾಡಿಕೊಳ್ಳಬೇಕೆಂದರೆ ಅವನು ಕೇವಲ ಬೌದ್ಧ ಧರ್ಮವನ್ನು ಮಾತ್ರ ಒಪ್ಪಿಕೊಳ್ಳುತ್ತಾನೆ. ಯಾಕೆಂದರೆ ಅದನ್ನು ಬಿಟ್ಟು ಬೇರೆ ಯಾವ ಧರ್ಮವೂ ವೈಜ್ಞಾನಿಕ ಪರೀಕ್ಷೆಗಳನ್ನು ಗೆದ್ದು ಯಶಸ್ವಿಯಾಗಿ ಹೊರಹೊಮ್ಮಲಾರದು. ಸುಮಾರು 35 ವರ್ಷಗಳ ಸುದೀರ್ಘ ಕಾಲ ಎಲ್ಲಾ ಧರ್ಮಗಳನ್ನು ಕೂಲಂಕಷವಾಗಿ ಅಧ್ಯಯನಿಸಿದ ನಂತರವೇ ಈ ನಿಲುವಿಗೆ ತಲುಪಿದ್ದೇನೆ' ಎನ್ನುತ್ತಾರೆ.

ಮುಲ್ಕ್ ರಾಜ್ ಆನಂದ್ ಕೇಳಿದ ಒಂದು ಪ್ರಶ್ನೆಗೆ ಅಂಬೇಡ್ಕರ್ ಹೀಗೆ ಉತ್ತರಿಸಿದರು: 'ಕೈಯಿಂದ ಕೆಲಸ ಮಾಡುವ ಪ್ರತಿಯೊಬ್ಬನೂ ಬ್ರಾಹ್ಮಣರಿಂದ ತಿರಸ್ಕೃತನೇ. ಸತ್ತ ಪ್ರಾಣಿಗಳ ಚರ್ಮ ಸುಲಿಯುವವರು, ಅವುಗಳ ಕಸ ಬಳಿದು ಸಗಣಿ ಹೊತ್ತು ಹಾಕುವವರು, ಹೊಲದಲ್ಲಿ ಕೃಷಿ ಕಾಯಕದಲ್ಲಿ ತೊಡಗಿರುವವರು, ಪಾಯಖಾನೆಗಳಲ್ಲಿ ಕೆಲಸ ಮಾಡುವವರು, ಕೈಯಿಂದ ನೂಲ ತೆಗೆಯುವವರು ಎಲ್ಲರೂ ಬಹಿಷ್ಕೃತರೇ – ಇವುಗಳಿಂದ ಘನತೆಯ ಬಾಳು ಯಾರಿಗೂ ದಕ್ಕಿಲ್ಲ. ಹೊಟ್ಟೆ ತುಂಬ ಕೂಳೂ ದೊರಕಿಲ್ಲ. ಅವೆಂದೂ ಜೀವನ ವಿಧಾನವಾಗಿಯೂ ಸ್ವೀಕಾರಾರ್ಹವಾಗಿಲ್ಲ. ಹಾಗಾದರೆ ಅಂತಹ ಜೀವನ ಪದ್ಧತಿಗೆ ಇನ್ನೊಮ್ಮೆ ಕರೆದರೆ ಹೋಗಬೇಕೆ? ಯಾಕೆ? ಎನ್ನುವ ಪ್ರಶ್ನೆ ಎದುರಾಗಲೇಬೇಕು'.

ಅಂಬೇಡ್ಕರ್ ಅವರು ಇನ್ನೊಂದು ಕಡೆ ಹೀಗೆ ದಾಖಲಿಸಿದ್ದಾರೆ: 'ಯೂರೋಪ್ ಮತ್ತು ಅಮೆರಿಕಾದಲ್ಲಿನ ಐದು ವರ್ಷಗಳ ವಾಸ್ತವ್ಯ ನಾನೊಬ್ಬ ಅಸ್ಪೃಶ್ಯನೆಂಬ ಪ್ರಜ್ಞೆಯನ್ನು ಮನದಿಂದ ಸಂಪೂರ್ಣವಾಗಿ ಅಳಿಸಿಹಾಕಿತ್ತು. ಅಸ್ಪೃಶ್ಯನೊಬ್ಬ ಭಾರತದೊಳಗೆ ಕಾಲಿಟ್ಟಾಗಲೆಲ್ಲ ತನಗೆ ತಾನೇ ಮತ್ತು ಇತರರಿಗೂ ಒಂದು ಸಮಸ್ಯೆಯಾಗಬಲ್ಲನು ಎಂಬ ಭಾವನೆಯನ್ನು ನನ್ನ ಮನದೊಳಗಿನಿಂದ ಪೂರ್ತಿಯಾಗಿ ತೊಡೆದುಹಾಕಿದ್ದವು. ಆದರೆ, ಹೊರಗಿನಿಂದ ಭಾರತಕ್ಕೆ ಬಂದರೆ, ನಗರದಿಂದ ಹಳ್ಳಿಗೆ ಹಿಂದಿರುಗಿದರೆ, ವರ್ತಮಾನದಿಂದ ಚರಿತ್ರೆಗೆ ಹಿಂದಿರುಗಿದರೆ, ಅಸ್ಪೃಶ್ಯತೆಯ ಆವರಣವನ್ನು ಪ್ರವೇಶಿಸುತ್ತೇವೆ ಎಂದರ್ಥ. ಹಾಗಿರುವಾಗ ಗ್ರಾಮವೊಂದು ಪರಿಪೂರ್ಣ ಅಂಗ ಎನ್ನುವುದು ಯಾರಿಗೆ? ಎನ್ನುವ ಪ್ರಶ್ನೆಯನ್ನು ಕೇಳದೆ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ನಮ್ಮ ಪರಂಪರೆ ಶ್ರೇಷ್ಠ ಎಂದಾಗ ಕೂಡ ಅದೇ ಪ್ರಶ್ನೆ ಎದ್ದು ನಿಲ್ಲುತ್ತದೆ! ಯಾರಿಗೆ – ಅಸ್ಪೃಶ್ಯರು, ದಮನಿತರು, ಹೆಣ್ಣುಮಕ್ಕಳು ಇವರಿಗಾ? ಖಂಡಿತಾ ಇಲ್ಲ'. ದುರಂತವೆಂದರೆ ಆಧುನಿಕ ಪ್ರಪಂಚದಲ್ಲಿ ಪ್ರಪಂಚ ಒಂದು ಜಾಗತಿಕ ಹಳ್ಳಿಯಾಗುತ್ತಿದೆ/ಆಗಿದೆ ಎನ್ನುವ ಈ ಸಂದರ್ಭದಲ್ಲಿ ಜಾತಿ, ಅಸ್ಪೃಶ್ಯತೆಯೆಂಬ ತಾರತಮ್ಯಗಳನ್ನು ಮೇಲ್ಜಾತಿಗಳ ಜನರು ವಿದೇಶಗಳಲ್ಲಿ ವೈರಸ್‌ನಂತೆ ಪಸರಿಸುತ್ತಿದ್ದಾರೆ. ಇದನ್ನು ತಡೆಯಲು ಇಂಗ್ಲೆಂಡ್, ಕೆನಡಾದಂತಹ ದೇಶಗಳು ತಮ್ಮ ಕಾನೂನುಗಳಲ್ಲಿ ಜಾತಿ, ಅಸ್ಪೃಶ್ಯತೆಯ ತಾರತಮ್ಯಗಳನ್ನು ತಡೆಯಲು ಬದಲಾವಣೆಗಳನ್ನು ತರುತ್ತಿವೆ. ಅಕ್ಕಪಕ್ಕದ ದೇಶಗಳಾದ ನೇಪಾಳ, ಶ್ರೀಲಂಕಾ, ಬಾಂಗ್ಲಾದೇಶ, ಪಾಕಿಸ್ತಾನಗಳಲ್ಲೂ ಈ ಅನೀತಿ ಪದ್ಧತಿಗಳು ಮೊದಲಿನಿಂದಲೂ ಮುಂದುವರಿಯುತ್ತಲೇ ಬಂದಿವೆ.

*　　*　　*

ಅಂಬೇಡ್ಕರ್ ಅವರ ಒಂದು ಪತ್ರದಲ್ಲಿ ಈ ಸಾಲುಗಳಿವೆ: 'ನನ್ನ ಒಡನಾಡಿಗಳು ನನ್ನ ವೈರಾಗ್ಯ ಮತ್ತು ಉಗ್ರ ಸಂಯಮಗಳನ್ನು ಹೊರಬೇಕಾಗುವುದು. ಗ್ರಂಥಗಳೇ ನನ್ನ

ಸಹವಂದಿಗರು, ಪತ್ನಿ ಪುತ್ರರಿಗಿಂತಲೂ ಇವು ನನಗೆ ಪ್ರಿಯವಾದವು'. ಅಂಬೇಡ್ಕರ್ ಸಾಮಾಜಿಕವಾದ ಕಾರಣಗಳಿಗಾಗಿ ದಲಿತ ವಿಮೋಚನೆಯ ಹೋರಾಟಗಾರರೆಂದು ಚರಿತ್ರೆಯಲ್ಲಿ ಖ್ಯಾತರಾಗಿದ್ದಾರೆ. ರಾಜಕೀಯವಾಗಿ ಅವರು ಭಾರತದ ಕಾನೂನು ಮಂತ್ರಿಯಾಗಿ ಸೇವೆ ಸಲ್ಲಿಸಿದ್ದನ್ನು ನೆನೆಯಲಾಗುತ್ತದೆ. ಧರ್ಮದ ಕಾರಣದಿಂದ ಸ್ವತಃ ಧರ್ಮದೀಕ್ಷೆ ಪಡೆದು ಭಾರತದಲ್ಲಿ ಬೌದ್ಧ ಧರ್ಮದ ಪುನರ್‌ಜನ್ಮಕ್ಕೆ ಕಾರಣರಾದರೆಂದು ಆರಾಧಿಸಲಾಗುತ್ತದೆ. ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದಾಗ ಅವರು ತೋರಿದ ಕಾನೂನು ಪ್ರಜ್ಞೆಯನ್ನು ಮತ್ತೆಮತ್ತೆ ಉಲ್ಲೇಖಿಸಲಾಗುತ್ತದೆ. ಇವೆಲ್ಲವೂ ಖರೆಯೇ ಆದರೆ ಅಂಬೇಡ್ಕರ್ ಅವರ ವ್ಯಕ್ತಿತ್ವದಲ್ಲಿದ್ದ ಮೇಲಿನ ನಾಲ್ಕೂ ಆಯಾಮಗಳಿಗೆ ಕಾರಣವಾಗಿದ್ದು ಅವರ ಅಪಾರವಾದ ಅಧ್ಯಯನ ಮತ್ತು ಚಿಂತನೆ; ಸಂಶೋಧನೆ ಮತ್ತು ಪಾಂಡಿತ್ಯ. ಅವರ ಪ್ರಖರ ಬೌದ್ಧಿಕತೆಯ ಮುಖ ಇಂದಿಗೂ ಸರಿಯಾಗಿ ಚರ್ಚೆಗೆ ಒಳಪಡಲೇ ಇಲ್ಲ. ಅಥವಾ ಅವರ ದೈತ್ಯ ಪ್ರತಿಭೆಯನ್ನು ಹಿಡಿದಿಡುವ ಶಕ್ತಿ ಯಾರಿಂದಲೂ ಸಾಧ್ಯವಿಲ್ಲದೆ ಹೋಗಿರಬೇಕು? ಇನ್ನು ಮುಂದೆಯೂ ಯಾರಿಂದಲೂ ಅದು ಸಾಧ್ಯವಿಲ್ಲ! ಅಂಬೇಡ್ಕರ್‌ಗೆ ಅಂಬೇಡ್ಕರ್ ಅವರೆ ಸಾಕ್ಷಿ.

ಒಮ್ಮೆ 'ಜಾತ್ ಪಾತ್ ತೊಡಕ್' ಸಂಘಟನೆಯ ಲಾಹೋರಿನ ಸಮ್ಮೇಳನಕ್ಕೆ (1936) ಅಂಬೇಡ್ಕರ್ ಅವರನ್ನು ಉಪನ್ಯಾಸ ನೀಡಲು ಆಹ್ವಾನಿಸಲಾಗಿತ್ತು. ತಮ್ಮ ಅನಾರೋಗ್ಯದಲ್ಲಿಯೂ ಬಾಬಾಸಾಹೇಬರು ಕಷ್ಟಪಟ್ಟು ಪ್ರಬಂಧ ಸಿದ್ಧಪಡಿಸಿ ಸಂಘಟಕರಿಗೆ ಮೊದಲೇ ಕಳುಹಿಸಿಕೊಟ್ಟರು. ಸಂಘಟಕರು ಆ ಪ್ರಬಂಧದಲ್ಲಿ ಕೆಲವು ಶಬ್ದಗಳನ್ನು ತೆಗೆಯಬೇಕೆಂದು, ಇಲ್ಲವಾದರೆ ಗಲಭೆಯೇಳುವ ಸಾಧ್ಯತೆಯಿದೆಯೆಂದು, ಬದಲಾವಣೆ ಮಾಡದಿದ್ದರೆ ಸಮ್ಮೇಳನ ರದ್ದು ಮಾಡಬೇಕಾಗುವುದೆಂದು ತಿಳಿಸಿದರು. ಅದಕ್ಕೆ ಅಂಬೇಡ್ಕರ್ ಅವರು ಒಂದು ಶಬ್ದವನ್ನೂ ಆ ಪ್ರಬಂಧದಿಂದ ತೆಗೆಯಲು ಸಾಧ್ಯವಿಲ್ಲ ಎಂದು ಬರೆಯುತ್ತ, ನನ್ನ ನಿಲುವನ್ನು ಕೇಳುಗರು ಒಪ್ಪಲೇಬೇಕಾಗಿಲ್ಲ, ಅವರು ನನ್ನ ವಿಚಾರದ ವಿರುದ್ಧ ಹೇಳಿಕೆಗಳನ್ನು ದಾಖಲಿಸಬಹುದಾಗಿತ್ತು. ಆದರೆ ನನ್ನ ವಿಚಾರವನ್ನು ಪ್ರಕಟಿಸುವ ಮುಂಚೆಯೇ ಅದರಲ್ಲಿ ತಿದ್ದುಪಡಿ ಸೂಚಿಸುವ ಕರಾರನ್ನು ನಾನು ಒಪ್ಪುವುದಿಲ್ಲ ಎಂದು ತಿಳಿಸಿ, ಸಭೆಗೆ ಹೋಗಲು ನಿರಾಕರಿಸಿದರು. ಇಲ್ಲಿ ಅಂಬೇಡ್ಕರ್ ಅವರಿಗೆ ತಮ್ಮ ತಾತ್ವಿಕತೆಯಲ್ಲಿದ್ದ ಶ್ರದ್ಧೆ ಮತ್ತು ಅದಕ್ಕೆ ಭಿನ್ನಮತವನ್ನು ಆಲಿಸಿ ವಾಗ್ವಾದ ಹುಟ್ಟಿಸುವ ಪ್ರಜಾಪ್ರಭುತ್ವದಲ್ಲಿನ ಸ್ವಾತಂತ್ರ್ಯ, ನಮ್ರತೆ ಎಲ್ಲವೂ ಇರುವುದನ್ನು ನೋಡಬಹುದು (ರಹಮತ್ ತರೀಕೆರೆ, 12.4.2015, ಪ್ರಜಾವಾಣಿ).

## ಅಂಬೇಡ್ಕರ್ ಎಂಬ ಮಹಾನದಿ

ಅಂಬೇಡ್ಕರ್ ಎಂಬ ಮಹಾನದಿಗೆ ದೇಶದ ಊರುಕೇರಿ, ಬೀದಿ ಬೀದಿಗಳಿಗೂ, ಮನೆ ಮನೆಗಳಿಗೂ ಸಂಬಂಧವಿದೆ. ಸಂವಿಧಾನ ಎಂಬ ಕಾಲುವೆಯ ಮೂಲಕ ಈ ನದಿ ಸದಾ ಹರಿಯುತ್ತಲೇ ಇರುತ್ತದೆ. ಯಾವ ನದಿಯೂ ನೀರನ್ನು ನಿರಾಕರಿಸುವುದಿಲ್ಲ, ತಾರತಮ್ಯ ಮಾಡುವುದಿಲ್ಲ. ಹಾಗೆಯೇ ಈ ನದಿಯೂ ಕೂಡ ಯಾರ ಆತ್ಮಗೌರವಕ್ಕೂ ಧಕ್ಕೆಯಾಗದಂತೆ ಕಾಯುತ್ತಲೇ ಇದೆ. ಅಂಬೇಡ್ಕರ್ ಎಂಬ ಮಹಾನದಿ ಯಾವ ಜಾತಿಯ ಶ್ರೇಷ್ಠತೆಯನ್ನೂ ಎತ್ತಿ ಹಿಡಿದಿಲ್ಲ, ಹಾಗೆಯೇ ಯಾವ ಜಾತಿಗಳನ್ನು ಕೀಳೆಂದು

ಕಡೆಗಣಿಸಲಿಲ್ಲ. ಅಖಂಡ ಮಾನವತೆಯ ಅಲೆಗಳಲ್ಲೇ ಈ ನದಿಯು ಎಲ್ಲ ಜಾತಿಗಳ ಕೇರಿಗಳಲ್ಲೂ ಸಮಾನವಾಗಿ ಹರಿದಿದೆ. ಅಂಬೇಡ್ಕರ್ ಎಂಬ ಈ ನದಿಯಿಂದಾಗಿಯೇ ಜಾತ್ಯತೀತವಾದ ಮೂಲಭೂತ ಹಕ್ಕುಗಳು ಎಲ್ಲರಿಗೂ ದಕ್ಕಿವೆ. ಒಂದು ವೇಳೆ ಅಂಬೇಡ್ಕರ್ ಈ ದೇಶದಲ್ಲಿ ಹುಟ್ಟದೇ ಇದ್ದಿದ್ದರೆ, ಈ ದೇಶದಲ್ಲಿನ ಸನಾತನ ಮತೀಯತೆ ಧಾರ್ಮಿಕ ಸಹಿಷ್ಣುತೆಗೆ ಬೆಂಕಿ ಹಚ್ಚಿ ದೇಶವನ್ನು ಸ್ಮಶಾನ ಮಾಡಿಬಿಡುತ್ತಿತ್ತೋ ಏನೋ.

ಅಂಬೇಡ್ಕರ್ ಎಂಬ ಈ ಮಹಾನದಿ ಸುಮ್ಮನೆ ಹುಟ್ಟಿದ್ದಲ್ಲ. ಇದಕ್ಕೆ ಸಾವಿರಾರು ವರ್ಷಗಳ ಹಿಂದೂ ಸನಾತನತೆಯ ಹಿಂಸೆಯ ಚರಿತ್ರೆಯಿದೆ. ಜಾತಿ ವ್ಯವಸ್ಥೆಯ ಅದೆಷ್ಟೋ ವರ್ಷಗಳ ಕಣ್ಣೀರು ಈ ನದಿಯಲ್ಲಿ ಬೆರೆತಿದೆ. ಜಾತಿಯ ನರಮೇಧದ ಹೆಪ್ಪುಗಟ್ಟಿದ ನೆತ್ತರು ನೀರಾಗಿ ಈ ನದಿಯಲ್ಲಿ ಹರಿದಿದೆ. ಧರ್ಮದ ಹೆಸರಿನ ಅತ್ಯಾಚಾರಿಗಳಿಗೆ ಈ ನದಿ ಮೂಕ ಸಾಕ್ಷಿಯಾಗಿದೆ. ದಿಕ್ಕೆಟ್ಟು ಮೌನವಾಗಿ ರೋದಿಸುತ್ತ ಕರಗಿ ನೀರಾಗಿ ಹರಿದ ಅದೆಷ್ಟೋ ಮಹಿಳೆಯರು ಈ ಜೀವ ನದಿಯ ಮೂಲಕ ತಾಯ್ತನವನ್ನು ಕಂಡುಕೊಂಡಿದ್ದಾರೆ. ಅಂಬೇಡ್ಕರ್ ಅವರ ನದಿಯಲ್ಲಿ ಹಿಂದುತ್ವದ ಅನೇಕ ಪಾಪಗಳು ಕರಗಿ ಮಾನವತ್ವದ ನೀತಿ ಸಂಹಿತೆಯಾಗಿ ಮಾರ್ಪಟ್ಟಿವೆ. ಈ ನದಿಯ ಪ್ರಶಾಂತತೆಯನ್ನು ಯಾರು ಬೇಕಾದರೂ ಅನುಭವಿಸಬಹುದು. ಮೌನವಾಗಿ, ಆಳವಾಗಿ ಅನಂತವಾಗಿ ಹರಿವ ರೀತಿಯಲ್ಲಿ ಎಲ್ಲರನ್ನು ದಡ ಸೇರಿಸುವ ಮಾತೃತ್ವ ಇವರದು.

ಅಂಬೇಡ್ಕರ್ ನದಿಯ ಹೋರಾಟ ಬಹಳ ಕಠಿಣವಾದದ್ದು, ಈ ನದಿ ಎಲ್ಲೆಲ್ಲಿ ನರಕವಿತ್ತೋ ಆ ಜಾಡನ್ನೇ ಹುಡುಕಿ ಹರಿದಿದೆ. ಬೆಟ್ಟಗುಡ್ಡಗಳ ತಡೆಗಳನ್ನೇ ಕೊರೆದು ಹೆಬ್ಬಂಡೆಗಳನ್ನು ಉರುಳಿಸಿ, ಎತ್ತರೆತ್ತರದಿಂದ ಧುಮ್ಮಿಕ್ಕಿ ಕಣಿವೆಗಳನ್ನೆಲ್ಲ ದಾಟಿ ಎಲ್ಲೆಲ್ಲಿ ಅನಾಥರು ನಾಳಿನ – ಮುಂದಿನ ದಾರಿಗಾಗಿ ದಾಹದಲ್ಲಿ ಕಾದು ಕುಳಿತಿದ್ದರೋ ಅವರ ಕಾಲುಗಳ ಬಳಿಯೇ ಹರಿದು ಅವರನ್ನೆಲ್ಲ ತನ್ನ ತೆಕ್ಕೆಗೆ ತೆಗೆದುಕೊಂಡು ಸಾಗಿಬಂದಿದೆ. ಈ ನದಿಯನ್ನು ತಡೆಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಹಾಗೆಯೇ ನದಿಯ ಮೂಲವಾದ ತಳಜಾತಿಗಳ ಜಲದ ಕಣ್ಣನ್ನು ಕಿತ್ತುಹಾಕಲು ಆಗಲಿಲ್ಲ. ಅಷ್ಟರಮಟ್ಟಿಗೆ ಈ ನದಿ ತನ್ನ ಹರಿವನ್ನು ಕಾಯ್ದುಕೊಳ್ಳುತ್ತ ದೇಶದ ಜಲದ ಕಣ್ಣನ್ನೂ ಕಾಯ್ದುಕೊಂಡು ಸಾಗಿಬಂದಿದೆ. ಆದ್ದರಿಂದ ಆಧುನಿಕ ಭಾರತದ ಚರಿತ್ರೆಯಲ್ಲಿ ಈ ನದಿಯ ಪಾತ್ರ ಬಹಳ ವಿಸ್ತಾರವಾದುದು (ಮೊಗಳ್ಳಿ ಗಣೇಶ್, 12.4.2015, ಪ್ರಜಾವಾಣಿ).

## ಅಂಬೇಡ್ಕರರ ಕೊನೆ ಸಂದೇಶ

1942ರಲ್ಲಿ ನಾಗಪುರದಲ್ಲಿ ನಡೆದ ಅಖಿಲ ಭಾರತ ದಮನಿತ ವರ್ಗಗಳ ಸಮ್ಮೇಳನದಲ್ಲಿ ಅಂಬೇಡ್ಕರ್ ಅವರು ಮಾಡಿದ ಚಾರಿತ್ರಿಕ ಭಾಷಣ ಬಾಬಾಸಾಹೇಬರ ಎಲ್ಲ ಸೈದ್ಧಾಂತಿಕ ನಿಲುವುಗಳು ಮತ್ತು ರಾಜಕೀಯ ಹೋರಾಟಗಳನ್ನು ಒಳಗೊಂಡಿದೆ: '...ನಿಮ್ಮ ಉದ್ಧಾರವನ್ನು ನೀವೇ ಮಾಡಿಕೊಳ್ಳಬೇಕು. ಮಹಾಪುರುಷನಿಗಾಗಲೀ, ಪವಾಡ ಪುರುಷನಿಗಾಗಲೀ, ಕಾಯಬಾರದು. ನಿಮಗೆ ನಾನು ಹೇಳುವ ಕೊನೆಯ ಮಾತುಗಳೆಂದರೆ ನೀವು ಶಿಕ್ಷಿತರಾಗಬೇಕು. ಸಂಘರ್ಷ ಮಾಡಬೇಕು. ಸಂಘಟಿತರಾಗ ಬೇಕು. ನಿಮ್ಮಲ್ಲಿ ನಿಮಗೆ ವಿಶ್ವಾಸವಿರಲಿ. ನ್ಯಾಯ ನಮ್ಮ ಪರವಾಗಿ ಇರುವಾಗ ನಮಗೆ

ಸೋಲಾಗಲು ಕಾರಣವೇ ಇಲ್ಲ. ಹೋರಾಟ ನನಗೊಂದು ಆನಂದದಾಯಕ ಸಂಗತಿ. ಈ ಹೋರಾಟ ಸಂಪೂರ್ಣ ಆಧ್ಯಾತ್ಮಿಕ ಸ್ವರೂಪದ್ದು. ಇದರಲ್ಲಿ ಸಾಮಾಜಿಕವಾಗಿರುವಂಥದ್ದು ಏನೂ ಇಲ್ಲ. ಅಥವಾ ಉಪಭೋಗಿಸುವಂಥದ್ದೂ ಅಲ್ಲ. ಅಂದರೆ ನಮ್ಮ ಪಾಲಿಗೆ ಈ ಹೋರಾಟ ಆಸ್ತಿಗಳಿಕೆಗಾಗಲೀ ಅಥವಾ ಅಧಿಕಾರ ಗ್ರಹಣಕ್ಕಾಗಲೀ ಅಲ್ಲ. ಕಳೆದುಕೊಂಡಿರುವ ಮಾನವ ಘನತೆಯನ್ನು ಮತ್ತೆ ಗಳಿಸಿಕೊಳ್ಳಲು ನಡೆಸುತ್ತಿರುವ ಹೋರಾಟವಿದು...'.

ಬಹುಶಃ ಜ್ಞಾನೋದಯದ ನಂತರ ಬುದ್ಧನು ನುಡಿದ ನಾಲ್ಕು ಸತ್ಯಗಳು, ಅಥವಾ ಪರ್ವತ ಪ್ರಸಂಗದಲ್ಲಿ ಏಸುವಿನ ಉಪದೇಶಕ್ಕೆ ಮಾತ್ರ ಹೋಲಿಸಬಹುದಾದ ಸಂದೇಶವಿದು. ಇಂದಿಗೂ ಅಸಮಾನತೆಯ ವಿರುದ್ಧ ಹೋರಾಡುವವರಿಗೆ ದಾರಿದೀಪವಿದ್ದಂತೆ. ಅವರ ಪ್ರಜಾತಾಂತ್ರಿಕ ಹೋರಾಟದಲ್ಲಿ ಶಿಕ್ಷಣಕ್ಕೆ ಮೊದಲ ಸ್ಥಾನ. ಅದು ಪ್ರಮಾಣ ಪತ್ರ ಮತ್ತು ಪದವಿ ಗಳಿಸುವ ಶಿಕ್ಷಣವಲ್ಲ. ಶಿಕ್ಷಣವೆಂದರೆ ಬಾಬಾಸಾಹೇಬರ ಪ್ರಕಾರ ತನ್ನ ಬದುಕಿನ ಮತ್ತು ಪರಿಸರದ ಕಠೋರ ವಾಸ್ತವಗಳನ್ನು ಅರಿತು ಸಮಾಜದಲ್ಲಿರುವ ಅಸಮಾನತೆಯನ್ನು ಪ್ರಶ್ನಿಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳುವುದು. ಪರಿವರ್ತನೆಗೆ ದಾರಿಗಳನ್ನು ಹುಡುಕುವುದು. ಸ್ವರಾಜ್ಯದ ಹೋರಾಟಕ್ಕಿಂತಲೂ ನನ್ನ ಜನಾಂಗದ ಉದ್ಧಾರಕ್ಕಾಗಿ ಮಾಡುವ ಹೋರಾಟವೇ ನನಗೆ ಮುಖ್ಯವೆಂದು, ಪ್ರತಿಪಾದಿಸಿದರೂ ಸಾಮಾಜಿಕ ನ್ಯಾಯದಡಿಯಲ್ಲಿ ಅಸ್ಪೃಶ್ಯರೇ ಅಲ್ಲದೆ ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರೂ ಸೇರಬೇಕೆಂಬುದು ಅಂಬೇಡ್ಕರ್ ಅವರ ಬಯಕೆಯಾಗಿತ್ತು. ಈ ವರ್ಗಗಳು ಮುಖ್ಯವಾಹಿನಿಯಲ್ಲಿ ಗುರುತಿಸಿಕೊಳ್ಳದಿದ್ದರೆ ಸಮಗ್ರತೆಗೆ ಅಪಾಯವೆಂದು ಅವರು ಮನಗಂಡಿದ್ದರು. ಆರ್ಥಿಕ ಮತ್ತು ಸಾಮಾಜಿಕ ನ್ಯಾಯವಿಲ್ಲದೆ, ರಾಜಕೀಯ ಸ್ವಾತಂತ್ರ್ಯ ನೀಡದೆ, ಐಕಮತ್ಯ ಮತ್ತು ಸಮಗ್ರತೆಯನ್ನು ಸಾಧಿಸಲಾಗದು ಎಂದು ಅವರು ನಂಬಿದ್ದರು.

ಇದನ್ನು ಸಾಧಿಸಲು ಚಾತುರ್ವರ್ಣ್ಯದ ಅಡಿಪಾಯದ ಮೇಲಿನ ಸಮಾಜದಲ್ಲಿರುವ ಶ್ರೇಣೀಕೃತ ರಚನೆಯನ್ನು ನಿರ್ಮೂಲನೆ ಮಾಡುವುದು ಅವರ ಮೊದಲನೇ ಹೆಜ್ಜೆಯಾಗಿತ್ತು. ಜಾತಿ ಮತ್ತು ಅಂತಸ್ತುಗಳ ಆಧಾರದ ಮೇಲೆ ಮುಂದುವರಿದ ಜಾತಿಗಳು ಅನುಭವಿಸುವ ಸೌಲಭ್ಯಗಳನ್ನು ತೆಗೆದುಹಾಕಲು ಅವರು ತಮ್ಮ ಹೋರಾಟದ ಆರಂಭದ ಕಾಲದಿಂದಲೂ ಪ್ರಯತ್ನಿಸುತ್ತಲೇ ಬಂದಿದ್ದರು. ಇವರ ಪರಿಕಲ್ಪನೆಗೆ ಜೀವಂತ ರೂಪ ಕೊಡಲು ಅವರಿಗೊಂದು ಅವಕಾಶ ಒದಗಿಬಂದಿತು. ಅದೇ ಸಂವಿಧಾನ ರಚನೆ. ಸಂವಿಧಾನ ಕರಡು ರಚನೆಯ ಅಧ್ಯಕ್ಷರಾದ ಅಂಬೇಡ್ಕರ್ ಸಾಮಾಜಿಕ ನ್ಯಾಯದ ಸಾಧನೆಗಳಿಗಾಗಿ ತಾವು ಗಳಿಸಿಕೊಂಡಿದ್ದ ಅಪಾರ ಪಾಂಡಿತ್ಯ-ಚಿಂತನೆ, ಮತ್ತು ಅನುಭವಗಳನ್ನೆಲ್ಲ ಅದರಲ್ಲಿ ಎರಕ ಹೊಯ್ದರು. ಇದೇ ಅವರು ಭಾರತಕ್ಕೆ ನೀಡಿದ ಅತ್ಯದ್ಭುತ ಕೊಡುಗೆ. ಅಂಬೇಡ್ಕರ್ ರೂಪಿಸಿದ ಸಾಮಾಜಿಕ ನ್ಯಾಯದ ಕಲ್ಪನೆಯನ್ನು ಹೊರತುಪಡಿಸಿ ಇಂದು ಯಾವುದೇ ರಾಜಕೀಯ ಪಕ್ಷ ತನ್ನ ನೀತಿ ನಿರೂಪಣೆಗಳನ್ನು ಬದಲಿಸಿಕೊಳ್ಳಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಭಾರತದ ಸಂವಿಧಾನದಲ್ಲಿ ನಿರ್ಮಾಣ ಮಾಡಿದರು.

ಮನುಷ್ಯನನ್ನು ಮನುಷ್ಯನನ್ನಾಗಿ ಸ್ವೀಕರಿಸದ ಧರ್ಮದ ವಿರುದ್ಧ ಅವರು ಸಮರ ಸಾರಿದರು. 'ಧರ್ಮವು ಮನುಷ್ಯನಿಗಾಗಿ ಇರಬೇಕೇ ಹೊರತು ಮನುಷ್ಯ ಧರ್ಮಕ್ಕಾಗಿ

ಬದುಕಬಾರದು' ಎಂಬುದು ಅವರ ಪ್ರಖರ ನಿಲುವಾಗಿತ್ತು. ಹೊಸ ತಲೆಮಾರು ಮತ್ತೆ ಈ ನಿಟ್ಟಿನಲ್ಲಿ ಮರು ಆಲೋಚಿಸಬೇಕಾದ ಅಗತ್ಯವಿದೆ. ಹೊಸ ತಲೆಮಾರಿನ ನಾಯಕರಿಗೆ, ವಿದ್ಯಾರ್ಥಿಗಳಿಗೆ ಅಂಬೇಡ್ಕರ್ ಅವರ ಅಧ್ಯಯನಶೀಲ ಮನಸ್ಸು ಮಾದರಿಯಾಗುವ ಅಗತ್ಯವಿದೆ. ಅಂಬೇಡ್ಕರ್ ಅವರಿಗೆ ನಿಜವಾಗಿ ಗೌರವ ಸಲ್ಲಿಸಬೇಕಿರುವುದು ಅವರ ಹೆಸರಿನ ಮಹಲುಗಳನ್ನು ಕಟ್ಟುವುದರಿಂದ ಅಲ್ಲ. ಮನುಷ್ಯರ ಮನಸ್ಸುಗಳನ್ನು ಕಟ್ಟುವ ಮೂಲಕ. ಹಾಗೆ ನೋಡಿದರೆ ಯಾವುದೇ ಆದರ್ಶ ಪುರುಷನ ಭವನದ ನಿರ್ಮಾಣಕ್ಕಿಂತಲೂ ಆತನ ಆದರ್ಶಗಳನ್ನು ಪಾಲಿಸುವುದೇ ಶ್ರೇಷ್ಠ. ಆಚರಣೆಯನ್ನು ಧಿಕ್ಕರಿಸಿದ 20ನೇ ಶತಮಾನದ ಮಹಾಚೇತನದ ಚಿಂತನೆಗಳನ್ನು ಆಚರಣೆಗಳ ಅಬ್ಬರದಲ್ಲಿ ಮುಳುಗಿಸುವ ವಿಧಾನಗಳು ಇನ್ನಾದರೂ ಬದಲಾಗಬೇಕಿದೆ (ಡಾ. ಕೆ. ಪುಟ್ಟಸ್ವಾಮಿ, ಪ್ರಜಾವಾಣಿ, 12.4.2015,).

ಅಂಬೇಡ್ಕರ್ ಅವರು ಸಾಮಾಜಿಕ ಸಮಾನತೆ ಪಡೆಯಲು ರೂಪಿಸಿದ ಹೋರಾಟದ ಮಾರ್ಗಗಳು ಮತ್ತು ಸಂರಚಿಸಿದ ಸಿದ್ಧಾಂತಗಳು ಇಂದಿಗೂ ಪ್ರಸ್ತುತವಾಗಿ ಉಳಿದಿರುವುದು ಅವರ ಮೇಧಾವಿತನಕ್ಕೆ ಸಾಕ್ಷಿಯಾಗಿದೆ. ಅಖಂಡ ಭಾರತದ ಎಲ್ಲ ಜನವರ್ಗಗಳ ಸಮಾನತೆಯ ಬಗ್ಗೆ ಚಿಂತಿಸಿದ ಅವರನ್ನು ಒಂದು ಜನಾಂಗದ ನಾಯಕನನ್ನಾಗಿ ಮತ್ತು ಆ ಜನಾಂಗದ ಓಲೈಕೆಗಾಗಿ ಬಳಸುವ ಹೆಸರಾಗಿ ಅವರ ವ್ಯಕ್ತಿತ್ವ ಮತ್ತು ಚಿಂತನೆಗಳನ್ನು ಸಂಕುಚಿತಗೊಳಿಸಿರುವುದು ದುಃಖದ ಸಂಗತಿಯಾಗಿದೆ. ಅವರನ್ನು ಸಂಪೂರ್ಣ ಜನನಾಯಕನನ್ನಾಗಿ ಅಂಗೀಕರಿಸಿ ಮುಖ್ಯವಾಗಿ ಅವರು ಸಾಮಾಜಿಕ, ರಾಜಕೀಯ ಸಮಾನತೆಗಾಗಿ ರೂಪಿಸಿದ ವಿಚಾರಗಳನ್ನು ಮತ್ತೆ ಅವಲೋಕಿಸುವ ತುರ್ತು ಅಗತ್ಯ ಇದೆ. ಬುದ್ಧಗುರು ತನ್ನ ಶಿಷ್ಯ ಆನಂದನಿಗೆ ಹೇಳಿದ ಮಾತನ್ನು ಅಂಬೇಡ್ಕರ್ ಕೇವಲ ದಲಿತರಿಗಲ್ಲದೆ, ಎಲ್ಲರಿಗೂ ಹೇಳಿದ್ದಾರೆ: 'ಅತ್ತದೀಪಭ – ನಿಮಗೆ ನೀವೇ ಬೆಳಕಾಗಿ'. ಅದನ್ನೇ ನಮ್ಮ ಮಂಟೇಸ್ವಾಮಿ 'ಹಾದಿಯೊಳಗಣ ಜ್ಯೋತಿ, ಬೀದಿಯೊಳಗಣ ಜ್ಯೋತಿ, ಅಂಗ್ಯೆಯೊಳಗಣ ಜ್ಯೋತಿ, ಮುಂಗ್ಯೆಯೊಳಗಣ ಜ್ಯೋತಿ, ಸಮಾಧಿ ಮೇಲೆ ಕಸಿಮಡಗಿದ್ರೆ ದೇವಾ ಭಿನ್ನಭೇದವಿಲ್ಲದೆ ಉರಿವ ಪರಂಜ್ಯೋತಿ!' ಎಂದಿದ್ದಾರೆ.

## ಅಂಬೇಡ್ಕರ್ ಅವರ ಅಂತಿಮ ರಾತ್ರಿ

1956, ಡಿಸೆಂಬರ್ 5ರ ರಾತ್ರಿ ಅಂಬೇಡ್ಕರ್ ಮಲಗಿದಾಗ ರಾತ್ರಿ 11:45 ಗಂಟೆ. ಅಂಬೇಡ್ಕರ್ ಅವರ ಆಪ್ತ ಸಹಾಯಕ ನಾನಕ್‌ಚಂದ್ ರತ್ತು ಪಕ್ಕದಲ್ಲೇ ಇದ್ದರು. ಹಿಂದಿನ ದಿನವೂ ರತ್ತು ತನ್ನ ಮನೆಗೆ ಹೋಗಿರಲಿಲ್ಲ. ಅಂಬೇಡ್ಕರ್‌ಗೆ ನಿದ್ದೆ ಬಂದಂತೆ ಕಂಡಾಗ ಅನುಮತಿ ಪಡೆದ ರತ್ತು ಮನೆಗೆ ಹೊರಟರು. ರತ್ತು ಮನೆ ತಲುಪಿದ್ದೆ ತಡ, ಅಡಿಗೆ ಕೆಲಸದ ಸುಧಾಮ ಸೈಕಲ್‌ನಲ್ಲಿ ಹಿಂದೆಯೇ ಹೋಗಿ ಯಜಮಾನರು ಕರೆಯುತ್ತಿದ್ದಾರೆ ಎಂದ. ಇಬ್ಬರೂ ಮನೆಗೆ ಧಾವಿಸಿ ಬಂದರು. 'ಬುದ್ಧ ಮತ್ತು ಅವನ ಧರ್ಮ' ಕೃತಿಗೆ ಸಿದ್ಧಪಡಿಸಿದ್ದ ಮುನ್ನುಡಿಯ ಅಂತಿಮ ಪ್ರತಿಯನ್ನು, ಅತ್ರೆ ಮತ್ತು ಜೋಷಿಗೆ ಬರೆದಿದ್ದ ಪತ್ರಗಳನ್ನು ಹಾಗೂ ಬರ್ಮಾ ಸರಕಾರಕ್ಕೆ ಬರೆದಿದ್ದ ಪತ್ರವನ್ನು ಮೇಜಿನ ಮೇಲೆ ಇಡಲು ರತ್ತುಗೆ ಸೂಚಿಸಿದರು. ರತ್ತು ಅವುಗಳನ್ನು ಮೇಜಿನ ಮೇಲ್ಲಿಟ್ಟು

ಮತ್ತೆ ಅನುಮತಿ ಪಡೆದು ಮನೆಗೆ ಹೊರಟುಹೋದರು. ಸುಧಾಮ ಎಂದಿನಂತೆ ಕೆಲವು ಸಿಹಿ ತಿಂಡಿಗಳನ್ನು ಮತ್ತು ಕಾಫಿ ತುಂಬಿದ ಫ್ಲಾಸ್ಕ್ ಮೇಜಿನ ಮೇಲಿಟ್ಟ. ಅಂಬೇಡ್ಕರ್ ಮಲಗುತ್ತಲೇ ಅವರನ್ನು ಸಾವು ಕಬಳಿಸಲು ಹೊಂಚು ಹಾಕಿ ಕುಳಿತಿತ್ತು ಎಂಬ ಅನುಮಾನ ಯಾರಿಗೂ ತಿಳಿದಿರಲಿಲ್ಲ.

ಡಿಸೆಂಬರ್ 6ರ ಬೆಳಗ್ಗೆ ಅಂಬೇಡ್ಕರ್ ಅವರ ಪತ್ನಿ ಸವಿತಾ ಅವರು ಎಂದಿನಂತೆ ಮುಂಚೆಯೇ ಎದ್ದರು. ಪತಿಯ ಕಡೆ ಕಣ್ಣು ಹಾಯಿಸಿದಾಗ ಅವರಿನ್ನೂ ಮಲಗಿಯೇ ಇದ್ದರು. ಮನೆ ಮುಂದಿನ ತೋಟದಲ್ಲಿ ಒಂದು ಸುತ್ತುಹಾಕಿ ಬಂದು ಮತ್ತೆ ನೋಡಿದರು. ಅಂಬೇಡ್ಕರ್ ಇನ್ನೂ ಹಾಗೇ ಮಲಗಿದ್ದನ್ನು ನೋಡಿ ಹತ್ತಿರಕ್ಕೆ ಬಂದು ಎಬ್ಬಿಸಿದರು. ಕೈ ಮುಟ್ಟುತ್ತಲೇ, ತಮ್ಮ ಪತಿಯ ಜೀವ ಹೊರಟುಹೋಗಿದೆ ಎಂದು ತಿಳಿದುಕೊಂಡ ಸವಿತಾ ನೆಲಕ್ಕೆ ಕುಸಿದು ಬಿದ್ದರು. ಅನಂತರ ಸಾವರಿಸಿಕೊಂಡು ಸುಧಾಮನ ಮೂಲಕ ರತ್ತು ಅವರಿಗೆ ಹೇಳಿ ಕಳುಹಿಸಿ, ರತ್ತು ಧಾವಿಸಿ ಬಂದರು. ಅಂಬೇಡ್ಕರ್ ಅವರ ಮುಖ ನೋಡಿ ರತ್ತು ಅವರಿಗೆ ಕರಳು ಕಿತ್ತುಬಂದಂತೆ ಆಯಿತು. ಅಂಬೇಡ್ಕರ್‌ರವರ ಕೈಕಾಲುಗಳನ್ನು ಉಜ್ಜಿ ನೋಡಿದರು; ಕೈಗಳನ್ನು ಮಡಚಲು ಯತ್ನಿಸಿದರು. ಬಾಯಲ್ಲಿ ತೊಟ್ಟು ಬ್ರಾಂದಿ ಹಾಕಿ ನೋಡಿದರು. ಆದರೆ ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ಅಂಬೇಡ್ಕರ್‌ರವರ ಪ್ರಾಣ ಪಕ್ಷಿ ಅವರು ಮಲಗಿದಾಗಲೇ ಹಾರಿಹೋಗಿತ್ತು. ಕಳೆದ ಎರಡು ವರ್ಷಗಳಿಂದ ದುರ್ಬಲಗೊಂಡಿದ್ದ ಅವರ ಹೃದಯ ಬಡಿತವನ್ನು ನಿಲ್ಲಿಸಿತ್ತು. (ಮಂಗ್ಳೂರು ವಿಜಯ, ಸಂಘರ್ಷ, ಸಂಬುದ್ಧ ಪ್ರಕಾಶನ, ಪು. 452)

## ಅಧ್ಯಾಯ-4

**ಸತ್ತುಹೋದ ಮೇಲೆ ಮತ್ತೆ ಬದುಕಬೇಕು ಎಂದರೆ ಒಂದು ಒಳ್ಳೆ ಕೆಲಸ ಮಾಡಿ ಹೋಗಿ**

**-ಅಂಬೇಡ್ಕರ್.**

# ದಶಾವತಾರ: ಅಸುರ ಮತ್ತು ಆರ್ಯರ ನಡುವಿನ ಸಂಘರ್ಷ

ಹಿಂದೂ ಧರ್ಮದ ಪ್ರಕಾರ ವಿಷ್ಣುವಿನ ಹತ್ತು ಅವತಾರಗಳು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ/ಬಲರಾಮ ಮತ್ತು ಕಲ್ಕಿ. ಈ ಹತ್ತು ಅವತಾರಗಳ ಪಟ್ಟಿಯಲ್ಲಿ ಕೆಲವು ಪುರಾಣಗಳಲ್ಲಿ ಕೆಲವು ಅವತಾರಗಳು ಮೇಲೆ ಕೆಳಗೆ ಇರುವುದನ್ನು ನೋಡಬಹುದು. ಈಚಿನ ಹಿಂದೂ ಬುದ್ಧಿವಂತರು ಈ ಅವತಾರಗಳನ್ನು ಡಾರ್ವಿನ್‌ನ ಜೀವ ವಿಕಾಸಕ್ಕೆ ಹೋಲಿಸಿಬಿಟ್ಟಿದ್ದಾರೆ. ಡಾರ್ವಿನ್‌ಗೆ ಮುನ್ನ ಈ ಬುದ್ಧಿವಂತರಾರೂ ಅಂತಹ ಅರ್ಥವನ್ನು ನೀಡಹೋಗಿರಲಿಲ್ಲ! ಆದರೆ ಈ ವಿಷ್ಣು ಯಾರು ಎನ್ನುವುದನ್ನು ಸರಿಯಾಗಿ ಯಾವ ಪುರಾಣದಲ್ಲೂ ವಿವರಿಸಿಲ್ಲ. ವಿಷ್ಣುವಿನ ಬಗ್ಗೆ ಹಿಂದೂ, ಜೈನ, ಬೌದ್ಧರ ಒಂದೊಂದು ಪುರಾಣದಲ್ಲಿ ಒಂದೊಂದು ರೀತಿಯ ಕತೆಗಳಿವೆ. ಭಾರತದ ಉದ್ದಕ್ಕೂ ಮತ್ತು ಅಕ್ಕಪಕ್ಕದ ದೇಶಗಳಲ್ಲಿ ಒಟ್ಟು 300 ರಾಮಾಯಣಗಳು ಇರುವುದಾಗಿ ತಿಳಿದುಬರುತ್ತದೆ. ಇನ್ನು ಈಗೀಗ ಲೇಖಕ ಮಹಾಶಯರು ಎಲ್ಲಾ ಭಾಷೆಗಳಲ್ಲೂ ತಮ್ಮದೇ ರಾಮಾಯಣ, ಮಹಾಭಾರತಗಳನ್ನು ಬರೆದಿದ್ದೇ ಬರೆದಿದ್ದು. ಕನ್ನಡದಲ್ಲೂ ನಮ್ಮ ಕುವೆಂಪುಯಿಂದ ವೀರಪ್ಪ ಮೊಯಿಲಿಯವರೆಗೂ ರಾಮಾಯಣಗಳನ್ನು ರಚಿಸಿದ್ದಾರೆ. ಎಸ್. ಎಲ್. ಭೈರಪ್ಪನವರ ಮಹಾಭಾರತವೂ (ಪರ್ವ) ಇದೆ.

ಆರ್ಯರು ಬಹುಶಃ ಬ್ರಹ್ಮ ಮತ್ತು ಇಂದ್ರನ ವಿರುದ್ಧ ಸೃಷ್ಟಿಸಿದ ಇಲ್ಲವೇ ಬೆಳೆಸಿದ ಮಹಾವಿಷ್ಣು ಕಾಲಕಾಲಕ್ಕೆ ಈ ಭೂಮಿಯ ಮೇಲೆ ಅನ್ಯಾಯಗಳು ನಡೆದಾಗಲೆಲ್ಲ ಒಂದೊಂದು ಅವತಾರ ಎತ್ತಿಬಂದು ಅಸುರ ರಾಜರನ್ನು ಸಂಹರಿಸಿ, ಎಲ್ಲವನ್ನೂ ಸರಿಪಡಿಸಿ ಹಿಂದಕ್ಕೆ ಹೋಗಿದ್ದಾನೆ. ಇಲ್ಲಿಯೇ ಭೂಮಿಯ ಮೇಲೆ ಶಾಶ್ವತವಾಗಿ ಯಾಕೆ ಉಳಿದುಕೊಳ್ಳಲಿಲ್ಲವೊ ಗೊತ್ತಿಲ್ಲ. ವಿಷ್ಣು ಇಷ್ಟಕ್ಕೂ ಭೂಮಿಯ ಮೇಲೆ ಅವತರಿಸಿದಾಗೆಲ್ಲ ಬಹುಜನರ ಮೇಲೆ ಅನ್ಯಾಯ ದಬ್ಬಾಳಿಕೆಗಳನ್ನೇ ನಡೆಸಿ, ಆರ್ಯರಿಗೆ ಮಾತ್ರ ಒಳ್ಳೆಯದನ್ನು ಮಾಡಿ ಹೋಗಿದ್ದಾನೆ. ಇನ್ನು ದಶಾವತಾರ ಕತೆಗಳಿಗೆ ಬಂದಾಗ

ಭೂಮಿಯ 465 ಕೋಟಿ ವರ್ಷಗಳ (ವಯಸ್ಸು) ಕಾಲದಲ್ಲಿ ಕೇವಲ 10 ಅವತಾರಗಳನ್ನು ಎತ್ತಿರುವುದು ತೀರಾ ಕಡಿಮೆ ಎನ್ನಬಹುದು. ಅದೂ ಎಲ್ಲಾ ನಮ್ಮ ದೇಶದಲ್ಲೇ! ಬ್ರಹ್ಮಾಂಡದಲ್ಲಿ ಮುಳುಗಿಹೋಗುತ್ತಿದ್ದ ಭೂಮಿಯನ್ನು ವರಾಹ ಅಂದರೆ ಹಂದಿ ಅವತಾರದಲ್ಲಿ ಬಂದ ವಿಷ್ಣು ತನ್ನ ಎರಡು ದಂತಗಳ / ಮುಖದ ಮೂಲಕ ಬಹಳ ಕಷ್ಟಪಟ್ಟು ಮತ್ತೆ ಅದೇ ಸ್ಥಾನದಲ್ಲಿ ತಂದಿಟ್ಟರು ಎನ್ನಲಾಗಿದೆ. ಈ ವರಾಹದ ದಂತಗಳು ಮತ್ತು ಮುಖದ ಮೇಲಿನ ಚಿತ್ರದೊಂದಿಗೆ ಭೂಮಿಯನ್ನು ಗುಂಡಗೆ ಚಿತ್ರಿಸಿರುವುದು (ಬಹಳ ವರ್ಷಗಳ ಹಿಂದೆ) ಹಿಂದೂಗಳಿಗೆ ಭೂಮಿ ಗುಂಡಗೆ ಇರುವುದು ಎಷ್ಟೋ ಸಾವಿರ ವರ್ಷಗಳ ಮುಂಚೆಯೇ ಗೊತ್ತಿದೆ ಎಂಬುದಾಗಿ ಕೆಲವು ಬುದ್ಧಿವಂತರು ಹೇಳಿಕೊಳ್ಳುತ್ತಿದ್ದಾರೆ. ಹತ್ತು ಅವತಾರಗಳಲ್ಲಿ ಮೊದಲ ಮೂರು ಅವತಾರಗಳನ್ನು ಬಿಟ್ಟರೆ ಉಳಿದವೆಲ್ಲ ಮನುಷ್ಯನ ಅವತಾರಗಳು. ಭೂಮಿಯ 465 ಕೋಟಿ ವರ್ಷಗಳ ವಯಸ್ಸಿನಲ್ಲಿ ಮನುಷ್ಯ ಕಾಣಿಸಿಕೊಂಡಿದ್ದು ಕಳೆದ 5 ಲಕ್ಷ ವರ್ಷಗಳ ಇತ್ತೀಚೆಗೆ. ಅದರಲ್ಲಿ 7 ಅವತಾರಗಳು ಮನುಷ್ಯನದು.

ದಶಾವತಾರಗಳಲ್ಲಿ ಬರುವ ವಿಷ್ಣುವಿನ ಅವತಾರಗಳು, ಮೂಲ ಜನರು ಅಥವಾ ಅಸುರರು ಪ್ರತಿಭಟನೆ ಮಾಡಿದಾಗೆಲ್ಲ ಅವರನ್ನು ಯುದ್ಧಗಳಲ್ಲಿ ಮೋಸ ಮಾಡಿ ಸೋಲಿಸಿದ ಕತೆಗಳೇ ಆಗಿವೆ. ಅಥವಾ ಆರ್ಯರ ಎದುರಿಗೆ ಘರ್ಷಣೆಗೆ ನಿಂತ ಮೂಲ ಜನಾಂಗಗಳನ್ನು ಕುಟಿಲವಾಗಿ ಸಂಹರಿಸಿರುವುದೇ ಈ ದಶಾವತಾರಗಳ ಹಿಂದಿನ ಮೂಲ ಉದ್ದೇಶವಾಗಿತ್ತು. ಈ ಕುಟಿಲ ರೂಪಗಳು ಕಾಲಾಂತರದಲ್ಲಿ ಅನೇಕ ರೂಪಗಳನ್ನು ಪಡೆದು ಈಗ ಆರ್‌ಎಸ್‌ಎಸ್/ಬಿಜೆಪಿಯ ಹೆಸರಿನಲ್ಲಿ ಚಲಾವಣೆಯಾಗುತ್ತಿವೆ. ಮಹಾತ್ಮ ಗಾಂಧಿ, ವಿನೋಬಾ ಭಾವೆ ಮುಂತಾದ ನಾಯಕರೂ ಕೂಡ ಬೇರೆ ರೀತಿಯಲ್ಲಿ ಅದೇ ಕೆಲಸದಲ್ಲಿ ತೊಡಗಿಕೊಂಡಿದ್ದರು ಎಂಬ ಗುಮಾನಿಗಳು ಇವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತದಲ್ಲಿ ಬುದ್ಧ, ಬಸವ, ಮಹಾತ್ಮ ಜ್ಯೋತಿಬಾ ಫುಲೆ, ಷಾಹು ಮಹಾರಾಜ್, ಅಂಬೇಡ್ಕರ್ ಇನ್ನಿತರ ಸಮಾಜ ಸುಧಾರಕರು ಹುಟ್ಟಿ ಬರದಿದ್ದರೆ ಮೂಲ ಜನರ ಪರಿಸ್ಥಿತಿ ಇನ್ನೂ ಅಧೋಗತಿಯಲ್ಲೇ ಇರುತ್ತಿತ್ತು.

ಭಗವದ್ಗೀತೆಯಲ್ಲಿ ಕೃಷ್ಣನ ಮೂಲಕ ಕರ್ಮಫಲ, ಪುನರ್‌ಜನ್ಮ, ಪಾಪ-ಪುಣ್ಯ, ಧರ್ಮಗಳೆಂಬ ವಿಷಯಗಳನ್ನು ಬ್ರಹ್ಮಾಂಡವಾಗಿ ಉದ್ಗರಿಸಿದ ಆರ್ಯರು ಅಸುರರನ್ನು ಸಂಪೂರ್ಣವಾಗಿ ತಮ್ಮ ತೆಕ್ಕೆಗೆ ತೆಗೆದುಕೊಂಡುಬಿಟ್ಟರು. ಇದೇ ಕಾಲದಲ್ಲಿ ಇಡೀ ದೇಶದಲ್ಲಿ ಹರಡಿಕೊಂಡಿದ್ದ ಶಿವನ ದೇವಾಲಯಗಳು ಮತ್ತು ಸ್ಥಳೀಯ ದೇವತೆಗಳ ದೇವಾಲಯಗಳನ್ನು ಧ್ವಂಸ ಮಾಡಿ ರಾಮ, ಕೃಷ್ಣರ ದೇವಾಲಯಗಳನ್ನು ಸ್ಥಾಪಿಸಲಾಯಿತು. ನಿಜವಾಗಿಯೂ ರಾಮ ಮತ್ತು ಕೃಷ್ಣರು ಮಾಡಿದ ಘನಕಾರ್ಯಗಳಿಂದ ಅವರಿಗೆ ದೈವತ್ವ ಪಡೆಯುವ ಯಾವ ಅರ್ಹತೆಗಳೂ ಇರಲಿಲ್ಲ ಎಂದೇ ಹೇಳಬಹುದು. ಭೂಲೋಕದಲ್ಲಿ ಅವರು ಮಾಡದ ಪಾಪ ಕಾರ್ಯಗಳೇ ಇಲ್ಲ. ಒಬ್ಬ ಸಾಧಾರಣ ಮನುಷ್ಯ ಎತ್ತುವ ಪ್ರಶ್ನೆಗಳಿಗೆ ರಾಮಾಯಣ, ಮಹಾಭಾರತ ಮತ್ತು ಪುರಾಣಗಳಲ್ಲಿ ಅವರು ನಡೆಸಿದ ದುಷ್ಟ ಕಾರ್ಯಗಳಿಗೆ ಉತ್ತರಗಳನ್ನು ಕೊಡಲು ಯಾವ ವಿದ್ವಾಂಸರಿಂದಲೂ ಸಾಧ್ಯವಿಲ್ಲದಾಗಿದೆ. ಕೃಷ್ಣ, ಭಗವದ್ಗೀತೆಯ ಅಧ್ಯಾಯ 4, ಶ್ಲೋಕ 8ರಲ್ಲಿ ಹೀಗೆ ಹೇಳುತ್ತಾನೆ: 'ಧರ್ಮವನ್ನು ಉಳಿಸಲು, ಅಧರ್ಮವನ್ನು ನಾಶ ಮಾಡಲು

ಹಾಗೂ ಸದಾಚಾರ ತತ್ವಗಳನ್ನು ಮರುಸ್ಥಾಪನೆ ಮಾಡಲು ನಾನು ಮತ್ತೆ ಮತ್ತೆ ಅವತಾರ ಎತ್ತಿ ಬರುತ್ತೇನೆ'.

## ಮತ್ಸ್ಯ/ಕೂರ್ಮ ಅವತಾರ

ವಿಷ್ಣು, ಮುಳುಗುತ್ತಿದ್ದ ಮನುವನ್ನು ದೋಣಿಯಿಂದ ಕಾಪಾಡುತ್ತಾನಂತೆ. ಅನಂತರ ಸುನಾಮಿಯಲ್ಲಿ ಸಿಕ್ಕಿಕೊಂಡ ಎಲ್ಲ ಜೀವಜಂತುಗಳನ್ನು ಕಾಪಾಡಿ ಭೂಮಿಯ ಮೇಲೆ ಮರು ಸ್ಥಾಪಿಸಿದನಂತೆ. ಅಸುರರು ಮತ್ತು ದೇವತೆಗಳು ಹಾಲಿನ ಸಮುದ್ರದಲ್ಲಿ ಅಮೃತ ಪಡೆಯಲು ಸಿಲುಕಿದಾಗ ಅಮರತ್ವದ ಅಮೃತ ಮಥಿಸಿ ಅದು ಒಂದು ಕಡೆ ಶೇಖರಣೆಯಾಗಿ ತೂಕದಿಂದ ಮಂದಾರ ಪರ್ವತ ಮುಳುಗಲು ಪ್ರಾರಂಭಿಸುತ್ತದೆ. ಆಗ ವಿಷ್ಣು ಕೂರ್ಮ ರೂಪ ಎತ್ತಿ ಪರ್ವತ ಮುಳುಗದಂತೆ ನೋಡಿಕೊಳ್ಳುತ್ತಾನೆ. ಕೊನೆಗೆ ಅದು ಆರ್ಯ ದೇವತೆಗಳ ಪಾಲಾಗುತ್ತದೆ. ಮಧ್ಯ ಏಷಿಯಾದ ಇರಾನ್‌ನಿಂದ ಆರ್ಯರು ಸಣ್ಣಸಣ್ಣ ದೋಣಿಗಳಲ್ಲಿ ಸಮುದ್ರ ಮೂಲಕ ಭಾರತ ತಲುಪಿದರು. ಅವರು ಬಂದ ದೋಣಿಗಳು ಮೀನಿನ ಆಕಾರದಲ್ಲಿದ್ದು ಅದು ವೇಗವಾಗಿ ಮೀನಿನಂತೆ ಚಲಿಸುತ್ತಿತ್ತು. ಆ ದೋಣಿ ನಡೆಸುತ್ತಿದ್ದ ನಾವಿಕನಿಗೆ ಆರ್ಯರು 'ಹೊಸ ಮತ್ಸ್ಯ ಹುಟ್ಟಿದ; ಮತ್ಸ್ಯ ಅವತಾರ' ಎಂದು ಕರೆದರು ಎನ್ನಲಾಗಿದೆ. ಅನಂತರ ಕೆಲವು ದಿನಗಳಾದ ಮೇಲೆ ಇನ್ನಷ್ಟು ಸುಧಾರಿಸಿದ ಆಮೆಯಂತಿದ್ದ ದೋಣಿಗಳಲ್ಲಿ ಮತ್ತೆ ಬಂದ ಆರ್ಯರ ಗುಂಪುಗಳನ್ನು 'ಕೂರ್ಮ ಅವತಾರ' ಎಂದು ಕರೆಯಲಾಯಿತು. ಸಾಮಾನ್ಯವಾಗಿ ಆರ್ಯರು ಮಧ್ಯ ಏಷಿಯಾ ಕಡೆಯಿಂದ ಸರಸ್ವತಿ ನದಿಯ ಮೂಲಕ ಅಥವಾ ನದಿಯನ್ನು ದಾಟಿ ಬಂದರು ಎನ್ನುವ ಮಾತಿದೆ. ಇದಕ್ಕೆ ಪುರಾವೆ ಎಂಬಂತೆ ಸರಸ್ವತಿ ನದಿ ಒಂದು ಕಾಲದಲ್ಲಿ (3–10 ಸಾವಿರ ವರ್ಷಗಳ ಹಿಂದೆ) ಹಿಮಾಲಯದಲ್ಲಿ ಹುಟ್ಟಿ ಕುರುಕ್ಷೇತ್ರ ಮತ್ತು ರಾಜಸ್ತಾನದ ಮೂಲಕ ಹರಿದು ಗುಜರಾತಿನ ಕಛ್‌ನಲ್ಲಿ ಅರಬ್ಬಿ ಸಮುದ್ರ ಸೇರುತ್ತಿತ್ತು. (Mahatma Jotirao Phule, Slavery; translated by P. G. Patil, pub. by Govt. of Maharashtra, Volume-I, p.8.9,1991). ಇದು ವೈಜ್ಞಾನಿಕವಾಗಿ ದೃಢಪಟ್ಟಿದೆ. ಗಂಗಾ ಯಮುನಾ ನದಿಗಳ ಜೊತೆಗೆ ಸರಸ್ವತಿ ನದಿ ಅಲಹಾಬಾದ್‌ನಲ್ಲಿ ಸಂಗಮವಾಗುತ್ತವೆ ಎಂಬುದನ್ನು ಹಿಂದೂಗಳು ಇಂದಿಗೂ ನಂಬಿದ್ದಾರೆ.

## ವರಾಹ ಅವತಾರ

ಅಸುರ ರಾಜನಾದ ಹಿರಣ್ಯಾಕ್ಷನನ್ನು ಕೊಲ್ಲಲು ವಿಷ್ಣು, ವರಾಹ ಅವತಾರವನ್ನು ಎತ್ತುತ್ತಾನೆ. ಈ ಹಿರಣ್ಯಾಕ್ಷನು ಭೂಮಿಯನ್ನು ಕಾಸ್ಮಿಕ್ ಸಾಗರದೊಳಕ್ಕೆ ಎತ್ತಿಕೊಂಡು ಹೋದಾಗ ವಿಷ್ಣುವಿನ ಜೊತೆಗೆ ಭಯಂಕರ ಯುದ್ಧ ನಡೆಯುತ್ತದೆ. ಈ ಯುದ್ಧ ಒಂದು ಸಾವಿರ ವರ್ಷ ಕಾಲ ನಡೆಯುತ್ತದೆ ಎಂದು ಪುರಾಣಗಳು ಹೇಳುತ್ತವೆ. ಬಹುಶಃ ಇದು ಅಸುರ ಮತ್ತು ಆರ್ಯರ ನಡುವೆ ನಡೆದ ಯುದ್ಧಗಳು ಅಥವಾ ಸಂಘರ್ಷಗಳ ದೀರ್ಘ ಕಾಲ ಇರಬೇಕು? ಕೊನೆಗೆ ವರಾಹ ಹಿರಣ್ಯಾಕ್ಷನನ್ನು ಸೋಲಿಸಿ ಭೂಮಿಯನ್ನು ಮೇಲಕ್ಕೆ ತಂದು ಯಥಾವತ್ತಾಗಿ ಸ್ಥಾಪಿಸುತ್ತಾನೆ. ಹಿರಣ್ಯಾಕ್ಷನು ಒಬ್ಬ ಮಹಾನ್ ಅಸುರ

ರಾಜನಾಗಿದ್ದು ಅವನ ಆಡಳಿತ ದಕ್ಷಿಣ, ಮಧ್ಯಭಾರತದಲ್ಲೂ ವ್ಯಾಪಿಸಿತ್ತು ಎನ್ನುವ ವಿಷಯ ಪುರಾಣಗಳಲ್ಲಿ ದೊರಕುತ್ತದೆ. ಮತ್ಸ್ಯ ಮತ್ತು ಕೂರ್ಮ ಅವತಾರಗಳಲ್ಲಿ ಭಾರತ ಖಂಡ ಪ್ರವೇಶಿಸಿದ ಆರ್ಯರ ಮೊದಲ ದೊಡ್ಡ ವಿಜಯ ಬಹುಶಃ ವರಾಹ ರೂಪದಲ್ಲಿ ಹಿರಣ್ಯಾಕ್ಷ ರಾಜನ ಮೇಲೆಯೇ ಇರಬೇಕು.

ಇಲ್ಲಿ ಸಾಕ್ಷಾತ್ ನಾರಾಯಣನೆ ವರಾಹ ರೂಪ ತಾಳಿ ಭೂಮಿಯ ಮೇಲೆ ಅವತರಿಸುತ್ತಾನೆ. ನಾರಾಯಣನ ಮೂಲ, ಆತನ ತಂದೆ ತಾಯಿ ಯಾರು? ಎಲ್ಲಿಂದ ಉದ್ಭವಿಸಿದ ಎನ್ನುವುದು ಎಲ್ಲೂ ಸರಿಯಾಗಿ ದೊರಕುವುದಿಲ್ಲ. ಮಹಾತ್ಮ ಫುಲೆಯವರು ತಮ್ಮ 'ಸ್ಲೇವರಿ' ಕೃತಿಯಲ್ಲಿ ಹೀಗೆ ಬರೆದಿದ್ದಾರೆ. 'ಪಾಪ, ಆದಿನಾರಾಯಣನನ್ನು ಆತನ ತಾಯಿ ಪದ್ಮ ಎಂಬ ಹಂದಿ ತಿನ್ನದೆ ಬಿಟ್ಟಿದ್ದು ಆಶ್ಚರ್ಯ (ಹಂದಿ ತನ್ನ ಮೊದಲ ಮರಿಯನ್ನು ತಾನೇ ತಿಂದುಕೊಳ್ಳುತ್ತದೆ!) ಅಷ್ಟೇ ಅಲ್ಲ, ಈ ಪದ್ಮಳ ಗಂಡ ಯಾರೆಂಬುದನ್ನು ಭಾಗವತದಲ್ಲಿ ಹೇಳಿಲ್ಲ. ಬ್ರಹ್ಮನೇ ಪದ್ಮಳ ಗಂಡನಾಗಿರಬೇಕು. ಯಾಕೆಂದರೆ ಎಲ್ಲದರ ಮೂಲ ಸೃಷ್ಟಿಕರ್ತ ಅವನೇ ತಾನೇ? ಇನ್ನು ಬ್ರಹ್ಮನ ಜೊತೆಗೆ ನಾರದ, ಮನು ಮುಂತಾದವರ ತಂದೆ ತಾಯಿ ಯಾರೆಂಬುದು ಯಾರಿಗೂ ತಿಳಿದಿಲ್ಲ. ಇದರಿಂದ ಗೊತ್ತಾಗುವ ವಿಷಯವೆಂದರೆ ಆರ್ಯರು ಅಸಂಬದ್ಧ ಕತೆಗಳನ್ನು ಸೃಷ್ಟಿಸಿದರು ಎನ್ನುವುದನ್ನು ಯಾರು ಬೇಕಾದರೂ ಹೇಳಬಹುದು.' ಅಂತೂ ಕೊನೆಗೆ ಹೇಗೋ ವರಾಹ ಹಿರಣ್ಯಾಕ್ಷನನ್ನು ಯುದ್ಧದಲ್ಲಿ ಸೋಲಿಸಿದ. ಕ್ಷತ್ರಿಯ ರಾಜರು ಆದಿನಾರಾಯಣನನ್ನು ಗೇಲಿ ಮಾಡುತ್ತ 'ವರಾಹ.. ವರಾಹ' ಎಂದು ಹೆಸರಿಟ್ಟು ಕರೆದರು. (Mahatma Jotirao Phule, Slavery; translated by P. G. Patil, pub. by Govt. of Maharashtra, Volume-I, p.8.9,1991).

### ನರಸಿಂಹ (ಅರ್ಧಮನುಷ್ಯ-ಅರ್ಧಸಿಂಹ)

ಹಿರಣ್ಯಕಶಿಪು ಬ್ರಹ್ಮನಿಂದ ಒಂದು ವರ ಪಡೆದಿರುತ್ತಾನೆ. ಅದರ ಪ್ರಕಾರ ಅವನಿಗೆ ಯಾವ ಮನುಷ್ಯ, ಪ್ರಾಣಿಯಿಂದಲೂ ಮತ್ತು ಭೂಮಿ-ಆಕಾಶದಲ್ಲೂ ಸಾವಿಲ್ಲ. ಅದರಿಂದ ವಿಷ್ಣು ನರಸಿಂಹನ ಅವತಾರ ಎತ್ತಿ ಹಿರಣ್ಯಕಶಿಪುನನ್ನು ಸಂಹರಿಸುತ್ತಾನೆ. ಅದಕ್ಕೆ ಅವನ ಮಗನಾದ ಪ್ರಹ್ಲಾದನಿಂದಲೇ ಸಹಾಯ ಪಡೆದುಕೊಳ್ಳುತ್ತಾನೆ. ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಇಬ್ಬರೂ ನಿರಂತರ ವಿಜಯಗಳ ಅವಳಿ ಸಹೋದರರು ಮತ್ತು ಬಹಳ ಪ್ರಖ್ಯಾತ ಅಸುರ ರಾಜರು. ಮೇಲಿನ ನಾಲ್ಕು ಘಟನೆಗಳು ನಡೆಯುವುದು ಸತ್ಯಯುಗದಲ್ಲಿ ಎಂಬುದಾಗಿ ಪುರಾಣಗಳಲ್ಲಿ ದಾಖಲಾಗಿದೆ. ಅದೇ ಹಿಂದೂ ಪುರಾಣಗಳ ಪ್ರಕಾರ ನಾಲ್ಕೂ ಯುಗಗಳ ಒಟ್ಟು ಆಯುಷ್ಯ ಕೇವಲ 26 ಸಾವಿರ ಚಿಲ್ಲರೆ ವರ್ಷಗಳು. ಮೀನು ಮತ್ತು ಆಮೆಗಳು ಭೂಮಿಯ ಮೇಲೆ ಕಾಣಿಸಿಕೊಂಡಿದ್ದು 400 ದಶಲಕ್ಷ ಮತ್ತು 220 ದಶಲಕ್ಷ ವರ್ಷಗಳ ಆಸುಪಾಸು. ಇನ್ನು ಹಂದಿ ಕಾಣಿಸಿಕೊಂಡಿದ್ದು ಕೂಡ ಕೆಲವು ನೂರು ಕೋಟಿ ವರ್ಷಗಳ ಹಿಂದೆ. ಇವೆಲ್ಲ ಸತ್ಯಯುಗದಲ್ಲಿ ಹೇಗೆ ಅವತಾರ ಎತ್ತಿದವು? ಇರಲಿ ಇದೆಲ್ಲ ಪುರಾಣ ತಾನೇ!

ಹಿರಣ್ಯಕಶಿಪುನನ್ನು ಕೊಲ್ಲದಿದ್ದರೆ ಆತನ ರಾಜ್ಯವನ್ನು ಪಡೆಯಲು ಸಾಧ್ಯವಿಲ್ಲವೆಂದು ತಿಳಿದ ಆರ್ಯರು ಒಂದು ಉಪಾಯ ಹೂಡಿದರು. ಮೊದಲಿಗೆ ಆತನ ಮಗ ಪ್ರಹ್ಲಾದನ

ಮನಸ್ಸನ್ನು ಒಬ್ಬ ಬ್ರಾಹ್ಮಣ ಬೋಧಕನಿಂದ ವಿಷಮಗೊಳಿಸಲಾಯಿತು. ಅಂದರೆ ಅವರ ಮನೆಯ ದೇವರನ್ನು ನೆನೆಯುವುದನ್ನು ಬಿಟ್ಟು ಪ್ರಹ್ಲಾದನಿಗೆ 'ನಾರಾಯಣ ನಾರಾಯಣ' ಎನ್ನುವುದನ್ನು ಕಲಿಸಲಾಯಿತು. ಪ್ರಹ್ಲಾದನ ಮೂಲಕ ಮೊದಲಿಗೆ ಆತನ ತಂದೆಯ ಕೊಲೆ ಮಾಡುವ ಸಂಚು ಮಾಡಲಾಗುತ್ತದೆ. ಆದರೆ ಪ್ರಹ್ಲಾದ ಅದಕ್ಕೆ ಒಪ್ಪುವುದಿಲ್ಲ. ಆಗ ನರಸಿಂಹನೇ ಅರ್ಧ ಮನುಷ್ಯ-ಅರ್ಧ ಸಿಂಹದಂತೆ ವೇಷ ಬದಲಿಸಿ ಕೊಂಡು ಬಾಯಿ, ಕೈಗಳಿಗೆ ಸಿಂಹದ ಕೋರೆಹಲ್ಲು ಉಗುರುಗಳನ್ನು ಸಿಕ್ಕಿಸಿಕೊಂಡು ಹಸಿರು ಸೀರೆ ಉಟ್ಟುಕೊಂಡು ಸಂಪೂರ್ಣವಾಗಿ ತನ್ನ ರೂಪವನ್ನು ಬದಲಿಸಿ ಕೊಳ್ಳುತ್ತಾನೆ. ಅರಮನೆ ಉಸ್ತುವಾರಿಗಳ ಸಹಾಯದಿಂದಲೆ ಅರಮನೆ ಒಳಗೆ ಪ್ರವೇಶಿಸಿ ಕಂಭಗಳ ಹಿಂದೆ ಮರೆಯಲ್ಲಿ ನಿಂತು ಹಿರಣ್ಯಕಶಿಪು ಬರುವುದನ್ನೇ ಕಾಯುತ್ತಾ ನಿಲ್ಲುತ್ತಾನೆ.

ಹಿರಣ್ಯಕಶಿಪು ದಿನವೆಲ್ಲ ಅರಮನೆಯಲ್ಲಿ ಕೆಲಸ ಮಾಡಿ ಆಯಾಸಗೊಂಡು ತನ್ನ ಕೋಣೆಗೆ ಬಂದು ವಿಶ್ರಾಂತಿ ಪಡೆಯುತ್ತಿರುತ್ತಾನೆ. ಆಗ ಕತ್ತಲಲ್ಲಿ ದಿಢೀರನೆ ಪ್ರತ್ಯಕ್ಷನಾದ ನರಸಿಂಹ, ಸಿಂಹದ ಉಗುರುಗಳಿಂದ ಹಿರಣ್ಯಕಶಿಪುವಿನ ಹೊಟ್ಟೆ ಬಗಿದು ಸಾಯಿಸಿ ಕತ್ತಲಲ್ಲಿ ತನ್ನ ಅನುಯಾಯಿಗಳ ಜೊತೆಗೆ ತನ್ನ ರಾಜ್ಯದ ಪರ್ವತಗಳ ಕಡೆಗೆ ಓಡಿಹೋಗಿ ತಲೆ ಮರೆಸಿಕೊಳ್ಳುತ್ತಾನೆ. ನರಸಿಂಹನ ಈ ಮೋಸ ಮತ್ತು ವಿಶ್ವಾಸಘಾತಕ ಕೊಲೆಯಿಂದ ವಿಚಲಿತರಾದ ಕ್ಷತ್ರಿಯರು ಅಂದಿನಿಂದ ದ್ವಿಜರನ್ನು ವಿಪ್ರರು ಎಂದು ಕರೆಯುತ್ತಾರೆ. ಜೊತೆಗೆ ನರಸಿಂಹನಿಗೆ 'ನರ-ಸಿಂಹ' ಎನ್ನುವ ಬಿರುದನ್ನೂ ನೀಡುತ್ತಾರೆ. ಒಂದು ಕಂಭದ ಒಳಗಿಂದ ಒಂದು ಪ್ರಾಣಿಯಾಗಲಿ, ಒಬ್ಬ ಮನುಷ್ಯನಾಗಲಿ ಹುಟ್ಟಿ ಬರಲು ಹೇಗೆ ಸಾಧ್ಯ? ಇದೂ ಪುರಾಣ ಕತೆ ತಾನೇ. ಅಂತೂ ಹಿರಣ್ಯಕಶಿಪುನನ್ನು ಮೋಸ ಮಾಡಿ ಕೊಂದು, ಇಂತಹ ಒಂದು ಕಟ್ಟುಕತೆಯನ್ನು ಸೃಷ್ಟಿಸಲಾಯಿತು. ಆದರೂ ಹಿರಣ್ಯಕಶಿಪುವಿನ ರಾಜ್ಯವನ್ನು ಆರ್ಯರು ವಶಪಡಿಸಿಕೊಳ್ಳಲು ಆಗಲಿಲ್ಲ ಎಂದು ಪುರಾಣಗಳಿಂದ ತಿಳಿದುಬರುತ್ತದೆ. ಪ್ರಹ್ಲಾದನ ನಂತರ ಆತನ ಮಗ ವಿರೋಚನನೂ ರಾಜ್ಯವನ್ನು ಸುಭಿಕ್ಷವಾಗಿ ಆಳುತ್ತಾನೆ. ವಿರೋಚನನ ನಂತರ ಅತ್ಯಂತ ಪ್ರಭಾವಶಾಲಿ ರಾಜನಾದ ಬಲಿ ಚಕ್ರವರ್ತಿ ಬರುತ್ತಾನೆ.

## ವಾಮನ ಅವತಾರ

ಬಲಿ ಚಕ್ರವರ್ತಿ ಹಿರಣ್ಯಕಶಿಪುವಿನ ನಾಲ್ಕನೇ ವಂಶಸ್ಥ. ಭಕ್ತಿ ಮತ್ತು ಪ್ರಾಯಶ್ಚಿತ್ತತೆಯಿಂದ ಇಂದ್ರನನ್ನೇ ಸೋಲಿಸಿ ಮೂರು ಲೋಕಗಳನ್ನು ಗೆದ್ದುಕೊಂಡವನು ಬಲಿ ಚಕ್ರವರ್ತಿ. ಒಬ್ಬ ಶೂದ್ರ ರಾಜನ ಬಗ್ಗೆ ಆರ್ಯರು ರಚಿಸಿದ ಪುರಾಣಗಳಲ್ಲಿ ಹೀಗೆ ದಾಖಲಾಗಿದೆ ಎಂದರೆ ಅವನೊಬ್ಬ ಮಹಾನ್ ರಾಜನೇ ಇರಬೇಕು. ಇದನ್ನು ಸಹಿಸಿಕೊಳ್ಳದ ಆರ್ಯರು ಯಥಾಪ್ರಕಾರ ವಿಷ್ಣುವಿನ ಮೊರೆಹೋದರು. ಆಗ ವಿಷ್ಣು ಒಬ್ಬ ಕುಬ್ಜ ಬ್ರಾಹ್ಮಣನಾಗಿ ಭೂಮಿಗೆ ಇಳಿದು ಬಂದು ಬಲಿ ಚಕ್ರವರ್ತಿಯನ್ನು ಮೂರು ಗಜ (ತುಂಡು) ನೆಲವನ್ನು ಕೇಳುತ್ತಾನೆ. ಬಲಿ ಚಕ್ರವರ್ತಿ ಕೊಡುತ್ತೇನೆ ಎಂದು ಮಾತು ಕೊಟ್ಟುಬಿಡುತ್ತಾನೆ. ಮೋಸದ ರೂಪದಲ್ಲಿ ಬಂದಿದ್ದ ಕುಬ್ಜ ವಾಮನ ವಿಷ್ಣು, ಭೂಮಿ-ಆಕಾಶಕ್ಕೆ ದೈತ್ಯಾಕಾರನಾಗಿ ಬೆಳೆದುನಿಂತು ಒಂದು ಹೆಜ್ಜೆಯನ್ನು ಭೂಮಿಯ ಮೇಲೆ ಇಟ್ಟು, ಇನ್ನೊಂದು ಹೆಜ್ಜೆಯನ್ನು ಆಕಾಶದಲ್ಲಿಟ್ಟು ಉಳಿದ ಮೂರನೆ ಹೆಜ್ಜೆಯನ್ನು

ಎಲ್ಲಿಡಲಿ ಎಂದು ಬಲಿ ಚಕ್ರವರ್ತಿಯನ್ನು ಕೇಳುತ್ತಾನೆ. ಬಲಿ ಚಕ್ರವರ್ತಿ ವಿಧಿಯಿಲ್ಲದೆ ತನ್ನ ತಲೆ ತೋರಿಸಿದ; ವಾಮನ, ಬಲಿ ಚಕ್ರವರ್ತಿ ತಲೆ ಮೇಲೆ ಮೂರನೆ ಹೆಜ್ಜೆ ಇಟ್ಟು ಭೂಮಿಗೆ ಒತ್ತಿಬಿಡುತ್ತಾನೆ. ಅನಂತರ ಬಲಿ ಚಕ್ರವರ್ತಿಯ ವಿಧೇಯತೆಯನ್ನು ಮೆಚ್ಚಿಕೊಂಡ ವಿಷ್ಣು ಬಲಿ ಚಕ್ರವರ್ತಿಗೆ ಅಮರತ್ವ ನೀಡಿ ಪಾತಾಳಕ್ಕೆ ಅಧಿಪತಿಯಾಗಿ ಮಾಡುತ್ತಾನೆ. ಈ ಕತೆಯಲ್ಲಿ ಆರ್ಯರು ಅಸುರ ರಾಜನನ್ನು ಮೋಸದಿಂದ ಅಂತ್ಯಗೊಳಿಸಿಬಿಡುತ್ತಾರೆ. ಆದರೂ ಅಸುರರ ನಾಗರಿಕತೆಗಳನ್ನು ಸಂಪೂರ್ಣವಾಗಿ ಮುಗಿಸಲಾರದ ಆರ್ಯರು ಒಂದ್ಹೆಜ್ಜೆ ಮುಂದೆ ಹೋಗಿ ಅವರ ಗುರಿಯನ್ನು ಮಾತ್ರ ಸಾಧಿಸಿಕೊಂಡಿರುತ್ತಾರೆ. (Mahatma Jotirao Phule, Slavery; translated by P. G. Patil, pub. by Govt. of Maharashtra, Volume-I, p.XXX,1991).

ಆರ್ಯರು, ಅನೇಕ ಅಸುರ ರಾಜರನ್ನು ಚಾಕಚಕ್ಯತೆಯಿಂದ ಮುಗಿಸಿರುವ ಅನೇಕ ಘಟನೆಗಳನ್ನು ಶೂದ್ರರು ಆಚರಿಸುವ ಹಬ್ಬಗಳು/ಪದ್ಧತಿಗಳ ಮೂಲಕ ಉಳಿಸಿ ಕೊಂಡಿರುವುದನ್ನು ನಾವು ಅನೇಕ ರೀತಿಯಲ್ಲಿ ನೋಡಬಹುದು. ಅಂತಹ ಒಂದು ಉದಾಹರಣೆಯನ್ನು ಈಗಲೂ ನಾವು ಕೇರಳದಲ್ಲಿ ನೋಡಬಹುದು. ಶೂದ್ರರ ಮಹಾರಾಜ ಬಲಿ ಚಕ್ರವರ್ತಿಯ ಕಾಲದಲ್ಲಿ ಶೂದ್ರ ಜನಾಂಗಗಳು ಪ್ರೀತಿ ಗೌರವದಿಂದ ಬದುಕು ಸಾಗಿಸುತ್ತಿದ್ದು, ಬ್ರಾಹ್ಮಣರು ತಮ್ಮ ನೆಲೆಯನ್ನು ಕಳೆದುಕೊಂಡಿದ್ದರು. ದಸರಾ ಹಬ್ಬದ ದಿನ ಶೂದ್ರ ಪುರುಷರು ಬೆಳಿಗ್ಗೆ ಎದ್ದು ಹೋಗಿ ಶಮಿ ಮರಕ್ಕೆ ಪೂಜೆ ಸಲ್ಲಿಸಿ ಅದರ ಎಲೆಗಳನ್ನು ತಂದು ಪತ್ನಿ, ಅಕ್ಕತಂಗಿ, ಅಣ್ಣತಮ್ಮ ಮತ್ತು ಬಂಧು-ಬಾಂಧವರಿಗೆ ಹಂಚುತ್ತಾರೆ. ಆ ಮರದ ಎಲೆಗಳು ಚಿನ್ನಕ್ಕೆ ಸಮಾನ ಮತ್ತು ಪವಿತ್ರ ಎಂದು ಭಾವಿಸಲಾಗಿದೆ. ಅದೇ ಸಮಯದಲ್ಲಿ ಬಲಿ ಚಕ್ರವರ್ತಿಯನ್ನು ತಮ್ಮ ಮನೆಗಳಿಗೆ ಆಹ್ವಾನಿಸುತ್ತಾರೆ. ಅಂದರೆ ತಮ್ಮ ರಾಜ ಬಲಿ ಚಕ್ರವರ್ತಿಯ ಆಳ್ವಿಕೆಯನ್ನು ಆಹ್ವಾನಿಸುವುದರ ಜೊತೆಗೆ ತಮ್ಮ ತೊಂದರೆಗಳೆಲ್ಲ ಹೋಗಲಿ ಎಂದು ಬೇಡಿಕೊಳ್ಳುತ್ತಾರೆ. ದೀಪಾವಳಿಯ ದಿನವೂ ಕೂಡ ಹೊಲ ಗದ್ದೆಗಳಿಗೆ ಹೋಗಿ ಬಲಿ ಚಕ್ರವರ್ತಿಗೆ ಪೂಜೆ ಸಲ್ಲಿಸಿ ಪ್ರಾರ್ಥನೆ ಮಾಡುತ್ತಾರೆ.

ದಸರಾ ಹಬ್ಬದ ದಿನ ಅದಕ್ಕೆ ವಿರುದ್ಧವೆಂಬಂತೆ ಬ್ರಾಹ್ಮಣರು ಶಮಿ ಮರದ ಹತ್ತಿರಕ್ಕೆ ಹೋಗಿ ಮರದ ರೆಂಬೆಗಳನ್ನು ಮುರಿದುಕೊಂಡು ಬರುತ್ತಾರೆ. ಬಂದವರು ತಮ್ಮ ಪತ್ನಿ, ಅಕ್ಕತಂಗಿಯರು ಕೂಡಿ ಗೋಧಿ ಅಥವಾ ಇತರೆ ಹಿಟ್ಟಿನಲ್ಲಿ ಮಾಡಿದ ಬಲಿ ಚಕ್ರವರ್ತಿ ಮೂರ್ತಿಯ ಹೊಟ್ಟೆಯನ್ನು ಸಣ್ಣ ರೆಂಬೆಗಳಲ್ಲಿ ಕೆರೆದು ಕೆರೆದು ತೂತು ಮಾಡಿ ಎಲ್ಲರಿಗೂ ಹಂಚುತ್ತಾರೆ. ಬಹುಶಃ ಶೂದ್ರ ರಾಜನ ಸಂಪತ್ತನ್ನು ತಮ್ಮಲ್ಲೇ ಹಂಚಿಕೊಳ್ಳುವ ಪರಿಪಾಠ ಇದಾಗಿರಬೇಕು? ಇದು ಕೂಡ ಶೂದ್ರ ಮತ್ತು ಬ್ರಾಹ್ಮಣರ ನಡುವಿನ ಸಂಘರ್ಷಣೆಯನ್ನು ಎತ್ತಿ ತೋರಿಸುವ ಒಂದು ಪದ್ಧತಿಯಾಗಿರಬೇಕು? (Mahatma Jotirao Phule, Slavery; translated by P. G. Patil, pub. by Govt. of Maharashtra, Volume-I, p.XXX,1991).

## ಪರಶುರಾಮನ ಅವತಾರ

ಜಮದಗ್ನಿ ಋಷಿ ಮತ್ತು ರೇಣುಕಾ (ದಲಿತ ಮಹಿಳೆ ಯಲ್ಲಮ್ಮ) ಮಗನಾದ ಪರಶುರಾಮ ಶಿವನ ತಪಸ್ಸಿನಿಂದ ಒಂದು ಕೊಡಲಿ ಪಡೆದಿರುತ್ತಾನೆ. ಜಮದಗ್ನಿ ಹಿಂದೂ

ಧರ್ಮದಲ್ಲಿ ಬರುವ ಮೊದಲ ಬ್ರಾಹ್ಮಣ-ಕ್ಷತ್ರಿಯ. ಪ್ರಖ್ಯಾತ ಅಸುರ ರಾಜ ಕಾರ್ತವೀರ್ಯ ಅರ್ಜುನ ತನ್ನ ಸೈನಿಕರೊಂದಿಗೆ ಜಮದಗ್ನಿ ಆಶ್ರಮಕ್ಕೆ ಭೇಟಿ ನೀಡುತ್ತಾನೆ. ಋಷಿ, ಕಾಮಧೇನು ಹಸು ಮಾಂಸದ ಔತಣ ನೀಡುತ್ತಾನೆ. ರಾಜ ಕಾಮಧೇನುವನ್ನು ಕೊಡುವಂತೆ ವಿನಂತಿಸಿಕೊಂಡಾಗ ಋಷಿ ನಿರಾಕರಿಸುತ್ತಾನೆ. ಆಗ ರಾಜ, ಆಶ್ರಮವನ್ನು ಧ್ವಂಸಮಾಡಿ ಕಾಮಧೇನು ಹಸುವನ್ನು ಬಲವಂತದಿಂದ ಹಿಡಿದುಕೊಂಡು ಹೊರಟುಹೋಗುತ್ತಾನೆ. ಪರಶುರಾಮ ಅರಮನೆಗೆ ಬಂದು ಕಾರ್ತವೀರ್ಯ ಅರ್ಜುನ ಮತ್ತು ಆತನ ಯೋಧರನ್ನು ಸಾಯಿಸುತ್ತಾನೆ. ಕಾರ್ತವೀರ್ಯ ಅರ್ಜುನನ ಮಕ್ಕಳು ಪ್ರತಿಯಾಗಿ ಜಮದಗ್ನಿಯನ್ನು ಸಾಯಿಸುತ್ತಾರೆ. ಪರಶುರಾಮ ಭೂಮಿಯ ಮೇಲಿರುವ ಪ್ರತಿಯೊಬ್ಬ ಕ್ಷತ್ರಿಯನನ್ನೂ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿ 21 ಸಲ ಕ್ಷತ್ರಿಯರ ಮೇಲೆ ದಂಡೆತ್ತಿ ಬಂದು ಯುದ್ಧ ಮಾಡಿ ಭೂಮಿಯ ಮೇಲಿನ 5 ಸರೋವರಗಳ ತುಂಬ ರಕ್ತ ಹರಿಸುತ್ತಾನಂತೆ. ಇದು ನಡೆದಿದ್ದರೆ ಅಸುರರ ಮೇಲೆ ಆರ್ಯರು ನಡೆಸಿರುವ ಘೋರ ಅನ್ಯಾಯವಾಗಿರಬೇಕು? ಇಷ್ಟಕ್ಕೂ ಬ್ರಾಹ್ಮಣರು ಕ್ಷತ್ರಿಯರ ಮೇಲೆ ಯುದ್ಧ ಮಾಡಿ ಗೆಲ್ಲಲು ಸಾಧ್ಯವಿತ್ತೇ? ಅಂದಿನಿಂದ ಇಂದಿನವರೆಗೂ ಕೇವಲ 5ರಷ್ಟು ಜನಸಂಖ್ಯೆಯ ಇವರು 95ರಷ್ಟು ಜನಸಂಖ್ಯೆಯುಳ್ಳ ಜನರನ್ನು ಯುದ್ಧಗಳಲ್ಲಿ ಸಾಯಿಸಲು ಸಾಧ್ಯವಿತ್ತೇ? ಇದೊಂದು ಕುಟಿಲ/ಕಟ್ಟುಕತೆ ಇರಲೇಬೇಕು? ಅಥವಾ ಅಸುರರ ಮನೋಸ್ಥಿತಿಯನ್ನು ನಾಶಮಾಡಲು ಸೃಷ್ಟಿಸಿದ ಕತೆ ಇದಾಗಿರಬೇಕು? ಆರ್ಯರು ಮೋಸ, ವಂಚನೆಗಳಿಂದ ಅಸುರರನ್ನು ಗೆದ್ದು, ಅವರ ನಡುವೆ ಭಿನ್ನಾಭಿಪ್ರಾಯಗಳನ್ನು, ಜಿತ್ತಿ ಜಾತಿ, ಅಸ್ಪೃಶ್ಯತೆಗಳನ್ನು ಸೃಷ್ಟಿಸಿ ಅವರವರೇ ಹೊಡೆದಾಡಿಕೊಳ್ಳುವಂತೆ ಮಾಡಲಾಯಿತು. ಮಹಾಭಾರತದ ಕೊನೆಯಲ್ಲಿ ಯಾದವರು ತಾವೇ ಹೊಡೆದಾಡಿಕೊಂಡು ಸತ್ತ ಪ್ರಕರಣವೇ ಇದಕ್ಕೆ ಸಾಕ್ಷಿ. ಚರಿತ್ರೆಯ ಬಹುತೇಕ ಪ್ರಸಂಗಗಳು ಹೀಗೆಯೇ ನಡೆದವು. ಇಂತಹ ಕತೆಗಳನ್ನು ಪ್ರಚಾರ ಮಾಡಲು ನಾರದನಂತಹ (ಸೃಷ್ಟಿಸಿದ ಪಾತ್ರ?) ಮುನಿಗಳು ತ್ರಿಲೋಕಗಳಲ್ಲಿ ಸಂಚಾರ ಮಾಡುತ್ತ ರಾಜರ ನಡುವೆಯೇ ಅಲ್ಲ, ಪತಿ ಪತ್ನಿಯರ ನಡುವೆಯೂ ಜಗಳಗಳನ್ನು ತಂದಿಡುತ್ತಿದ್ದರು.

## ಶ್ರೀರಾಮನ ಅವತಾರ

ರಾಮನ ಅವತಾರದ ಬಗ್ಗೆ ಹೇಳುವುದೇ ಬೇಡ. ಭಾರತವೇ ಅಲ್ಲ ನೆರೆಹೊರೆಯ ದೇಶಗಳಲ್ಲೂ ರಾಮನು ಪ್ರಖ್ಯಾತಿ ಪಡೆದಿದ್ದಾನೆ. ತಪಸ್ಸಿಗೆ ಕುಳಿತ ಶಂಬೂಕನನ್ನು ಸಾಯಿಸಿದ್ದು, ಮರೆಯಲ್ಲಿ ನಿಂತು ಮೋಸದಿಂದ ಬಾಣ ಹೊಡೆದು ವಾಲಿಯನ್ನು ಸಾಯಿಸಿದ್ದು, ಯುದ್ಧ ನಿಯಮಗಳನ್ನು ಮೀರಿ ರಾವಣನನ್ನು ಸಾಯಿಸಿದ್ದು, ತನ್ನ ಗರ್ಭಿಣಿ ಪತ್ನಿಯನ್ನೇ ಕಾಡಿಗೆ ಅಟ್ಟಿದ್ದು, ಲಂಕೆಯಿಂದ ಸೀತೆ ಹಿಂದಿರುಗಿದಾಗ ಅಗ್ನಿಪರೀಕ್ಷೆ ಮಾಡಿದ್ದು; ಆತ ಮಾಡಿದ ಪಾಪ ಕಾರ್ಯಗಳು ಒಂದೇ ಎರಡೇ? ಇಂತಹ ರಾಮನನ್ನು ಪುರಾಣಗಳಲ್ಲಿ ಒಂದೇ ಮಾತು, ಒಂದೇ ಬಾಣ, ಒಬ್ಬಳೇ ಪತ್ನಿ ಎಂದು ಕೊಂಡಾಡಲಾಗಿದೆ. ಆದರೆ ಈತನಿಗೆ ಅನೇಕ ಪಟ್ಟದ ರಾಣಿಯರು, ಉಪಪತ್ನಿಯರು ಇದ್ದರು ಎನ್ನುವುದನ್ನು ಮರೆಮಾಚಲಾಗಿದೆ. ಇಂತಹ ರಾಮಾಯಣವನ್ನು ಶೂದ್ರನಾದ

ವಾಲ್ಮೀಕಿ ಅದೇಕೆ ಬರೆದ ಎನ್ನುವ ಆಶ್ಚರ್ಯ ನನ್ನನ್ನು ಯಾವಾಗಲೂ ಕಾಡುತ್ತಲೇ ಇರುತ್ತದೆ. ಒಬ್ಬ ಮನುಷ್ಯ ತನ್ನದೇ ಜನಾಂಗವನ್ನು ಹೀಯಾಳಿಸುವ, ಕೊಲ್ಲುವ ಒಂದು ಪಾತ್ರವನ್ನು ಅಷ್ಟೊಂದು ಶ್ರದ್ಧೆಯಿಂದ ನೆಚ್ಚಿಕೊಂಡು ಬರೆಯಲು ಹೇಗೆ ಸಾಧ್ಯವಾಯಿತು? ಅಥವಾ ನಿಜವಾಗಿ ವಾಲ್ಮೀಕಿ ಬರೆದ ರಾಮಾಯಣ ಬೇರೆಯೇ ಇರಬೇಕು? ಅದಕ್ಕಾಗಿಯೇ ಈಚೆಗೆ ಕೆಲವರು ವಾಲ್ಮೀಕಿಯನ್ನು ಬ್ರಾಹ್ಮಣನನ್ನಾಗಿಸಲು ಹೊರಟಿದ್ದಾರೆ!

## ಶ್ರೀಕೃಷ್ಣನ ಅವತಾರ

ಮಹಾಭಾರತವೂ ರಾಮಾಯಣದಷ್ಟೇ ಖ್ಯಾತಿ ಪಡೆದ ಪುರಾಣ. ನಮ್ಮ ನ್ಯಾಯಾಲಯಗಳಲ್ಲಿ ಪ್ರತಿಯೊಂದಕ್ಕೂ ಭಗವದ್ಗೀತೆಯನ್ನು ಜನರ ಕೈಯಲ್ಲಿಟ್ಟು 'ನಾನು ಹೇಳುವುದೆಲ್ಲ ಸತ್ಯ. ಸತ್ಯವನ್ನು ಬಿಟ್ಟು ಏನನ್ನೂ ಹೇಳುವುದಿಲ್ಲ' ಎಂದು ಶಪಥ ಮಾಡಿಸುತ್ತಾರೆ. ಆದರೆ ಅದರಲ್ಲಿ ಇರುವುದೆಲ್ಲ ಸತ್ಯವೆ? ಇನ್ನು ಜನರು ಸತ್ಯ ಹೇಳುವುದಾದರೂ ಏನನ್ನ? ಕೃಷ್ಣ ಕಪಟದಾರಿ, ಮೋಸಗಾರನಾಗಿ ಎಲ್ಲಾ ಚಾಲಾಕಿತನವನ್ನೂ ಉಪಯೋಗಿಸಿ ಆರ್ಯ ಪಾಂಡವರನ್ನು ಗೆಲ್ಲಿಸುತ್ತಾನೆ. ಆದರೆ ಕೊನೆಗೆ ಪಾಂಡವರು, ಕೌರವರು ಯಾರೂ ಉಳಿಯುವುದಿಲ್ಲ. ಪಾಂಡವರು ಸ್ವರ್ಗ ತಲುಪುವುದಕ್ಕೆ ಮುಂಚೆಯೇ ಕೃಷ್ಣನಿಂದ ಮೋಸಕ್ಕೆ ಒಳಗಾದ ಕೌರವರು ಸ್ವರ್ಗದಲ್ಲಿ ಕುಳಿತಿರುತ್ತಾರೆ. ಆರ್ಯರಿಗೆ ಸಹಾಯ ಮಾಡಿದ ಕೃಷ್ಣನ ವಂಶ ಸಂಪೂರ್ಣವಾಗಿ ನಾಶ ಹೊಂದುತ್ತದೆ. ಈ ಪ್ರಪಂಚದಲ್ಲಿ ಯಾವುದೂ ಶಾಶ್ವತವಲ್ಲ. ಎಷ್ಟೋ ಮಹಾತ್ಮರು ಬಂದುಹೋದರು. ಆದರೆ ಮನುಷ್ಯ–ಮನುಷ್ಯ ಅನ್ಯೋನ್ಯವಾಗಿ ಬಾಳುವುದನ್ನು ಇದುವರೆಗೂ ಕಲಿತುಕೊಳ್ಳಲಿಲ್ಲ. ಇದನ್ನೆಲ್ಲ ಮೀರಿ ಹೇಳುವುದಾದರೆ ಮಹಾಭಾರತ ದಂತಹ ಒಂದು ಕಥೆ ಪ್ರಪಂಚದಲ್ಲಿ ಇನ್ನಾವುದೂ ಇಲ್ಲ. ಕೃಷ್ಣ ಬಹುಶಃ ಮನುಷ್ಯನ ಇತಿಹಾಸದಲ್ಲಿ ಬರುವ ಒಂದು ಪರಿಪೂರ್ಣ ಪಾತ್ರ. ಕೊನೆಗೆ ಅವನ ಸಾವು ಕೂಡ ಸಾಧಾರಣ ಮನುಷ್ಯನ ಸಾವೇ ಆಗಿದ್ದು ನಮ್ಮನ್ನೆಲ್ಲ ಚಕಿತಗೊಳಿಸುತ್ತದೆ. ಆದರೆ ಶ್ರೀಕೃಷ್ಣನ ಬಾಯಲ್ಲಿ ಹೇಳಿಸಿದ ಅಥವಾ ಮಹಾಭಾರತದ ಮಧ್ಯೆ ಸೇರಿಸಿದ ಭಗವದ್ಗೀತೆಯಲ್ಲಿನ ಚಾತುರ್ವರ್ಣ್ಯ, ಕರ್ಮಫಲಗಳಲ್ಲಿ ಮೋಸ ಅಡಗಿಕೊಂಡಿರುವುದು ಮಾತ್ರ ಸತ್ಯ.

## ಬುದ್ಧನ ಅವತಾರ

ಬಹುಶಃ ಬುದ್ಧನು ಭೂಮಿಯ ಮೇಲೆ ಅವತರಿಸಿದ ಮೇಲೆ ನಿಜವಾದ ಮಾನವತ್ವವುಳ್ಳ ಮನುಷ್ಯ ಅವತಾರವೊಂದು ಚರಿತ್ರೆಯಲ್ಲಿ ದೊರಕುತ್ತದೆ. ಇಲ್ಲಿಗೆ ಬಂದ ಆರ್ಯರು, ಮೂಲ ಜನಾಂಗಗಳ ಮೇಲೆ ನಡೆಸುತ್ತಿದ್ದ ಮೋಸ ವಂಚನೆಗಳೆಲ್ಲ ಬಯಲಿಗೆ ಬರುವುದರ ಜೊತೆಗೆ ಸ್ವಲ್ಪ ತಡೆ ಉಂಟಾಯಿತು. ಮನುಷ್ಯ–ಮನುಷ್ಯರ ನಡುವೆ ಮೇಲು–ಕೀಳು, ಜಾತಿ, ಅಸ್ಪೃಶ್ಯತೆ ಎನ್ನುವುದೆಲ್ಲ ಕಪಟ ಎನ್ನುವುದು ಪ್ರಪಂಚಕ್ಕೆ ಸ್ವಲ್ಪ ಸ್ವಲ್ಪವಾಗಿ ಗೋಚರಿಸುತ್ತದೆ. ಬುದ್ಧನ ತತ್ವಗಳು ಆತನ ಅನುಯಾಯಿಗಳ ಮೂಲಕ ದೇಶದಾದ್ಯಂತ ಹರಡಿಕೊಳ್ಳಲು ಪ್ರಾರಂಭವಾಗಿ ಸಾವಿರಾರು ವರ್ಷಗಳಿಂದ ಮೋಸ ಮಾಡುತ್ತಾ ಬಂದಿದ್ದ ಹಿಂದೂ ಧರ್ಮಕ್ಕೆ ಕುತ್ತು ಬಂದು ಅದರ ಅನುಯಾಯಿಗಳು

ಬೇರೆ ಏನಾದರೂ ಉಪಾಯಗಳನ್ನು ಮಾಡಬೇಕೆಂದು ಯೋಚನೆಗೆ ಒಳಗಾಗುತ್ತಾರೆ. ಆಗ ಕಾಣಿಸಿಕೊಂಡಿದ್ದೆ ಗೋಪೂಜೆ. ಇಷ್ಟಕ್ಕೂ ಗೋವುಗಳ ವಧೆ ಮಾಡಬಾರದು, ಕೊಲ್ಲಬಾರದು ಅವುಗಳಿಗೆ ಹಿಂಸೆ ಮಾಡಬಾರದು ಎನ್ನುವ ವಿಷಯವನ್ನು ಮೊದಲಿಗೆ ರೈತರ ನಡುವೆ ಪ್ರಚಾರ ಮಾಡಿದ್ದೆ ಬುದ್ಧ. ರೈತರ ನಡುವೆ ಈ ವಿಷಯ ಚರ್ಚೆಗೆ ಒಳಗಾಗಿ ವ್ಯವಸಾಯ ಮಾಡುತ್ತಿದ್ದ ಶೂದ್ರರ ನಡುವೆ ಗೋವುಗಳ ಬಗ್ಗೆ ಅನುಕಂಪ ಮೂಡುತ್ತದೆ. ಆ ಕಾಲಕ್ಕೆ ಬ್ರಾಹ್ಮಣರಿಂದ ಹಿಡಿದು ಶೂದ್ರರೂ ಬೌದ್ಧರೂ ಎಲ್ಲರೂ ಗೋಮಾಂಸವನ್ನು ತಿನ್ನುತ್ತಿದ್ದರು. ಆಗ ಇನ್ನೂ ಕ್ರೈಸ್ತ ಧರ್ಮ/ಮುಸ್ಲಿಮ್ ಧರ್ಮಗಳು ಹುಟ್ಟಿರಲೇ ಇಲ್ಲ. ಯಾವುದೇ ಮಾಂಸ ಭಕ್ಷಣೆಗೆ ಸಮಾಜದಲ್ಲಿ ಬಹಿಷ್ಕಾರ ಇರಲಿಲ್ಲ. ಇದೇ ಸರಿಯಾದ ಸಮಯವೆಂದು ಯೋಚಿಸಿದ ಬ್ರಾಹ್ಮಣರು ಗೋಪೂಜೆ ಮಾಡುವುದನ್ನು ಪ್ರಾರಂಭಿಸಿ ಸಮಾಜದಲ್ಲಿ ಸ್ವಲ್ಪ ಗೌರವ ದೊರಕಿದ್ದೆ ಗೋಮಾಂಸ ಭಕ್ಷಣೆಯನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟರು.

ಇದರಿಂದ ಸಮಾಜದಲ್ಲಿ ಕಳೆದುಕೊಂಡಿದ್ದ ವರ್ಚಸ್ಸನ್ನು ಕಾಲಾಂತರದಲ್ಲಿ ಪಡೆದುಕೊಂಡ ಬ್ರಾಹ್ಮಣರು ಎರಡು ರೀತಿಯಲ್ಲಿ ಮತ್ತೊಮ್ಮೆ ಸಮಾಜದಲ್ಲಿ ಮರುಹುಟ್ಟು ಪಡೆದುಕೊಂಡರು. ಒಂದು ಹಿಂದೂ ಸಮಾಜದ ವ್ಯವಸ್ಥೆಯಲ್ಲಿ ಅತಿ ಎತ್ತರದಲ್ಲಿ ಕುಳಿತುಕೊಂಡಿದ್ದು. ಎರಡು ಬೌದ್ಧ ಧರ್ಮದ ವಿರುದ್ಧ ಗೆಲುವು ಸಾಧಿಸಿದ್ದು. ಅನಂತರದ ದಿನಗಳಲ್ಲಿ ಬೌದ್ಧ ಭಿಕ್ಷು/ಅನುಯಾಯಿಗಳನ್ನು ಕೊಂದು ಅವರಿಗೆ ಚಿತ್ರಹಿಂಸೆ ನೀಡಿ ದೇಶದಿಂದ ಹೊರಗೋಡಿಸಿ ಬೌದ್ಧ ವಿಹಾರಗಳನ್ನು ಎಲ್ಲಾ ರೀತಿಯಲ್ಲೂ ನಾಶ ಮಾಡಲಾಯಿತು. ಅಲ್ಪ ಸ್ವಲ್ಪ ಉಳಿದುಕೊಂಡಿದ್ದ ಬೌದ್ಧ ವಿಹಾರಗಳು ಮತ್ತು ಅನುಯಾಯಿಗಳನ್ನು ಶಂಕರಾಚಾರ್ಯನ ಕಾಲದಲ್ಲಿ ಸಂಪೂರ್ಣವಾಗಿ ಮುಗಿಸಲಾಯಿತು. ಅದೂ ಸಾಲದೆಂಬಂತೆ ಆಗ್ನೇಯ ಮೂಲದಿಂದ ದಾಳಿ ಮಾಡುತ್ತ ಬಂದ ಮುಸ್ಲಿಮರು ಅಳಿದುಳಿದ ಬೌದ್ಧ ವಿಹಾರಗಳನ್ನು ನಾಶ ಮಾಡಿದರು. ಉದಾ: ಅಜಂತಾ ಮತ್ತು ಎಲ್ಲೋರಾ ಬೌದ್ಧ ವಿಹಾರಗಳು. ಎಲ್ಲೋರಾದ ಬೌದ್ಧ ವಿಹಾರದಲ್ಲಿದ್ದ ಪುಸ್ತಕ ಭಂಡಾರಕ್ಕೆ ಬೆಂಕಿ ಇಟ್ಟಾಗ ಅದು ಒಂದು ತಿಂಗಳ ಕಾಲ ಉರಿಯುತ್ತಿತ್ತಂತೆ. ಒಳಗಡೆ ಸೇರಿಕೊಂಡ ಮುಸ್ಲಿಂ ಯೋಧರು ಆರು ತಿಂಗಳ ಕಾಲ ಒಲೆಗಳಿಗೆ ಪುಸ್ತಕಗಳನ್ನಾಕಿ ಉರಿಸಿದ್ದನ್ನು ಚೀನಾ ಚರಿತ್ರೆಕಾರರು ತಮ್ಮ ಪ್ರವಾಸ ಕತೆಗಳಲ್ಲಿ ದಾಖಲಿಸಿದ್ದಾರೆ.

ಬುದ್ಧ, ವಿಷ್ಣುವಿನ ಅವತಾರವೆಂದು, ಭಾಗವತದಲ್ಲಿ ಚರಿತ್ರೆಹೀನನ್ನಾಗಿ ಮಾಡಲಾಯಿತು. ಬುದ್ಧನ ಗುಣಗಳಿಗೆ ವಿಷ್ಣುವಿನ ಗುಣಗಳನ್ನು ಹೋಲಿಸಲು ಸಾಧ್ಯವೇ ಇಲ್ಲ. ಗುಪ್ತರ ಕಾಲದಲ್ಲಿ ಕ್ರಿ. ಪೂರ್ವ 330–550ರ ನಡುವೆ ಬುದ್ಧನನ್ನು ವಿಷ್ಣುವಿನಲ್ಲಿ ಸಮೀಕರಿಸಲಾಯಿತು. ಕ್ರಿ. ಶ. 8ನೇ ಶತಮಾನದ ಹೊತ್ತಿಗೆ ಹಲವು ಪುರಾಣಗಳಲ್ಲಿ ಬುದ್ಧನನ್ನು ವಿಷ್ಣು ಅವತಾರವೆಂದು ಪ್ರಚಾರ ಮಾಡಲಾಯಿತು. ಹಿಂದೂ ಧರ್ಮ ಬುದ್ಧನನ್ನು ಮುಗಿಸಲಾರದ ಕಾರಣದಿಂದ ಬುದ್ಧನನ್ನೇ ತಮ್ಮ ಧರ್ಮದಲ್ಲಿ ಲೀನವಾಗಿಸಿಕೊಂಡಿತು. ಇನ್ನೂ ಮುಂದೆಹೋದ ಹಿಂದೂಗಳು ಬೌದ್ಧ ಧರ್ಮದಲ್ಲಿ ವಿಷ್ಣುವನ್ನು ಸೇರಿಸಿಬಿಟ್ಟರು. ಮಹಾಯಾನ ಬೌದ್ಧ ಧರ್ಮವನ್ನು ಬುದ್ಧ–ಭಾಗವತ ಎಂದು ಕರೆಯಲಾಯಿತು. ಈ ಹೊತ್ತಿಗೆ ದಶಾವತಾರ ಕಲ್ಪನೆ ಪೂರ್ಣವಾಗಿ ಬೆಳೆದು

ನಿಂತಿತ್ತು. ಕೆಲವು ವೈಷ್ಣವರು ಬುದ್ಧನನ್ನು ವಿಷ್ಣು ಅವತಾರ ಎನ್ನುವುದನ್ನು ಒಪ್ಪಿಕೊಳ್ಳಲಿಲ್ಲ. ಒಟ್ಟಿನಲ್ಲಿ ದ್ರಾವಿಡ ಮೂಲದ ಶಿವನನ್ನು ಹಿಂದೂಗಳು ಹಿಂದೂ ಧರ್ಮದಲ್ಲಿ ಅರಗಿಸಿಕೊಂಡಂತೆ ಬುದ್ಧನನ್ನೂ ಬಿಡಲಿಲ್ಲ. ಆದರೆ ಭಾರತದ ಸುತ್ತಮುತ್ತಲಿನ ದೇಶಗಳು ಮತ್ತು ಇತರ ಅನೇಕ ದೇಶಗಳಲ್ಲಿ ಬೌದ್ಧ ಧರ್ಮ, ಹಿಂದೂ ಧರ್ಮದ ರಾಡಿಯನ್ನು ಮೆತ್ತಿಸಿಕೊಳ್ಳದೆ ಇನ್ನೂ ಸ್ವಚ್ಛವಾಗಿಯೇ ಉಸಿರಾಡುತ್ತಿದೆ. ಹಿಂದೂ ಧರ್ಮ ಸೃಷ್ಟಿಸಿರುವ ನೂರಾರು ಜಾತಿಗಳು ಮತ್ತು ಅಸ್ಪೃಶ್ಯತೆಯೆಂಬ ಕಳಂಕವನ್ನು ತೊರೆಯುವತನಕ ಇದಕ್ಕೆ ಯಾವ ಬೆಲೆಯೂ ಇರುವುದಿಲ್ಲ. 'ಕನಿಷ್ಠಪಕ್ಷ ಹಿಂದೂ ಧರ್ಮ ಅಸ್ಪೃಶ್ಯತೆಯೆಂಬ ಕಳಂಕವನ್ನಾದರೂ ನೀಗಿಸಿಕೊಳ್ಳಬೇಕಿದೆ' ಎಂಬುದನ್ನು ಮಹಾತ್ಮ ಗಾಂಧೀಜಿ ಅವರೇ ಒತ್ತಿ ಹೇಳಿದ್ದಾರೆ.

* * *

ಆರ್ಯರು ರಾಜ್ಯ, ಅಧಿಕಾರ ಮತ್ತು ಪುರೋಹಿತಶಾಹಿ ವಿಧಿಗಳ ಮೂಲಕ ಸ್ಥಳೀಯ ಜಲಸಂಸ್ಕೃತಿಯ ಗುರುತುಗಳನ್ನು ನಾಶಪಡಿಸುತ್ತಾ ಬಂದ ಮೇಲೆ ಗಂಗೆ ಶಿವನ ಪತ್ನಿಯಾಗಿ (ಎರಡನೇ ಪತ್ನಿ) ಪರಾಧೀನೆಯಾಗಿದ್ದೂ, ಸ್ವತಂತ್ರ ಕ್ರಿಯಾವರ್ತನೆಗಳನ್ನು ಕಳೆದುಕೊಂಡು ಇಂದು ಒಂದು ಗ್ರಾಮದೇವತೆಯ ಸ್ಥಾನಕ್ಕೆ ಒತ್ತಲ್ಪಟ್ಟಿದ್ದಾಳೆ. ಆದರೆ ಇಂದಿಗೂ ಎಲ್ಲಾ ಶಿಷ್ಟದೇವತೆಗಳ ಪೂಜೆಗಳು ಗಂಗೆ ಪೂಜೆಯಿಂದಲೇ ಆರಂಭವಾಗುವ ಪದ್ಧತಿ ರೂಢಿಯಲ್ಲಿರುವುದು ಗಂಗೆಯ ಪಾರಮ್ಯವನ್ನು ನೆನಪಿಸುವ ಹಾಗೆ ಭಾರತದ ಸಾಂಸ್ಕೃತಿಕ ರಾಜಕಾರಣವನ್ನು ವಿವರಿಸುವ ಬಹುಮುಖ್ಯ ಪಠ್ಯವಾಗಿಯೂ ಉಳಿದಿದೆ. ಕರ್ನಾಟಕದಲ್ಲಿ ಕೆರೆ, ಜಲಾಶಯಗಳು ತುಂಬಿದಾಗ ಬಾಗಿನವಿತ್ತು ಪೂಜೆ ಮಾಡುವ ಆಚರಣೆಗಳನ್ನು ಸರ್ಕಾರವೇ ಇಂದಿಗೂ ನಡೆಸುವ ಪದ್ಧತಿಯಿದೆ. ಇನ್ನು ಜಾನಪದ ವರ್ಷಾಚರಣೆಗಳಾದ ಹೊನ್ನೇರು–ಅತ್ತೆಮನೆ ಹೊಂಗಲು – ಸುಗ್ಗಿ ಮುಂತಾದವು ಗಂಗೆಯನ್ನು ಒಲೈಸುವ ವಿಧಿಗಳೇ ಆಗಿವೆ. ಗಂಗೆ ಪೂಜೆಗೆ ಸಂಬಂಧಪಟ್ಟ 'ಬಲಿ' ಕೇಂದ್ರವಾದ ಕೆರೆಗೆ ಹಾರದಂತಹ ನೂರಾರು ಕಥನಗಳು ಜನಪದರು ನೀರನ್ನು ದೇವತೆಯಾಗಿ ಗ್ರಹಿಸಿರುವ ವಿನ್ಯಾಸಗಳನ್ನು ಒಳಗೊಂಡಿವೆ. ಈ ಕಥನಗಳು ಅಕ್ಷರ ಚರಿತ್ರೆ ದಾಖಲಿಸದ, ಚರಿತ್ರೆಯು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ ಅನೇಕ ಗುಟ್ಟುಗಳನ್ನು ಒಡಲೊಳಗೆ ಪೋಷಿಸಿಕೊಂಡಿವೆ.

ಮಳೆಗಾಗಿ ಪ್ರಾರ್ಥಿಸುವ ಮಳೆರಾಯನ ಪರುವು–ಬಲಿಗಳು ಜನಪದ ಬದುಕನ್ನು ಇನ್ನೂ ಆಶಾವಾದಿಯಾಗಿಟ್ಟಿವೆ. ಮಳೆಗೆ ವೈದಿಕ ಪುರಾಣಗಳು ವಿವರಿಸುವಂತೆ ಗಂಡು ದೇವತೆಯಾದ ಇಂದ್ರ / ವರುಣ ಅಧಿಪತಿ. ಆದ್ದರಿಂದ ಪರ್ಜನ್ಯವ್ರತದ ಮೂಲಕ ಅವನನ್ನು ಸಂತುಷ್ಟಗೊಳಿಸುವ ಆಚರಣೆಗಳನ್ನು ಶಿಷ್ಟ ಪರಂಪರೆ ಹುಟ್ಟುಹಾಕಿದೆ. ಆದರೆ ಜಾನಪದ ಪರಂಪರೆಯು ಮಳೆಯನ್ನ ಸ್ತ್ರೀದೇವತೆಯನ್ನಾಗಿ ಪರಿಭಾವಿಸಿದೆ. ಮಳೆಯ ಅನೇಕ ಹಾಡುಗಳಲ್ಲಿ ಗಂಡಿನ ಸ್ತುತಿ ಇರುವ ಹಾಗೆ ಮಳೆ ಹೆಣ್ಣು ಎಂಬ ವಿಚಾರವು ಸಮರ್ಥಿಸಲ್ಪಟ್ಟಿದೆ. 'ಮಾಯದಂಥ ಮಳೆ ಬಂತಣ್ಣ ಮದುಗಾದ ಕೆರೆಗೆ,' ಕಥನದಲ್ಲಿ ಮಳೆಯೇ ನಾನಿಲ್ಲುವಳಲ್ಲವೆಂದು ತನ್ನನ್ನು ಸಂಬೋಧಿಸಿಕೊಳ್ಳುವುದನ್ನು ಗಮನಿಸಿದರೆ ಈ ಸೂಕ್ಷ್ಮ ಹೊಳೆಯುತ್ತದೆ. ಭಾರತದಲ್ಲಿ ಮಳೆಯ ಸ್ತ್ರೀ ರೂಪವನ್ನು ಗಂಡಾಗಿಸಿರುವುದರ ಹಿಂದೆ ಆರ್ಯೀಕರಣದ ಕೈವಾಡವಿದೆ. ಹೆಣ್ಣು ದೇವತೆಗಳನ್ನು ಗಂಡಾಗಿಸಿದ್ದು ಸಂಕರಗಳ

ಅನಿವಾರ್ಯ ಲಕ್ಷಣವಾಗಿರುವುದನ್ನು ಸಂಶೋಧಕರು ಗುರುತಿಸಿದ್ದಾರೆ. ಈ ವಿವರಗಳು ಸಮಾಜ ವಿಕಾಸದ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುವಂತಿದೆ.

ನೀರಿನಿಂದಲೇ ಜಗತ್ತು ಸೃಷ್ಟಿಯಾಗಿದೆ ಮತ್ತು ಜಲಪ್ರಳಯದಿಂದಲೇ ನಾಶವಾಗುತ್ತದೆ ಎನ್ನುವ ಬಲವಾದ ನಂಬಿಕೆ ಜನಪದ ತಾತ್ವಿಕತೆಯ ತಳಹದಿಯಾಗಿದೆ. ನೀರು ಕೇವಲ ಭೌತಿಕ ಪದಾರ್ಥವಾಗಿ ಅಲ್ಲದೆ ಅದು ಒಟ್ಟಾರೆ ಒಂದು ಸಂಸ್ಕೃತಿಯ ಸ್ವರೂಪ ಪಡೆದುಕೊಂಡಿರುವುದನ್ನು ಗಮನಿಸಿದರೆ ಜನಪದ ಸಂಸ್ಕೃತಿಯನ್ನು ಜಲಸಂಸ್ಕೃತಿ ಎಂದು ಗುರುತಿಸುವುದು ಸೂಕ್ತವೆನಿಸುತ್ತದೆ ಮತ್ತು ಜಲಸಂಸ್ಕೃತಿಯೇ ಈ ದೇಶದ ಮೂಲ ಸಂಸ್ಕೃತಿಯಾಗಿದೆ. ಜಲಸಂಸ್ಕೃತಿಯ ಲಕ್ಷಣಗಳನ್ನು ಆರ್ಯೀಕರಣ ಪ್ರಕ್ರಿಯೆಯು ವ್ಯವಸ್ಥಿತವಾಗಿ ನಾಶಗೊಳಿಸುತ್ತಾ ಬಂದ ವಿವರಗಳು ಸಮುದ್ರ ಮಂಥನ, ವೃತ್ರಾಸುರ ಸಂಹಾರ – ಕಾಳಿಂಗಮರ್ದನ ಮುಂತಾದ ಪುರಾಣಗಳಲ್ಲಿ ದಾಖಲಾಗಿದೆ. ಇಂದು ಭಾರತೀಯ ಸಂಸ್ಕೃತಿಯನ್ನು ಏಕಶಿಲಾಕೃತಿಯೆಂಬಂತೆ ಗ್ರಹಿಸಿ ವಿವರಿಸುತ್ತಿರುವ ಪುರೋಹಿತಶಾಹಿಗಳು ಅತ್ತ ನೀರಿನ ಪ್ರತೀಕಾತ್ಮಕ ನೆಲೆಯನ್ನು ನಾಶಗೊಳಿಸುತ್ತಿದ್ದರೆ, ಇತ್ತ ಜಾಗತೀಕರಣ ಏಜೆಂಟರು ನೀರನ್ನು ವ್ಯಾಪಾರ ಪದಾರ್ಥವಾಗಿಸಿರುವುದರ ಮೂಲಕ ಸಾಮಾನ್ಯ ಜನರಿಂದ ದೂರವಾಗಿಸುವ ಹುನ್ನಾರ ನಡೆಸಿದ್ದಾರೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಆವಿಷ್ಕಾರಗಳಿಂದಾಗಿ ನಿಸರ್ಗದ ಜತೆಗಿದ್ದ ಮನುಷ್ಯನ ಭಾವನಾತ್ಮಕ ನೆಲೆಯು ಕಣ್ಮರೆಯಾಗುತ್ತಿದೆ. ಈ ಅಪಾಯಗಳಿಂದ ಪಾರಾಗುವ ಮಾರ್ಗೋಪಾಯಗಳು ಜನಪದ ಜೀವನಕ್ರಮಗಳಲ್ಲಿ ಅಂತಸ್ಥವಾಗಿವೆಯಾದರೂ ಅವು ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಜೀವದ್ರವ್ಯ ಹಾಗೂ ಜೀವಕ್ಕೆ ಒದಗಿರುವ ಈ ಸಂಕಷ್ಟಗಳಿಂದ ಪಾರಾಗಲು ಜಲಸಂಸ್ಕೃತಿಯ ವಿವೇಕವಲ್ಲದೆ ಅನ್ಯಮಾರ್ಗವಿಲ್ಲ. (ಕೆ. ವೈ. ನಾರಾಯಣಸ್ವಾಮಿ, ಗಿರಿಸಾಲು ಕೆರೆಮಾಲೆ ಮಳೆದೇವಿ ಉತ್ಸವ, ಚಿಕ್ಕಬಳ್ಳಾಪುರ)

**ಸ್ವಾಮಿ ವಿವೇಕಾನಂದ :** ಭಾರತದ ಬಹುದೊಡ್ಡ ಸಂತ. ವಿವೇಕಾನಂದ ಅಮೆರಿಕಾದ ಚಿಕಾಗೋ ನಗರದಲ್ಲಿ ಹಿಂದೂಧರ್ಮದ ಬಗ್ಗೆ ಪ್ರಚಾರ ಮಾಡಿದರೆಂದು ಸಾಮಾನ್ಯವಾಗಿ ಎಲ್ಲರೂ ತಿಳಿದುಕೊಂಡಿದ್ದಾರೆ. ಆದರೆ ಅವರು ಹೆಚ್ಚು ಒಲಿದಿದ್ದು, ಮಾತನಾಡಿದ್ದು ಬುದ್ಧ, ಬುದ್ಧ ಧರ್ಮದ ಬಗ್ಗೆ ಮತ್ತು ಜನರ ನಡುವಿನ ಭ್ರಾತೃತ್ವದ ಬಗ್ಗೆ. 'ಬುದ್ಧ ನನ್ನ ಇಷ್ಟ ದೇವತೆ. ಅವನು ದೇವರ ಬಗ್ಗೆ ಯಾವ ವಾದವನ್ನೂ ಬೋಧಿಸಲಿಲ್ಲ. ಅವನೇ ದೇವರಾಗಿದ್ದ. ಇದರಲ್ಲಿ ನನಗೆ ಸಂಪೂರ್ಣ ನಂಬಿಕೆ ಇದೆ. ಬುದ್ಧನು ಪೂರ್ವಕ್ಕೆ ಒಂದು ಸಂದೇಶ ನೀಡಿದಂತೆ, ನಾನು ಪಶ್ಚಿಮಕ್ಕೆ ಒಂದು ಸಂದೇಶ ನೀಡಲು ಇಲ್ಲಿಗೆ ಬಂದಿದ್ದೇನೆ. ನೀವು ಕೇಳಿರುವಂತೆ ನಾನು ಬೌದ್ಧನಲ್ಲ, ಆದರೂ ನಾನೊಬ್ಬ ಬೌದ್ಧ' ಎನ್ನುತ್ತಾರೆ, (Vivekananda: The Complete Works, Vol.6, p.227, 1968, Kolkata) ಹೀಗೆ ಬುದ್ಧನನ್ನು ಕೊಂಡಾಡುತ್ತಾರೆ.

ವಿವೇಕಾನಂದ ತಾನು ವಿಶ್ಲೇಷಿಸಿ ಬರೆದ ತನ್ನ `Complete Works' ಕೃತಿಗಳಲ್ಲಿ ಹಿಂದೂ ಧರ್ಮದ ಬಗ್ಗೆ ಕಿಡಿ ಕಾರಿಕೊಂಡಿರುವಷ್ಟು ಬೇರೆ ಯಾವ ಭಾರತದ ವಿದ್ವಾಂಸರೂ ಮಾಡಿಲ್ಲ. ಅವರು ಹಿಂದೂಗಳನ್ನು ಹೀಗೆ ಪ್ರಶ್ನಿಸಿದ್ದಾರೆ. `ವರ್ಣಾಶ್ರಮದ ಬಗ್ಗೆ ನಿಮಗೇನು ಗೊತ್ತಿದೆ? ನಿಮ್ಮಲ್ಲಿ ಪ್ರತಿಯೊಬ್ಬರನ್ನೂ ನಾನು ಕೇಳುತ್ತೇನೆ. ಈ ದೇಶದಲ್ಲಿ ಈಗ ನಾಲ್ಕು ಜಾತಿಗಳು ಎಲ್ಲಿವೆ? ನಾಲ್ಕು ವರ್ಣಗಳು ನಿಜವಾಗಿಯೂ ನನಗೆ

ಕಾಣುತ್ತಿಲ್ಲ. ಬ್ರಾಹ್ಮಣರು ಮತ್ತು ಶೂದ್ರರು ಮಾತ್ರ ಇದ್ದಾರೆ. ಕ್ಷತ್ರಿಯರು ಮತ್ತು ವೈಶ್ಯರು ಇದ್ದರೆ, ಅವರೆಲ್ಲಿದ್ದಾರೆ? ಹೇಳಿ ಬ್ರಾಹ್ಮಣರೆ. ನೀವು ಅವರಿಗೇಕೆ ಯಜ್ಞೋಪವೀತ ಕೊಡಬಾರದು? ವೇದಗಳನ್ನು ಓದುವಂತೆ ಆಜ್ಞಾಪಿಸಬಾರದು? ವೈಶ್ಯರು ಮತ್ತು ಕ್ಷತ್ರಿಯರು ಇಲ್ಲದೆ, ಬ್ರಾಹ್ಮಣರು ಮತ್ತು ಶೂದ್ರರು ಮಾತ್ರವೇ ಇದ್ದರೆ, ಅಂತಹ ದೇಶದಲ್ಲಿ ಬ್ರಾಹ್ಮಣರು ವಾಸಿಸಬಾರದೆಂದು ಶಾಸ್ತ್ರಗಳು ಹೇಳುತ್ತವೆ. ಆದ್ದರಿಂದ ನೀವು ಗಂಟುಮೂಟೆ ಕಟ್ಟಿಕೊಂಡು ತೊಲಗಿ. ನೀವು ಸಾವಿರಾರು ವರ್ಷಗಳಿಂದ ಹೇಳಿರುವಂತೆ, ಯಾರು ಮ್ಲೇಚ್ಛರ ಆಹಾರವನ್ನು ಉಣ್ಣುವರೋ, ಮ್ಲೇಚ್ಛರ ಸರಕಾರದ ಕೈಕೆಳಗೆ ಕೆಲಸ ಮಾಡುವರೋ, ಅವರಿಗೆ ಶಾಸ್ತ್ರ ಏನು ಪ್ರಾಯಶ್ಚಿತ್ತ ವಿಧಿಸಿದೆ ಗೊತ್ತೆ? ಅವರು ತಮ್ಮ ಕೈಯಿಂದ ತಮಗೆ ತಾವೇ ಬೆಂಕಿ ಹಚ್ಚಿಕೊಂಡು ಸಾಯಬೇಕು ಎಂದು. ಗುರುಗಳಂತೆ ನಟಿಸಿ ಕಪಟಿಗಳಂತೆ ನಡೆದುಕೊಳ್ಳುವಿರೇನು? ನಿಮಗೆ ನಿಮ್ಮ ಶಾಸ್ತ್ರದಲ್ಲಿ ನಂಬಿಕೆ ಇದ್ದರೆ, ಅಲೆಕ್ಸಾಂಡರ್ ಮಹಾಶಯನ ಜೊತೆಗೆ ಹೋದ ಮಹಾಬ್ರಾಹ್ಮಣ ತಾನು ಮ್ಲೇಚ್ಛನ ಆಹಾರವನ್ನು ತಿಂದೆ ಎಂದು ತನ್ನನ್ನು ತಾನೇ ಸುಟ್ಟುಕೊಂಡು ಸತ್ತನು. ನೀವು ಮೊದಲು ಹಾಗೆ ಮಾಡಿ. ಇಡೀ ರಾಷ್ಟ್ರ ನಿಮ್ಮ ಪದತಲದಲ್ಲಿ ಇರುವುದನ್ನು ನೀವು ನೋಡುವಿರಿ. ನಿಮಗೆ, ನಿಮ್ಮ ಶಾಸ್ತ್ರದಲ್ಲಿ ನಂಬಿಕೆ ಇಲ್ಲ; ಆದರೂ ಇತರರನ್ನು ನಂಬಿಸುವುದಕ್ಕೆ ಪ್ರಯತ್ನ ಮಾಡುತ್ತೀರಿ. ಈ ಕಾಲದಲ್ಲಿ ನಿಮಗೆ ಅದನ್ನು ಮಾಡಲು ಸಾಮರ್ಥ್ಯ ಇಲ್ಲದಿದ್ದರೆ ನಿಮ್ಮ ದೌರ್ಬಲ್ಯವನ್ನು ಒಪ್ಪಿಕೊಂಡು ಇತರರ ದೌರ್ಬಲ್ಯವನ್ನು ಕ್ಷಮಿಸಿ. ಇತರ ಜಾತಿಗಳನ್ನು ಮೇಲಕ್ಕೆತ್ತಿ. ಅವರಿಗೆ ಸಹಾಯ ಹಸ್ತ ನೀಡಿ' (Vivekananda: The Complete Works, Vol.3, p.339-40, 1968, Kolkata).

# ಅಧ್ಯಾಯ-5

ಜನ ಓದುವ ಹಾಗೆ ಏನಾದರೂ ಬರೆದು ಇಟ್ಟುಹೋಗಿ. ಇಲ್ಲವಾದರೆ ಜನ
ನಿಮ್ಮ ಬಗ್ಗೆ ಬರೆಯುವ ಹಾಗೆ ಏನಾದರೂ ಕಾರ್ಯ ಮಾಡಿ

-ಅಂಬೇಡ್ಕರ್.

# ಕರ್ನಾಟಕದಲ್ಲಿ ದಲಿತ ಹೋರಾಟ

## ಚಾರಿತ್ರಿಕ ಹಿನ್ನೆಲೆ

ಡಾ. ಅಂಬೇಡ್ಕರ್ ಅವರ ಶಿಕ್ಷಣ-ಸಂಘಟನೆ-ಚಳುವಳಿಯ ಆಧಾರದಿಂದ ಮೊದಲಿಗೆ ಮಹಾರಾಷ್ಟ್ರದಲ್ಲಿ ಹುಟ್ಟಿಕೊಂಡ ದಲಿತರ ಸ್ವಾಭಿಮಾನವು ದಲಿತ ಪ್ಯಾಂಥರ್ಸ್, ದಲಿತ ಸಾಹಿತ್ಯದ ಮೂಲಕ ಪಕ್ಕದ ರಾಜ್ಯಗಳಿಗೆ ನಿಧಾನವಾಗಿ ಹರಡಿಕೊಂಡಿತು. ಮೈಸೂರಿನಲ್ಲಿ ಮೊದಲ ಬಾರಿಗೆ 70ರ ದಶಕದಲ್ಲಿ ಪ್ರೊ. ಸಂಜೀವಯ್ಯನವರು ಒಂದು ದಲಿತ ಕಮ್ಮಟ ಆಯೋಜಿಸಿ ಹೊಸ ಅಲೆಯೊಂದನ್ನು ಹುಟ್ಟುಹಾಕಲು ಕಾರಣರಾದರು. ಆ ಕಮ್ಮಟದ ಉದ್ಘಾಟನಾ ಭಾಷಣದಲ್ಲಿ ಅಂದಿನ ಕರ್ನಾಟಕ ಪೌರಾಡಳಿತ ಸಚಿವರು ಮತ್ತು ಅಂಬೇಡ್ಕರ್ ಅವರ ತೀವ್ರ ಅನುಯಾಯಿ ಬಿ. ಬಸವಲಿಂಗಪ್ಪನವರು ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳ ಬಗ್ಗೆ ಉಲ್ಲೇಖಿಸುತ್ತ ಹಿಂದೂ ಧರ್ಮ ಮತ್ತು ಹಿಂದೂ ದೇವರುಗಳಿಂದ ದಲಿತರಿಗೆ ಯಾವ ಒಳಿತೂ ಆಗಿಲ್ಲ, ಹಾಗಾಗಿ ಅಂಬೇಡ್ಕರ್ ಹೇಳುವಂತೆ ಹಿಂದೂ ದೇವರುಗಳನ್ನೆಲ್ಲ ಘಟಾರುಗಳಿಗೆ ನೂಕಿ ದೇವಾಲಯಗಳನ್ನೆಲ್ಲ ಮುಚ್ಚಬೇಕಿದೆ ಎಂದು ಹೇಳುತ್ತ ಕನ್ನಡ ಸಾಹಿತ್ಯದಲ್ಲಿ ಏನಿದೆ? 'ಬೂಸಾ' ಬಿಟ್ಟು, ಎಂದು ದಲಿತ ವಿದ್ಯಾರ್ಥಿಗಳಲ್ಲಿ ವೈಚಾರಿಕ ಕಿಚ್ಚನ್ನು ಹಚ್ಚಿದರು. ಇದನ್ನು ಪಟ್ಟಭದ್ರ ಹಿತಾಶಕ್ತಿಗಳು ರಾಜಕೀಯ ಸಮಸ್ಯೆಯಾಗಿ ಪರಿವರ್ತಿಸಿಬಿಟ್ಟವು.

ಈ ಸಮಸ್ಯೆ ಇಡೀ ರಾಜ್ಯವೆಲ್ಲ ಹರಡಿಕೊಂಡು ದಲಿತರು ಮತ್ತು ದಲಿತೇತರರ ನಡುವೆ ದೊಡ್ಡ ಆಂದೋಲನವಾಗಿ ಪರಿಣಮಿಸಿತು. ವಿಶೇಷವಾಗಿ ಶಾಲೆ/ಕಾಲೇಜುಗಳು ಮತ್ತು ಹಾಸ್ಟಲ್‌ಗಳಲ್ಲಿನ ವಿದ್ಯಾರ್ಥಿಗಳ ಮಧ್ಯೆ ದೊಡ್ಡ ರೀತಿಯಲ್ಲಿ ಮಾರಾಮಾರಿ ಜಗಳಗಳು ಪ್ರಾರಂಭವಾದವು. ಬಹುಸಂಖ್ಯಾತರಾಗಿದ್ದ ಮೇಲ್ಜಾತಿಯ ವಿದ್ಯಾರ್ಥಿಗಳ ಜತೆಗೂಡಿದ ಸಮಾಜಘಾತುಕ ದುಷ್ಕರ್ಮಿಗಳು ಎಲ್ಲೆಂದರಲ್ಲಿ ದಲಿತ ವಿದ್ಯಾರ್ಥಿಗಳ ಮೇಲೆ ಮಾರಣಾಂತಿಕ ಹಲ್ಲೆಗಳನ್ನು ನಡೆಸಿದರು. ಈ ಆಂದೋಲನದಲ್ಲಿ ಪ್ರೊ. ಬಿ. ಕೃಷ್ಣಪ್ಪ, ದೇವನೂರ ಮಹಾದೇವ, ಸಿದ್ಧಲಿಂಗಯ್ಯ ಇನ್ನೂ ಅನೇಕರು ದಲಿತ ವಿದ್ಯಾರ್ಥಿಗಳ ಪರವಾಗಿ ನಿಂತುಕೊಂಡರು. ಅಂದಿನ ಪ್ರಗತಿಪರ ಮುಖ್ಯಮಂತ್ರಿಗಳಾದ

ದೇವರಾಜ ಅರಸು ಬಸವಲಿಂಗಪ್ಪನವರನ್ನು ಸಚಿವರಾಗಿ ಉಳಿಸಿಕೊಳ್ಳಲು ಆಗದೆ ಕೊನೆಗೂ ಬಸವಲಿಂಗಪ್ಪನವರು ರಾಜಿನಾಮೆ ನೀಡಿದರು. ಈ ಹಿನ್ನೆಲೆಯಲ್ಲಿ ಕೃಷ್ಣಪ್ಪ ತನ್ನ ಗೆಳೆಯರೊಂದಿಗೆ ಮೊದಲಿಗೆ ಭದ್ರಾವತಿಯಲ್ಲಿ ಕರ್ನಾಟಕ ದಲಿತ ಕ್ರಿಯಾ ಸಮಿತಿಯನ್ನು ಉದ್ಘಾಟಿಸಿ ಕರ್ನಾಟಕದಲ್ಲಿ ಮೊದಲಿಗೆ ಡಿಎಸ್‌ಎಸ್‌ಗೆ ನಾಂದಿ ಹಾಕಿದರು.

ಇದರ ಜೊತೆಗೆ 'ಶೋಷಿತ' ಎನ್ನುವ ಕನ್ನಡ ಪತ್ರಿಕೆಯನ್ನು ಪ್ರಾರಂಭಿಸಿ ದಲಿತರ ಸಮಸ್ಯೆಗಳು ಮತ್ತು ಅಂಬೇಡ್ಕರ್ ಅವರ ಆಲೋಚನೆಗಳನ್ನು ಅದರಲ್ಲಿ ಪ್ರಕಟಿಸಲಾಯಿತು. ಅನಂತರ 'ಪಂಚಮ' ಪತ್ರಿಕೆ ಪ್ರಾರಂಭವಾಯಿತು. ಕೆ. ನಾರಾಯಣಸ್ವಾಮಿ ಅವರು 'ಅಂಬೇಡ್ಕರ್ ವಾಣಿ' ಎಂಬ ಪತ್ರಿಕೆಯಲ್ಲಿ ಅಂಬೇಡ್ಕರ್ ಅವರ ಬದುಕು/ಬರಹಗಳನ್ನು ಪ್ರಕಟಿಸತೊಡಗಿದರು. ದಲಿತ ಸಂಘರ್ಷದ ಹೋರಾಟ ಅತ್ಯಂತ ವೇಗವಾಗಿ ರಾಜ್ಯದಾದ್ಯಂತ ಹರಡಿಕೊಳ್ಳತೊಡಗಿತು. ಭದ್ರಾವತಿ, ಮೈಸೂರು, ಕೋಲಾರ, ರಾಯಚೂರು ಹೀಗೆ ಎಲ್ಲಾ ಕಡೆಯೂ ವ್ಯಾಪಿಸಿತು. ಆಗ ಡಿಎಸ್‌ಎಸ್‌ನ ಮುಖ್ಯ ಸಂಘಟಕರು ಶಾಲೆ/ಕಾಲೇಜು, ಹಾಸ್ಟಲುಗಳಿಗೆ ಹೋಗಿ ದಲಿತ ವಿದ್ಯಾರ್ಥಿಗಳನ್ನು ಸಂಘಟಿಸತೊಡಗಿದರು. ರಾತ್ರಿಹೊತ್ತು ಹಳ್ಳಿಗಳ ಕಡೆಗೆ ಹೋಗಿ ದಲಿತರಲ್ಲಿ ಅರಿವು ಮೂಡಿಸಲಾಯಿತು. ಜೊತೆಗೆ ನೆರೆಯ ಆಂಧ್ರ, ಮಹಾರಾಷ್ಟ್ರದಿಂದ ಲೇಖಕರು, ಸಮಾಜ ಚಿಂತಕರು ಕರ್ನಾಟಕದ ಕಡೆಗೆ ಬರತೊಡಗಿದರು. ಕೆ. ರಾಮಯ್ಯ, ಸಿದ್ಧಲಿಂಗಯ್ಯ ಮತ್ತು ಇತರರು ರಚಿಸಿದ ಹೋರಾಟದ ಹಾಡುಗಳನ್ನು ಪಿಚ್ಚಳ್ಳಿ ಶ್ರೀನಿವಾಸ್, ಜನ್ನಿ ಇತರರು ಹಳ್ಳಿಹಳ್ಳಿಗಳಿಗೆ ಹೋಗಿ ಹಾಡಿದರು. ತೆಲುಗಿನ ವಿಪ್ಲವ ಕವಿಗಳ ಅನೇಕ ಹಾಡುಗಳನ್ನು ಕನ್ನಡಕ್ಕೆ ಭಾಷಾಂತರಿಸಿದ ರಾಮಯ್ಯ ರಾಜ್ಯದ ಗಡಿ ಜಿಲ್ಲೆಗಳಲ್ಲಿ ಹಾಡಿಸಿದರು. ಈ ನಡುವೆ ಸಂಘಟಕರು ಭೂಮಿ ಆಂದೋಲನ ತೆಗೆದುಕೊಂಡು ನೆಲವನ್ನು ದಲಿತರಿಗೆ ಹಂಚುವ ಬಗ್ಗೆ ಸರ್ಕಾರದ ಮುಂದೆ ಹೋರಾಟಗಳನ್ನು ಮಾಡಿ ಸಫಲರೂ ಆದರು. ಹೆಂಡ ಬೇಡ, ಭೂಮಿ ಬೇಕು, ವಿದ್ಯೆ ಬೇಕು ಎನ್ನುವ ಚಳುವಳಿಗಳು ಪ್ರಾರಂಭವಾದವು. ಡಿಎಸ್‌ಎಸ್‌ನ ಹೋರಾಟದಿಂದ ತಾಲೂಕು ಮಟ್ಟದಲ್ಲಿ ಶಾಲೆ/ಕಾಲೇಜು, ವಸತಿ ಹಾಸ್ಟಲ್‌ಗಳನ್ನು ತೆರೆಯಲಾಯಿತು.

1974ರಲ್ಲಿ ಸಿದ್ಧಲಿಂಗಯ್ಯನವರ 'ಹೊಲೆ–ಮಾದಿಗರ ಹಾಡುಗಳು' (ಕವಿತೆಗಳು) ಪ್ರಕಟವಾಗಿ ಆಂದೋಲನಕ್ಕೆ ಇನ್ನಷ್ಟು ಶಕ್ತಿ ಬಂದಿತು. 1982ರಲ್ಲಿ ಕೋಲಾರದಲ್ಲಿ ದಲಿತ ವಿದ್ಯಾರ್ಥಿಗಳ ಫೆಡರೇಶನ್ ಸ್ಥಾಪನೆಯಾದ ದಿನ 30 ಸಾವಿರ ವಿದ್ಯಾರ್ಥಿಗಳು/ಸಂಘಟಕರು ಅಲ್ಲಿ ಸೇರಿದ್ದರು. ಸಭೆಯಲ್ಲಿ ಪಾಲ್ಗೊಂಡಿದ್ದ ಶ್ರೀಮತಿ ಸವಿತಾ ಅಂಬೇಡ್ಕರ್ ಜನರ ಮುಂದೆ ಗದ್ಗದಿತರಾಗಿ ಕಣ್ಣೀರಿಟ್ಟುಕೊಂಡರು. 1985ರಲ್ಲಿ ಅಂಬೇಡ್ಕರ್ ಅವರ ಹುಟ್ಟು ದಿನದಂದು ಬೆಂಗಳೂರಿನ ವಿಧಾನಸೌಧದ ಮುಂದೆ 'ಸ್ವಾಭಿಮಾನದ ದಿನ' ಎಂದು ಆಚರಣೆ ಮಾಡಿ ಡಿಎಸ್‌ಎಸ್‌ನ ಲಾಂಛನವನ್ನು ಬಿಡುಗಡೆ ಮಾಡಲಾಯಿತು. ಆ ದಿನ ಒಂದು ಲಕ್ಷಕ್ಕಿಂತ ಹೆಚ್ಚು ಜನರು ಅಲ್ಲಿ ಸೇರಿದ್ದರು.

1979ರಲ್ಲಿ ಕೋಲಾರ ಜಿಲ್ಲೆಯ ಹುಣಿಸೆಕೋಟೆಯ ಶೇಷಗಿರಿಯಪ್ಪನ ಕೊಲೆಯಾಗಿ ಆತನ ಮಗಳು ಅನುಸೂಯಮ್ಮನ ಮೇಲೆ ಕೃಷ್ಣೇಗೌಡನ ಕಡೆಯವರು ಅತ್ಯಾಚಾರ ನಡೆಸಿದರು. ಡಿಎಸ್‌ಎಸ್ ಈ ಕೇಸನ್ನು ಖಂಡಿಸುತ್ತ ಹುಣಿಸೆಕೋಟೆಯಿಂದ ಬೆಂಗಳೂರಿಗೆ ಜಾತ್ರ ಬಂದು ವಿಧಾನಸೌಧಕ್ಕೆ ಮುತ್ತಿಗೆ ಹಾಕಿತು. ಕರ್ನಾಟಕದಲ್ಲಿ ಇದು

ಡಿಎಸ್‌ಎಸ್ ಮಾಡಿದ ಮೊದಲ ದೊಡ್ಡ ಆಂದೋಲನ. ಅಲ್ಲಿಗೆ ಡಿಎಸ್‌ಎಸ್ ಬರೀ ಅಸ್ಪೃಶ್ಯರ ಪರವಾಗಿ ಹೋರಾಡುತ್ತಿಲ್ಲ, ಎಲ್ಲಾ ಬಡ ಬಗ್ಗರ ಪರವಾದ ಸಂಘಟನೆ ಎನ್ನುವ ವ್ಯಾಪ್ತಿಯನ್ನು ಗಳಿಸಿಕೊಂಡಿತು. ಗುಂಡೂರಾವ್ ಅವರ ಕಾಂಗ್ರೆಸ್ ಸರ್ಕಾರ ಮೊದಲ ಬಾರಿಗೆ ಕರ್ನಾಟಕದಲ್ಲಿ ಸಂಪೂರ್ಣವಾಗಿ ಸೋಲು ಕಂಡಿತು. ಚಂದ್ರಗುತ್ತಿಯಲ್ಲಿನ ಬೆತ್ತಲೆ ಸೇವೆ ಮತ್ತು ದೇವದಾಸಿ ಪದ್ಧತಿಯ ವಿರುದ್ಧವೂ ಡಿಎಸ್‌ಎಸ್ ಆಂದೋಲನಗಳನ್ನು ಕೈಗೆ ತೆಗೆದುಕೊಂಡು ಹೋರಾಟ ನಡೆಸಿತು. 1987ರಲ್ಲಿ ಬಿ. ರಾಚಯ್ಯನವರ ಕಾಲದಲ್ಲಿ ಬೆತ್ತಲೆ ಸೇವೆ ಮತ್ತು ದೇವದಾಸಿ ಪದ್ಧತಿಗಳನ್ನು ನಿಷೇಧ ಮಾಡಲಾಯಿತು. ಇಲ್ಲಿ ಡಿಎಸ್‌ಎಸ್ ಹಿಂದೂ ಮೂಲಭೂತವಾದಿಗಳ ವಿರುದ್ಧ ಹೋರಾಡಬೇಕಾಯಿತು.

1979ರಲ್ಲಿ ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಡೆ ಕಾಲದಲ್ಲಿ ಬೆಂಡಿಗೇರಿಯಲ್ಲಿ ದಲಿತ ಹುಡುಗರು ಮೆಕ್ಕೆಜೋಳವನ್ನು ಕದ್ದು ತಿಂದರೆಂದು ಮೇಲ್ಜಾತಿಯ ಜನರು ಆ ಹುಡುಗರನ್ನು ಹಿಡಿದುಕೊಂಡು ಅವರಿಗೆ ಮಲ ತಿನ್ನಿಸಿ ಅದೊಂದು ದೊಡ್ಡ ಹಗರಣವಾಯಿತು. ಒಂದು ಪತ್ರಿಕೆಯಲ್ಲಿ ಒಬ್ಬ ಪತ್ರಕರ್ತ 'ಮಲ ತಿನ್ನಿಸಿದರೆ ತಪ್ಪೇನಿದೆ' ಎಂದು ವ್ಯಂಗ್ಯ ಮಾಡಿದ್ದ. ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಹಂಪನಾ ಅವರಿಗೆ ಚೆನ್ನಣ್ಣ ವಾಲೀಕಾರರು 'ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಸಾಹಿತ್ಯಕ್ಕೆ ಪ್ರತ್ಯೇಕ ಗೋಷ್ಠಿಯನ್ನು ನೀಡಬೇಕು' ಎಂದು ಪತ್ರ ಬರೆದಾಗ ಅವರು, 'ಕನ್ನಡ ಸಾಹಿತ್ಯದಲ್ಲಿ ದಲಿತ ಬಲಿತ ಕಲಿತ ಗಿಲಿತ ಎನ್ನುವ ಸಾಹಿತ್ಯವಿಲ್ಲ. ಇರುವುದು ಒಂದೇ ಸಾಹಿತ್ಯ ಕನ್ನಡ ಸಾಹಿತ್ಯ' ಎಂದು ಉತ್ತರಿಸಿದ್ದರು. ಆದರೆ 2014ರಲ್ಲಿ ದಲಿತ ಸಾಹಿತಿ ಡಾ. ಸಿದ್ಧಲಿಂಗಯ್ಯ ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದು ಚರಿತ್ರೆಯಾಯಿತು. ಹಂಪನಾ ತಮ್ಮ ಪತ್ನಿಯ ಸಮೇತ ಈ ಸಾಹಿತ್ಯ ಸಮ್ಮೇಳನದಲ್ಲಿ ಹಾಜರಾಗಿದ್ದರು.

ಮೀಸಲಾತಿ ಬಗ್ಗೆ ದೇಶದಾದ್ಯಂತ ಪರ ವಿರೋಧ ಚರ್ಚೆಗಳು ನಡೆಯುತ್ತಿದ್ದಾಗ ಮೇಲ್ಜಾತಿಗಳ ಜನರು 1978–79ರಲ್ಲಿ ಗುಜರಾತಿನಲ್ಲಿ ಮೀಸಲಾತಿ ವಿರೋಧಿ ಚಳುವಳಿಯನ್ನು ಪ್ರಾರಂಭಿಸಿದರು. ಆಗ ಗುಜರಾತಿನಲ್ಲಿ ಪಾರ್ಮರ್ ಎಂಬ ದಲಿತ ಯುವ ನಾಯಕನನ್ನು ಮೇಲ್ಜಾತಿಯ ಜನರು ಬೆಂಕಿಗೆ ಹಾಕಿ ಸುಡುವಂತಹ ಕೆಲಸವನ್ನೂ ಮಾಡಿದರು. ಅದೇ ಕಾಲಕ್ಕೆ ಡಿಎಸ್‌ಎಸ್ ಬೆಂಗಳೂರಿನ ಲಾಲ್‌ಬಾಗ್ ಗ್ಲಾಸ್ ಮನೆಯಲ್ಲಿ ಒಂದು ವಿಚಾರ ಸಂಕಿರಣವನ್ನು ಆಯೋಜಿಸಿ ಅದರಲ್ಲಿ ದೇಶದ ನಾನಾ ಭಾಗಗಳಿಂದ ಲೇಖಕರು, ಸಮಾಜ ಚಿಂತಕರು ಪಾಲ್ಗೊಂಡು ಮೀಸಲಾತಿಯ ಬಗ್ಗೆ ಒಂದು ವಿಶೇಷ ಸಂಚಿಕೆಯನ್ನು ಹೊರತರಲಾಯಿತು. ಇದೇ ಸಮಯದಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಿ. ಆರ್. ಕೃಷ್ಣ ಅಯ್ಯರ್ ಮತ್ತು ಒ. ಚಿನ್ನಪ್ಪ ರೆಡ್ಡಿಯ ಪೀಠ ಮೀಸಲಾತಿಯ ಪರವಾಗಿ ತೀರ್ಪು ನೀಡಿತು.

1990ರಲ್ಲಿ ಕೇಂದ್ರದಲ್ಲಿ ವಿ. ಪಿ. ಸಿಂಗ್ ಸರ್ಕಾರ ಇದ್ದಾಗ ಮಂಡಲ್ ಆಯೋಗವನ್ನು ಒಪ್ಪಿಕೊಂಡು ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ನೀಡಲಾಯಿತು. ಆಗ ದೇಶದಾದ್ಯಂತ ಪರ ವಿರೋಧಗಳ ದೊಡ್ಡ ಆಂದೋಲನ ನಡೆಯಿತು. ದೆಹಲಿಯಲ್ಲಿ ಕೆಲವು ವಿದ್ಯಾರ್ಥಿಗಳು ಇದರ ವಿರುದ್ಧ ಬೆಂಕಿ ಹಚ್ಚಿಕೊಂಡು

ಪ್ರಾಣ ಕಳೆದುಕೊಂಡರು. ಬೆಂಗಳೂರಿನಲ್ಲಿ ಡಿಎಸ್ಎಸ್, ಒ. ಚಿನ್ನಪ್ಪ ರೆಡ್ಡಿ ಮತ್ತು ಮಲ್ಲಿಕಾರ್ಜುನ ಖರ್ಗೆ ಅವರ ಸಮ್ಮುಖದಲ್ಲಿ ಮೀಸಲಾತಿಯ ಬಗ್ಗೆ ಒಂದು ಸಂಕಿರಣವನ್ನು ಏರ್ಪಡಿಸಿತು. 1991–92ರಲ್ಲಿ ಒ. ಚಿನ್ನಪ್ಪ ರೆಡ್ಡಿಯ ವರದಿಯನ್ನು ಬಂಗಾರಪ್ಪನವರ ಕಾಲದಲ್ಲಿ ಸ್ವಲ್ಪ ಬದಲಿಸಿ ಕರ್ನಾಟಕದಲ್ಲಿ ಅಳವಡಿಸಲಾಯಿತು. ಅದರಲ್ಲಿ ಒಕ್ಕಲಿಗರನ್ನು ಬಿಟ್ಟಿದ್ದ ಕಾರಣ ದೇವೇಗೌಡರ ಮುಂದಾಳತ್ವದಲ್ಲಿ ಒಕ್ಕಲಿಗರು ಆಂದೋಲನ ಪ್ರಾರಂಭಿಸಿಬಿಟ್ಟರು. ಅನಂತರ ಹಾವನೂರು ಆಯೋಗದಲ್ಲಿ ಲಿಂಗಾಯತರನ್ನು ಬಿಟ್ಟಿದ್ದ ಕಾರಣ ಅವರೂ ಆಂದೋಲನ ನಡೆಸಿದರು. ಮುಂದೆ ಈ ಎಲ್ಲಾ ಆಯೋಗಗಳ ತೀರ್ಪುಗಳನ್ನು ಗಮನದಲ್ಲಿಟ್ಟುಕೊಂಡು ಜಸ್ಟೀಸ್ ವೆಂಕಟಸ್ವಾಮಿ ಆಯೋಗವನ್ನು ನೇಮಿಸಲಾಗಿ ಅದನ್ನು ಅಳವಡಿಸಲಾಯಿತು (Mavalli Shankar, Dalitcamera, youtube).

ಈ ಎಲ್ಲದರ ಬೆಳವಣಿಗೆಗಳಿಂದ ಹಿಂದುಳಿದ ವರ್ಗಗಳು, ಅಲ್ಪಸಂಖ್ಯಾತರು ಮತ್ತಿತರ ದಮನಿತ ಜನಾಂಗಗಳ ನಡುವೆ ಡಿಎಸ್ಎಸ್ ಮೂಲಕ ಒಂದು ಅರಿವು ಸೃಷ್ಟಿಯಾಯಿತು. ಆದರೆ ಇದೆಲ್ಲದರ ನಡುವೆಯೂ ಇಂದಿಗೂ ಡಿಎಸ್ಎಸ್‌ನ್ನು ಅಸ್ಪೃಶ್ಯರ ಸಂಘಟನೆಯೆಂದೇ ನೋಡಲಾಗುತ್ತಿದೆ. ಈ ದಿನ ಡಿಎಸ್ಎಸ್ ಅನೇಕ ಕವಲುಗಳಾಗಿ ಹತ್ತಾರು ಘಟಕಗಳಾಗಿ, ರಾಜ್ಯದಾದ್ಯಂತ ಹತ್ತಾರು ನಾಯಕರಿದ್ದಾರೆ. ಆದರೆ ಕೆಲವರಾದರೂ ಇಂದಿಗೂ ದಲಿತರ ನಡುವೆ ಅಲ್ಪಸ್ವಲ್ಪ ಕೆಲಸಗಳನ್ನು ಮಾಡಿಕೊಂಡಿದ್ದಾರೆ ಎನ್ನುವುದು ತುಸು ಸಮಾಧಾನ ತರುವ ಸಂಗತಿಯಾಗಿದೆ. ಇವರಲ್ಲಿ ಮಾವಳ್ಳಿ ಶಂಕರ್ (ಅಂಬೇಡ್ಕರ್‌ವಾದಿ) ಮತ್ತು ಡಾ. ಎಂ. ವೆಂಕಟಸ್ವಾಮಿ (ಸಮತಾ ಸೈನ್ಯದ) ಮುಖ್ಯರು (ಈ ಕೃತಿಯ ಲೇಖಕರಲ್ಲ).

### ಕರ್ನಾಟಕದ ಜನರೂ ಎಲ್ಲಾ ರಾಜ್ಯಗಳ ಜನರಂತೆ ಧೂರ್ತರೆ ಆಗಿದ್ದಾರೆ

ಕರ್ನಾಟಕ ಎಂದರೆ ಅಭಿವೃದ್ಧಿ ಹೊಂದಿರುವ ರಾಜ್ಯ, ಒಳ್ಳೆ ಸುಸಂಸ್ಕೃತ ಜನರಿರುವ ರಾಜ್ಯ ಎಂಬುದಾಗಿ ದೇಶದ ಇತರ ರಾಜ್ಯಗಳ ಜನ ಮಾತನಾಡಿಕೊಳ್ಳುತ್ತಾರೆ. ಆದರೆ ದಲಿತರು/ಅಸ್ಪೃಶ್ಯರಿಗೆ ಮಾತ್ರ ಉಳಿದ ರಾಜ್ಯಗಳಂತೆ ಇದು ಒಂದು ಧೂರ್ತ ರಾಜ್ಯವೇ ಆಗಿದೆ. ಭಾರತದ ಸಂವಿಧಾನ ಎಲ್ಲರಿಗೂ ಸಮಾನ ಹಕ್ಕುಗಳನ್ನು ನೀಡಿದೆ. ದಲಿತರು/ ಹಿಂದುಳಿದವರು/ಅಲ್ಪಸಂಖ್ಯಾತರು ಮತ್ತು ಬುಡಕಟ್ಟು ಜನರಿಗೆ ಕೆಲವು ವಿಶೇಷ ಸ್ಥಾನಮಾನಗಳನ್ನು ನೀಡಿದೆ. ಆದರೆ ಪ್ರಬಲ ಹಿಂದೂ ಸಮಾಜದಲ್ಲಿ ಆತ್ಯಂತ ಆಳವಾಗಿ ಬೇರೂರಿರುವ ಮೇಲು–ಕೀಳು, ಅಸ್ಪೃಶ್ಯತೆ, ಜಾತಿ ವ್ಯವಸ್ಥೆ ಮಾತ್ರ ಮನುಷ್ಯ, ಮನುಷ್ಯರ ಮಧ್ಯೆ ರಾಕ್ಷಸ ಗೋಡೆಯಾಗಿ ಹಾಗೇ ನಿಂತಿದೆ. ಬುದ್ಧ, ಬಸವ, ಅಂಬೇಡ್ಕರ್ ಅಂಥವರೇ ಇದನ್ನು ಉರುಳಿಸಲಾಗಲಿಲ್ಲ. ಹಿಂದೂ ಧರ್ಮ ಎನ್ನುವ ಈ ಗೋಡೆ ಎಷ್ಟೊಂದು ರೋಗಗ್ರಸ್ತವಾಗಿ ಬೆಳೆದು ನಿಂತಿದೆಯೆಂದರೆ ಎಂಥ ಮಹಾನುಭಾವರಾಗಲಿ, ಒಂದು ಸ್ವಚ್ಛ ಮನಸುಗಳ ಹೊಸ ಧರ್ಮವೇ ಹುಟ್ಟಿಬರಲಿ ಅದನ್ನೇ ನುಂಗಿ ಸ್ವಾಹಾ ಮಾಡಿಕೊಂಡುಬಿಡುತ್ತದೆ. ಇಲ್ಲವೆಂದರೆ ಅದನ್ನು ಯಾವುದೋ ರೀತಿಯಲ್ಲಿ ಮುಗಿಸಿಬಿಡುತ್ತದೆ. ಬೌದ್ಧ ಧರ್ಮವೇ ಅದಕ್ಕೆ ಉದಾಹರಣೆ.

ದಕ್ಷಿಣ ಭಾರತದಲ್ಲಿ 5ನೇ ಶತಮಾನದಲ್ಲಿ ನಾಯನಾರರು ಮತ್ತು ಆಳ್ವಾರರ ಭಕ್ತಿ

ಚಳುವಳಿ ಪ್ರಾರಂಭವಾಯಿತು. ವೀರಶೈವರ ಚಳುವಳಿ 12ನೇ ಶತಮಾನದಲ್ಲಿ ಹುಟ್ಟಿಕೊಂಡಿತು. ಹರಿದಾಸರ ಚಳುವಳಿಯೂ ಕರ್ನಾಟಕದಲ್ಲಿಯೇ ಹುಟ್ಟು ಪಡೆಯಿತು. ಅನಂತರ ಹಲವು ದೇಶಿ ಭಾಷೆಗಳಲ್ಲಿ ಕಾವ್ಯಾತ್ಮಕ ಸಾಹಿತ್ಯ ಪ್ರಚಾರಗೊಂಡಿತು. ಕನ್ನಡದ ನೆಲದಲ್ಲಿ ಹುಟ್ಟಿಕೊಂಡ ಕನಕದಾಸ ಮತ್ತು ಪುರಂದರದಾಸರ ಭಕ್ತಿ ಚಳುವಳಿಗಳು ಪ್ರಧಾನವಾದವು. ಇವುಗಳ ಪ್ರಭಾವ ಉತ್ತರ ಭಾರತಕ್ಕೂ ಹರಡಿಕೊಂಡಿತು. ಸಂತ ಚೈತನ್ಯ, ವಲ್ಲಭ, ಮೀರಾಬಾಯಿ, ಕಬೀರ, ತುಳಸಿದಾಸ, ತುಕಾರಾಂ ಇವರು ಮುಖ್ಯರು. ಇಂಥವರಿಂದಲೇ ಶೂದ್ರರ ಅಭಿಮಾನ, ಭಕ್ತಿ ದೇವಾಲಯಗಳಿಗೆ ದಾರಿ ತೋರಿ ಆರ್ಯ ದೇವರುಗಳ ದೇವಾಲಯಗಳು ಹೆಚ್ಚೆಚ್ಚು ನಿರ್ಮಾಣವಾದವು. ಒಂದು ಕಾಲದಲ್ಲಿ ದೇವಾಲಯಗಳು ಬೆಟ್ಟಗಳ ಮೇಲೆ ಮಾತ್ರ ಇದ್ದು ಅಲ್ಲಿಗೆ ಹೋದ ಜನರು ಸುಮ್ಮನೆ ಕುಳಿತು ಶಾಂತಿ ಪಡೆದುಕೊಂಡು ಹಿಂದಿರುಗುತ್ತಿದ್ದರು. ಆದರೆ ಕಾಲಾಂತರದಲ್ಲಿ ದೇವಾಲಯಗಳು ಎಲ್ಲೆಂದರಲ್ಲಿ ಹುಟ್ಟಿಕೊಂಡು ಅವು ಪೂಜಾರಿಗಳ ಆಡಳಿತಕ್ಕೆ ಒಳಗಾದವು. ಹೀಗೆ ಹೆಚ್ಚಿದ ಭಕ್ತಿಯಿಂದ ಶೂದ್ರ ಚಳುವಳಿಗಳು ನೆಲಕಚ್ಚಿದವು ಎನ್ನುವ ಮಾತಿದೆ.

ಭಾರತೀಯ ಗಣ ಸಮಾಜವನ್ನು ವರ್ಣವ್ಯವಸ್ಥೆಯ ಮೂಲಕ ಒಡೆದ ಮೇಲೆ ನಾಲ್ಕು ವರ್ಣಗಳ ಕೆಳಗಿದ್ದವರನ್ನು ಅಂತ್ಯಜರು, ಪಂಚಮರು ಎಂದು ಕರೆದು, ಜಾತಿ ಉಪಜಾತಿಗಳು ರೂಪುಗೊಂಡು ಮನುಷ್ಯರು ಒಂದಾಗಿ ಬದುಕಲಾರದ ಪರಿಸ್ಥಿತಿ ನಿರ್ಮಾಣವಾಯಿತು. ಜಾತಿ ಆಧಾರಿತ ಸಮಾಜವನ್ನು ಕೆಲವೇ ಜನರು ತಮ್ಮ ಕೈಯಲ್ಲಿಟ್ಟುಕೊಂಡು ತಮಗೆ ಬೇಕಾದಂತೆ ನಡೆಸಿಕೊಳ್ಳುವುದು ಆರಂಭವಾಗಿ ಸಾವಿರಾರು ವರ್ಷಗಳು ಕಳೆದುಹೋದವು. 12ನೇ ಶತಮಾನಕ್ಕೆ ಆ ದಬ್ಬಾಳಿಕೆ ತೀವ್ರವಾಗಿ ನಡೆಯುತ್ತಿದ್ದರಿಂದ ಕೀಳು ಜಾತಿಗಳಿಗೆ ಸೇರಿದ ಕಾಯಕ ಜೀವಿಗಳು ಒಟ್ಟಾಗಿ ತಮ್ಮ ಪ್ರತಿಭಟನೆಯನ್ನು ವಚನ ಸಾಹಿತ್ಯದಲ್ಲಿ ದಾಖಲಿಸಿದರು. ಅದಕ್ಕೆ ಮಂಚವಾಗಿದ್ದು ಬಸವಣ್ಣನವರು ಸ್ಥಾಪಿಸಿದ ಲಿಂಗಾಯಿತ/ವೀರಶೈವ ಧರ್ಮ.

ಆದರೆ ಈ ಬಸವಾದಿಗಳು ಅಥವಾ ವಚನಕಾರರು ಆಶಿಸಿದ ಮನುಷ್ಯ ಮನುಷ್ಯನನ್ನು ಸಮಾನವಾಗಿ ಕಂಡು ಗೌರವಿಸುವ ಸಮಸಮಾಜದ ನಿರ್ಮಾಣದ ಕನಸು ಮುಂದಿನ ಕಾಲಕ್ಕೆ ಉಳಿಯಲಿಲ್ಲ. ಬಸವಣ್ಣನ ಹೆಸರಿನಲ್ಲೇ ಬದುಕುವ ಅನುಯಾಯಿಗಳ ನಡುವೆಯೇ ಅನೇಕ ಜಾತಿ, ಗೋತ್ರ, ಗೊಂದಲಗಳು ಹುಟ್ಟಿ ಮತ್ತೆ ಹಳೆಯ ಸ್ಪೃಶ್ಯಾಸ್ಪೃಶ್ಯತೆಯನ್ನು ನಾಚಿಕೆಯಿಲ್ಲದೆ ಒಪ್ಪಿಕೊಳ್ಳಲಾಯಿತು. ಅದನ್ನು ಅವರೂ ಸೇರಿದಂತೆ ಎಲ್ಲರೂ ಈಗಲೂ ಪಾಲಿಸುತ್ತಿರುವುದು ಶರಣರ ಚಿಂತನೆಗೆ ಮಾಡಿದ ಅನ್ಯಾಯವೆಂದೇ ಹೇಳಬೇಕು. (ಡಾ. ಸಿ. ವೀರಣ್ಣ: ಕಾಯಕಜೀವಿಗಳ ಪರ್ಯಾಯ ಸಂಸ್ಕೃತಿ, ಅಭಾಶಸಾಪ, ಮೈಸೂರು).

ಮೈಸೂರಿನ ರಾಜ ಶ್ರೀ ಕೃಷ್ಣರಾಜ ಒಡೆಯರ್ ದಕ್ಷಿಣ ಭಾರತದಲ್ಲಿ ಮೊದಲಿಗೆ ಹಿಂದುಳಿದವರು, ದುರ್ಬಲರು, ಅಲ್ಪಸಂಖ್ಯಾತರು ಮತ್ತು ಅಸ್ಪೃಶ್ಯರಿಗೆ ಮೀಸಲಾತಿಯನ್ನು ತಂದರು. ಮೈಸೂರು ರಾಜ್ಯವನ್ನು ಭಾರತದಲ್ಲಿಯೇ 'ಮಾದರಿ ರಾಜ್ಯ' ಎಂದು ಕರೆಯುವಷ್ಟು ಅಭಿವೃದ್ಧಿಪಡಿಸಿದರು. 1894ರಲ್ಲಿ ಬಾಲ್ಯವಿವಾಹ ನಿಷೇಧ (8 ವರ್ಷಗಳ ಒಳಗೆ ಮದುವೆ ಮಾಡಬಾರದು) ಮತ್ತು 1923ರಲ್ಲಿ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ

ಕಾನೂನು ತಂದರು. ಮೈಸೂರಿನಲ್ಲಿ ಗೋಪಾಲಸ್ವಾಮಿ ಅಯ್ಯರ್ ಮತ್ತು ಬೆಂಗಳೂರಿನಲ್ಲಿ ಗೋವಿಂದಾಚಾರ್ಯ ಸ್ವಾಮಿ ಅಸ್ಪೃಶ್ಯತೆಯನ್ನು ನಿವಾರಿಸುವ ಕಾರ್ಯದಲ್ಲಿ ತೊಡಗಿಕೊಂಡರು. ಮೈಸೂರು ದಿವಾನರಾದ ಕೆ. ಶೇಷಾದ್ರಿಯವರು ಅಸ್ಪೃಶ್ಯರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆದು ಅವುಗಳಲ್ಲಿ ಸರ್. ವಿಶ್ವೇಶ್ವರಯ್ಯನವರು ಸ್ಕಾಲರ್‌ಶಿಪ್ ಕೊಡುವ ವ್ಯವಸ್ಥೆ ಮಾಡಿದರು. ತಗಡೂರು ರಾಮಚಂದ್ರರಾವ್ ಅವರು ಕೂಡ ಅಸ್ಪೃಶ್ಯತೆಯನ್ನು ನಿವಾರಿಸುವ ಕೆಲಸದಲ್ಲಿ ತೊಡಗಿಕೊಂಡು, ಟಿ. ನರಸಿಪುರದ ಗುಂಜ ನಂಜುಂಡಸ್ವಾಮಿ ದೇವಾಲಯದಲ್ಲಿ ದಲಿತರಿಗೆ ಪ್ರವೇಶ ಪಡೆಯುವಲ್ಲಿ ಸಫಲರಾಗಿದ್ದರು. ಎಂ. ವೆಂಕಟಕೃಷ್ಣಯ್ಯ (ತಾತಯ್ಯ) ಸಹ ದಲಿತರ ವಿದ್ಯಾಭ್ಯಾಸ ಮತ್ತು ಉದ್ಯೋಗ ತರಬೇತಿಗೆ ತಕ್ಕಮಟ್ಟಿಗೆ ಶ್ರಮಿಸಿದ್ದರು.

1910ರವರೆಗೂ ಮೈಸೂರಿನ ಆಸ್ಥಾನದಲ್ಲಿ ತಮಿಳು/ತೆಲುಗು ಬ್ರಾಹ್ಮಣರೆ ದಿವಾನರಾಗಿದ್ದ ಕಾರಣ, ಕನ್ನಡ ಬ್ರಾಹ್ಮಣರಿಗೆ ಅವಕಾಶ ಕೊಡಬೇಕೆಂದು ಕನ್ನಡಿಗರು ಒತ್ತಾಯ ತಂದರು. ಇದರಿಂದ 1910ರಲ್ಲಿ ಮೊದಲ ಬಾರಿಗೆ ಕನ್ನಡದ ಬ್ರಾಹ್ಮಣರಾದ ಸರ್. ಎಂ. ವಿಶ್ವೇಶ್ವರಯ್ಯನವರು ಮೈಸೂರಿನ ಮೊದಲ ದಿವಾನರಾದರು. ಅರಮನೆಯಲ್ಲಿ ಬ್ರಾಹ್ಮಣರ ಪ್ರಬಲತೆಯನ್ನು ವಿರೋಧಿಸಿದ ಹಿಂದುಳಿದವರು/ದಲಿತರು/ ಅಲ್ಪಸಂಖ್ಯಾತರು ತಮಗೆ ಮೀಸಲಾತಿ ದೊರಕಬೇಕೆಂದು ಒತ್ತಾಯ ತಂದಾಗ ಮೈಸೂರು ಮಹಾರಾಜರು 'ಮಿಲ್ಲರ್ ಸಮಿತಿ' ರಚಿಸಿದರು. ಮಿಲ್ಲರ್ ಇವರಿಗೆಲ್ಲ ಮೀಸಲಾತಿ ಸಿಗಬೇಕೆಂದು ತೀರ್ಪು ನೀಡಿದಾಗ ವಿಶ್ವೇಶ್ವರಯ್ಯ ತಮ್ಮ ವಿರೋಧ ವ್ಯಕ್ತಪಡಿಸಿ ದಿವಾನ್ ಕೆಲಸಕ್ಕೆ ರಾಜಿನಾಮೆ ನೀಡಿ ಹೊರಬಂದರು.

ಮೈಸೂರು ಮಹಾರಾಜರು 1881ರಲ್ಲಿಯೇ ಹುಸ್ಕೂರು, ನರಸಾಪುರದಲ್ಲಿ ಅಸ್ಪೃಶ್ಯರಿಗೆ ಶಾಲೆಗಳನ್ನು ಸ್ಥಾಪಿಸಿದರು. ಮೈಸೂರು ಸರ್ಕಾರ ಖಾಸಗಿಯವರಿಗೂ ಶಾಲೆಗಳನ್ನು ತೆರೆಯಲು ಅವಕಾಶ ನೀಡಿದಾಗ ಬೇಲೂರು, ತುಮಕೂರು, ಹಾಸನ, ಮೈಸೂರು, ಆನೇಕಲ್‌ನಲ್ಲಿ ಇದೇ ರೀತಿಯ ಶಾಲೆಗಳನ್ನು ತೆರೆಯಲಾಯಿತು. ಈ ಶಾಲೆಗಳ ವಿದ್ಯಾರ್ಥಿಗಳು ಇಲ್ಲಿಂದ ಸರ್ಕಾರಿ ಶಾಲೆ/ಕಾಲೇಜುಗಳಿಗೆ ಸೇರುವ ವ್ಯವಸ್ಥೆಯನ್ನು ಮಾಡಲಾಯಿತು. 1903–04ರಲ್ಲಿ ಮೈಸೂರು ರಾಜ್ಯದಲ್ಲಿ 234 ಶಾಲೆಗಳಲ್ಲಿ ಎಲ್ಲಾ ಕೋಮಿನ 12,342 ವಿದ್ಯಾರ್ಥಿಗಳು ಓದುತ್ತಿದ್ದರು. ಮೈಸೂರಿನ ಮಹಾರಾಜರು ಅಶೋಕಪುರಂನಲ್ಲಿ ದಲಿತರಿಗೆ ನೆಲ ನೀಡಿ ವ್ಯವಸಾಯ ಮಾಡಲು ಅವಕಾಶ ಮಾಡಿಕೊಟ್ಟರು. ಈ ಪ್ರದೇಶವನ್ನು ಇಂದಿಗೂ 'ಮೈಸೂರು ಚಿಗುರೆಲೆ ತೋಟ' ಎಂದು ಕರೆಯುತ್ತಾರೆ. 1905ರಲ್ಲಿ ವೀರಶೈವರು, 1906ರಲ್ಲಿ ಒಕ್ಕಲಿಗರು ಶಾಲೆ/ಹಾಸ್ಟಲುಗಳನ್ನು ಮೊದಲಿಗೆ ಪ್ರಾರಂಭಿಸಿದರು. (Nirmal Raj, Rajarishi Krishnaraj Wodeyar IV, EPRA Trust, Journal, March 2015).

ಇದೆಲ್ಲದರ ನಡುವೆಯೂ ಭಾರತಕ್ಕೆ ಸ್ವಾತಂತ್ರ್ಯ ಬಂದು 71 ವರ್ಷಗಳಾದರೂ ಜಾತಿ, ಅಸ್ಪೃಶ್ಯತೆಯ ತಾರತಮ್ಯ ಗ್ರಾಮೀಣ ಭಾರತದಲ್ಲಿ ಹೆಚ್ಚಾಗಿ ಬದಲಾಗಿಲ್ಲ. ದಲಿತರ ಮೇಲೆ ಅತ್ಯಾಚಾರ, ಕೊಲೆ, ದೈಹಿಕ ಹಿಂಸೆ ಮಾಧ್ಯಮಗಳಲ್ಲಿ ಬೇಗನೆ ಕಾಣಿಸಿಕೊಂಡರೂ, ಸಾಮಾಜಿಕ ಮತ್ತು ಭಾವನಾತ್ಮಕ ಬಹಿಷ್ಕಾರಗಳು ಎಂದಿನಂತೆ ಬೆಳಕಿಗೆ ಬರದೇ ಹೋಗುತ್ತಿವೆ. ದಲಿತರಿಗೆ ಚಹ ಅಂಗಡಿಗಳಲ್ಲಿ ಪ್ರತ್ಯೇಕ ಗ್ಲಾಸುಗಳನ್ನು ಇಟ್ಟಿರುವುದು,

ಬಾವಿ, ಕೊಳಾಯಿಗಳ ಹತ್ತಿರ ಇತರರಿಂದ ನೀರು ಹಾಕಿಸಿಕೊಳ್ಳುವುದು; ದೇವಸ್ಥಾನ, ಇತರೆ ಜಾತಿಗಳ ಮನೆಗಳ ಹೊರಗೆ ನಿಲ್ಲುವುದು ಇತ್ಯಾದಿ ಕರ್ನಾಟಕದ ಎಲ್ಲಾ ಹಳ್ಳಿಗಳಲ್ಲೂ ಇಂದಿಗೂ ಇದೆ. ಪಟ್ಟಣ/ನಗರಗಳ ಹೋಟಲುಗಳು ಮತ್ತು ದೇವಸ್ಥಾನಗಳು ಇದಕ್ಕೆ ಅಪವಾದ ಎನ್ನಬಹುದು. ಈ ಕಾರಣದಿಂದಲೇ ಹಳ್ಳಿಗಳೆಲ್ಲ ನಶಿಸಿಹೋಗುತ್ತಿವೆ ಎನ್ನುವುದು ಸುಳ್ಳಲ್ಲ. ಕೃಷಿ ಅವಸಾನ ಹಿಡಿಯುತ್ತಿರುವುದಕ್ಕೆ ಇದೂ ಒಂದು ಕಾರಣವಾಗಿದೆ. ಆದರೆ ಇದು ಪ್ರಬಲ ಜಾತಿಗಳ ಜನರಿಗೆ ಅರ್ಥವಾಗುತ್ತಿಲ್ಲ. ಅವರು ಸತ್ತೇಹೋದರೂ ಪರವಾಗಿಲ್ಲ, ಅವರಿಗೆ ಜಾತಿಯೇ ಮುಖ್ಯವಾಗಿದೆ.

ರಾಜ್ಯದ ಬಹಳಷ್ಟು ಸರಕಾರಿ ಶಾಲೆ/ಕಾಲೇಜುಗಳಲ್ಲಿ ಶೌಚಾಲಯ ಸ್ವಚ್ಛ ಮಾಡಲು ಪ್ರತ್ಯೇಕ ಕೆಲಸಗಾರರಿಲ್ಲ. ಹಳ್ಳಿಗಳ ಪ್ರಬಲ ಜಾತಿಗಳ ಅಧ್ಯಾಪಕರು/ವಿದ್ಯಾರ್ಥಿಗಳು ದಲಿತರ ಮಕ್ಕಳನ್ನು ಸ್ವಚ್ಛ ಮಾಡಲು ಒತ್ತಾಯ ಮಾಡುವುದು ಸಾಮಾನ್ಯವಾಗಿದೆ. ಬಹಳಷ್ಟು ಕಡೆ ಸ್ಮಶಾನ, ಪಾಯಿಖಾನೆ, ಸಮಾಧಿ ಅಗೆಯುವ ಕೆಲಸಗಳನ್ನು ಇಂದಿಗೂ ದಲಿತರೇ ಮಾಡುತ್ತಿದ್ದಾರೆ. ಬಹಳ ಕಡೆ ಹಳ್ಳಿಗಳಲ್ಲಿ ಭಜಂತ್ರಿಗಳು ಈಗಲೂ ದಲಿತರಿಗೆ ಊದಲು ಕತ್ತರಿಸುವುದಿಲ್ಲ. ಕಾರಣ ಹಳ್ಳಿಗಳಲ್ಲಿ ದಲಿತ ಸಮುದಾಯಕ್ಕೆ ಸೇರಿದವರೇ ಈ ಕೆಲಸವನ್ನು ಮಾಡುತ್ತಾರೆ. ಈಗಿನ ಯುವ ಜನಾಂಗ ಇದನ್ನು ಪ್ರಶ್ನಿಸುತ್ತಿದ್ದರೂ, ಹಳ್ಳಿಯ ಪ್ರಬಲ ಜನಾಂಗಗಳು ಅಡ್ಡ ನಿಲ್ಲುತ್ತಿವೆ. ಹಳ್ಳಿಗಳಲ್ಲಿ ನಡೆಯುವ ಸಾರ್ವಜನಿಕ ಸಮಾರಂಭಗಳಲ್ಲಿ ದಲಿತರು ಪ್ರತ್ಯೇಕವಾಗಿ ಊಟಕ್ಕೆ ಕೂರಬೇಕಾಗುತ್ತದೆ. ಇಂದಿನ ಮುಖ್ಯಮಂತ್ರಿ ಸಿಧ್ಧರಾಮಯ್ಯನವರು ಓದಿದ ಕುಪ್ಪೆಗಾಲ ಶಾಲೆಯಲ್ಲಿ ಇಂದಿಗೂ ಅಸ್ಪೃಶ್ಯತೆಯನ್ನು ಆಚರಿಸಲಾಗುತ್ತಿದೆ. ಸರ್ಕಾರ ನೀಡುವ ಮಧ್ಯಾಹ್ನದ ಊಟವನ್ನು ದಲಿತ ಹೆಣ್ಣುಮಕ್ಕಳು ಮಾಡುವುದರಿಂದ ಪ್ರಬಲ ಜಾತಿಗಳ ಮಕ್ಕಳು ಅವರ ಪೋಷಕರ ಒತ್ತಾಯದಿಂದ ತಿನ್ನದೇ ಇರುವ ಎಷ್ಟೋ ಶಾಲೆಗಳಿವೆ.

1993ರಲ್ಲಿ ಮೈಸೂರು ಜಿಲ್ಲೆಯ ಬದನವಾಳುವಿನಲ್ಲಿ ಮೂವರು ದಲಿತರನ್ನು ಲಿಂಗಾಯಿತರು ಹೊಡೆದು ಸಾಯಿಸಿ ದೇಶವನ್ನೇ ದಿಗ್ಭ್ರಾಂತಿಗೊಳಿಸಿದ್ದರು. ಸತ್ತವರಲ್ಲಿ ಒಬ್ಬರು ಶಾಲೆಯ ಮುಖ್ಯ ಉಪಾಧ್ಯಾಯರು ಇದ್ದರು. ಇವರು ಮಾಡಿದ ತಪ್ಪೆಂದರೆ ಬದನವಾಳುವಿನಲ್ಲಿ ಹೊಸದಾಗಿ ಕಟ್ಟಿದ ದೇವಾಲಯದಲ್ಲಿ ಪೂಜೆ ಮಾಡಲು ಅವಕಾಶ ಮಾಡಿಕೊಡಿ ಎಂದು ಕೇಳಿದ್ದು. ಈ ಕಾರಣದಿಂದ ಉಮ್ಮತ್ತೂರಿನ ಮನೆಗಳ ಮೇಲೆ ದಲಿತರು ದಾಳಿ ಮಾಡಿದರು. ಇದರಿಂದ ಇಬ್ಬರು ಕಾಂಗ್ರೆಸ್ ನಾಯಕರ ನಡುವೆ ಜಗಳ ಶುರುವಾಗಿ ಇಡೀ ರಾಜ್ಯದಲ್ಲಿ ದಲಿತರು ಮತ್ತು ಲಿಂಗಾಯಿತರ ನಡುವೆ ಹೊಗೆ ಹತ್ತಿಕೊಂಡಿತು. ಈ ಕೇಸಿನಲ್ಲಿ 20 ಜನರಿಗೆ ನ್ಯಾಯಾಲಯ 17 ವರ್ಷಗಳ ನಂತರ ಜೀವಾವಧಿ ಶಿಕ್ಷೆ ನೀಡಿತು. (B.R.Srikant, Deccan Chronicle, 2.12.2014).

ಜಾತಿವಾದಿಗಳು ಇಡೀ ಜೀವನ ಜೈಲಿನಲ್ಲಿ ಕೊಳೆತು ಸತ್ತರೂ ಸರಿ ದಲಿತರ ಮೇಲೆ ದಾಳಿ ಮಾಡುವುದನ್ನು ಮಾತ್ರ ನಿಲ್ಲಿಸುವುದಿಲ್ಲ ಎನ್ನುವ ಎರಡು ಘಟನೆಗಳು ಕರ್ನಾಟಕದಲ್ಲಿ ಮತ್ತೆ ಮರುಕಳಿಸಿದವು. ಬದನವಾಳು ಘಟನೆಯ ನಂತರ ಸರಿಯಾಗಿ ಏಳು ವರ್ಷಗಳ ನಂತರ 2000ರಲ್ಲಿ ಕೋಲಾರ ಜಿಲ್ಲೆಯ ಶ್ರೀನಿವಾಸಪುರದ ಹತ್ತಿರ ಕಂಬಾಲಪಲ್ಲಿಯಲ್ಲಿ ನಡೆಯಿತು. ಈಗ ಒಕ್ಕಲಿಗರ ಸರದಿ. ಏಳು ಜನ ದಲಿತರನ್ನು ಮನೆಗಳ ಒಳಗೆ ಹಾಕಿ ಬೆಂಕಿ ಇಟ್ಟು ಸುಡಲಾಯಿತು. ನಂತರ ಅದೇ ಒಕ್ಕಲಿಗ ಗುಂಪಿಗೆ

ಸೇರಿದ ರೆಡ್ಡಿಗಳು ಕೆಜಿಎಫ್ ಹತ್ತಿರದ ನಾಗಲಾಹಳ್ಳಿಯಲ್ಲಿ ಒಬ್ಬ ದಲಿತ ಮಹಿಳೆ ಮತ್ತು ಆಕೆಯ ಇಬ್ಬರು ಗಂಡು ಮಕ್ಕಳನ್ನು ಬರ್ಬರವಾಗಿ ಕೊಲೆ ಮಾಡಿದರು. ಈ ಮಹಿಳೆ ಮಾಡಿದ ತಪ್ಪೆಂದರೆ, ಆಕೆ ತನ್ನ ಹೊಲವನ್ನು ರೆಡ್ಡಿಗಳಿಗೆ ಕೊಡಲಿಲ್ಲ ಎಂಬುದು.

ಮಾರ್ಚ್(2015) ತಿಂಗಳಿನಲ್ಲಿ ಚಾಮರಾಜನಗರದ ಸಂತೆಮರಹಳ್ಳಿಯಲ್ಲಿ ಇಬ್ಬರು ದಲಿತ ಕೃಷಿ ಕಾರ್ಮಿಕರ ರುಂಡಗಳನ್ನು ಕತ್ತರಿಸಿ ಚೀಲದಲ್ಲಿ ಕಟ್ಟಿ ಬಿಸಾಕಲಾಯಿತು. ಈ ಕೊಲೆಗಳ ವಿಚಾರಣೆಯನ್ನು ಸಿಐಡಿ ನಡೆಸಲಿ ಎಂದು ಕೆಲವರು ಮೆರವಣಿಗೆ ನಡೆಸಿ ಕೇಳಿದ್ದನ್ನು ಬಿಟ್ಟರೆ, ಸಿಬಿಐಗೆ ವಹಿಸಬೇಕೆಂದು ಯಾವ ಸಾಮಾಜಿಕ ಸಂಘಟನೆ, ರಾಜಕೀಯ ಪಕ್ಷ ರಾಜ್ಯದಲ್ಲಿ ಪ್ರತಿಭಟನೆ ಮಾಡಲಿಲ್ಲ. ಅದೇ ಸಮಯದಲ್ಲಿ ನಡೆದ ಹಿಂದಿನ ಕೋಲಾರ ಜಿಲ್ಲೆ ಜಿಲ್ಲಾ ಅಧಿಕಾರಿಯ ಕೊಲೆ/ಆತ್ಮಹತ್ಯೆಯ ಬಗ್ಗೆ ಇಡೀ ರಾಜ್ಯ ಎದ್ದು ನಿಂತು ಹೋರಾಟ ನಡೆಸಿತು. ರಾಜ್ಯದ ಮುಖ್ಯಮಂತ್ರಿ ರಾಜಿನಾಮೆಯವರೆಗೂ ಹೋಗಿತ್ತು. ಆದರೆ ಸಂತೆಮರಹಳ್ಳಿಯ ಈ ಇಬ್ಬರು ದಲಿತರ ಕೊಲೆಯ ಬಗ್ಗೆ ಆಂದೋಲನ ಮಾಡುವುದಿರಲಿ ಕನಿಷ್ಠ ಅದರ ಬಗ್ಗೆ ಮಾತನಾಡಲು ಸಹ ಯಾರಿಗೂ ಸಮಯವಿರಲಿಲ್ಲ; ದಲಿತ ಸಂಘಟನೆಗಳು, ದಲಿತ ರಾಜಕಾರಣಿಗಳೂ ಸೇರಿ. ದಲಿತರ ಪ್ರಾಣವೆಂದರೆ ದೇಶದಲ್ಲಿ ಬೆಲೆಯೇ ಇಲ್ಲದೆ ಕ್ಷುಲ್ಲಕವಾಗಿಬಿಟ್ಟಿದೆ.

ಸೋಮೇಶ್ ಎನ್ನುವ ಹುಡುಗ ಪರಿಶಿಷ್ಟ ಹಾಗೂ ಅಸ್ಪೃಶ್ಯ ಜಾತಿಗೆ ಸೇರಿದ 'ಹಂದಿಜ್ಯೋಗಿ'. ಇವನಿಗೆ ಕರ್ನಾಟಕ ಸರ್ಕಾರದ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಹೇಗೋ ಕೆಲಸ ಸಿಕ್ಕಿತು. ಈತನನ್ನು ಕನಕಪುರದ ಕಬ್ಬಾಳುವಿನಲ್ಲಿರುವ ಕಬ್ಬಾಳಮ್ಮ ದೇವಸ್ಥಾನಕ್ಕೆ ವಿಶೇಷ ಅಧಿಕಾರಿಯಾಗಿ ನೇಮಿಸಲಾಯಿತು. ಈತ ಕೆಲಸಕ್ಕೆ ಸೇರಿಕೊಳ್ಳಲು ದೇವಸ್ಥಾನಕ್ಕೆ ಹೋದರೆ ಒಳಕ್ಕೆ ಸೇರಿಸಿಕೊಳ್ಳಲಿಲ್ಲ. ಕಾರಣ ಸಚಿವರೊಬ್ಬರ ಸಂಬಂಧಿ ಎಂದು ಹೇಳಿಕೊಳ್ಳುವ ದೇವಸ್ಥಾನದ ಯಜಮಾನ 'ನೀನು ದೇವಸ್ಥಾನದ ಹೊರಗಡೆಯೇ ಇದ್ದು ಸಂಬಳ ತೆಗೆದುಕೊಂಡು ಹೋಗು' ಎಂದನಂತೆ. ಇಂಥ ಪ್ರಭಾವಿಗಳನ್ನು ಎದುರು ಹಾಕಿಕೊಳ್ಳುವ ಧೈರ್ಯ ಮಾಡಲಾರದೆಹೋದ ಸೋಮೇಶ ಬಾಗಿಲಲ್ಲೇ ನಿಂತು ಆರು ತಿಂಗಳ ಕಾಲ ಸಂಬಳ ತೆಗೆದುಕೊಂಡ. ನಂತರವೂ ಸೋಮೇಶನಿಗೆ ದೇವಾಲಯದ ಪ್ರವೇಶ ದೊರಕಲಿಲ್ಲ. ಕೊನೆಗೆ ಸಂಬಳವೂ ಇಲ್ಲದಾಗಿ ಕೆಲಸ ಇಲ್ಲದೆ ಬೀದಿಪಾಲಾದ. ಕೆಲವರು ಸೋಮೇಶನಿಗೆ ಸಮಸ್ಯೆಯನ್ನು ಎಲ್ಲೂ ಹೇಳದಂತೆ 'ದೇವಾಲಯದ ವಿರುದ್ಧ ದೂರು ತೆಗೆದರೆ ನಿನ್ನನ್ನೆ ಇಲ್ಲ ಎನಿಸಿಬಿಡ್ತಾರೆ' ಅಂತ ಹೆದರಿಸಿ ಬುದ್ಧಿ ಹೇಳಿದರು. ಹುಡುಗ ವಿಧಿಯಿಲ್ಲದೆ ತನ್ನ ಮೇಲಧಿಕಾರಿಗಳಿಗೆ ತಿಳಿಸಲು ಯತ್ನಿಸಿದ, ಆದರೆ ಯಾರೂ ಕೇಳಿಸಿಕೊಳ್ಳಲಿಲ್ಲ. ಹೀಗೆ ಕಂಬಕಂಬವೂ ಅಲೆದಾಡುತ್ತಿದ್ದ ಈ ಹುಡುಗನಿಗೆ ಕೆಲಸ ಮಾಡದೆ ಇರುವ ಕಾರಣ ಕೇಳಿ ಧಾರ್ಮಿಕ ದತ್ತಿ ಇಲಾಖೆ ನೋಟೀಸೊಂದನ್ನು ನೀಡಿತು.

ಈ ಸೋಮೇಶನ ವಿಷಯವನ್ನು ಹಿಂದುಳಿದ ಆಯೋಗದ ಅಧ್ಯಕ್ಷ ಹೀಗೆ ಹೇಳುತ್ತಾರೆ : "ತಬ್ಬಿಬ್ಬಾದ ಈತ ನನ್ನ (ಸಿ. ಎಸ್. ದ್ವಾರಕಾನಾಥ್) ಬಳಿಗೆ ಬಂದ. ಇವನ ಹತ್ತಿರ ಜಾತಿ ಕಾರಣಕ್ಕೆ ದೇವಾಲಯದ ಒಳಕ್ಕೆ ಬಿಡಲಿಲ್ಲ ಎಂಬ ಕಾರಣದ ಬಗ್ಗೆ ಯಾವ ದಾಖಲೆಗಳೂ ಇರಲಿಲ್ಲ. ಆದರೆ ಕೆಲವು ತಿಂಗಳು ಸಂಬಳ ತೆಗೆದುಕೊಂಡಿರುವುದಕ್ಕೆ ಮಾತ್ರ ಆಧಾರಗಳಿದ್ದವು. ಇದರ ನಡುವಿನ ಸತ್ಯ ಅನೇಕ ನ್ಯಾಯಾಲಯಗಳಿಗೆ

ಅರ್ಥವಾಗಲಿಲ್ಲ. ಇದು ಅಸ್ಪೃಶ್ಯತೆಯ ನೇರ ಆಚರಣೆ ಎಂದರೂ ಮನವರಿಕೆ ಆಗುವುದಿಲ್ಲ. ನಾನು ಅವರ ಇಲಾಖೆಯ ಮೇಲಧಿಕಾರಿಗಳಿಗೆ ಎಲ್ಲವನ್ನು ವಿವರಿಸಿ ಸೋಮೇಶನ ಹೆಸರಿನಲ್ಲೇ ಪತ್ರಗಳನ್ನು ಕೊಡಿಸಿದೆ, ಪ್ರಯೋಜನವಾಗಲಿಲ್ಲ. ನಾನೇ ಮಾತಾಡಿದ್ದೂ ಆಯಿತು. ಕಡೆಗೆ ಇಲಾಖೆಯ ಮಂತ್ರಿ, ಮುಖ್ಯಮಂತ್ರಿಗಳಿಗೂ ಬರೆದಿದ್ದಾಯಿತು. ಈ ಹುಡುಗನಿಗೆ ಜಾತಿ ಕಾರಣಕ್ಕೆ ಕೆಲಸ ಮಾಡುವ ಹಕ್ಕು ಇಲ್ಲವೇ? ಇವನ ಅಸಹಾಯಕತೆಗೆ ಪರಿಹಾರವಿಲ್ಲವೇ? ಅಸ್ಪೃಶ್ಯತೆಯ ಆಚರಣೆಗೆ ಮದ್ದಿಲ್ಲವೇ? ಈಚೆಗೆ ಕಚೇರಿಗೆ ಬಂದ ಈತ ರೋದಿಸುತ್ತಾ 'ರೈತರು ಯಾಕೆ ಆತ್ಮಹತ್ಯೆ ಮಾಡಿಕೊಳ್ತಾರೆ ಅಂತ ಈಗ ಅರ್ಥವಾಗ್ತಿದೆ ಸಾರ್' ಅಂತ ಅಳತೊಡಗಿದ" – (ಸಿ. ಎಸ್. ದ್ವಾರಕಾನಾಥ್ Facebook, 25.8.15.) ಇಂಥ ಘಟನೆಗಳು ದೇಶದಾದ್ಯಂತ ಪ್ರತಿ ದಿನವೂ ಲೆಕ್ಕವಿಲ್ಲದಷ್ಟು ನಡೆಯುತ್ತಿವೆ. ಈ ಘಟನೆಯಿಂದ ಏಳುವ ಮುಖ್ಯ ಪ್ರಶ್ನೆಯೆಂದರೆ ದಲಿತರ ನಿಜವಾದ ಶತ್ರುಗಳು ಶೂದ್ರರೇ ಅಥವಾ ಸಮಾಜದಲ್ಲಿ ಅವರಿಗಿಂತ ಉನ್ನತ ಸ್ಥಾನದಲ್ಲಿರುವ ಮೇಲ್ಜಾತಿಗಳೇ ಎನ್ನುವುದು.

ಕರ್ನಾಟಕ ರಾಜ್ಯದ ದಲಿತ ಸಂಘಟನೆಗಳೆಲ್ಲ ಒಂದು 'ದಸಂಸ ಒಕ್ಕೂಟ'ವನ್ನು ಮಾಡಿಕೊಂಡಿರುವುದು ಸ್ವಲ್ಪ ಸಮಾಧಾನ ತರುವಂತಹ ಸಂಗತಿಯಾಗಿದೆ. ಈ ಒಕ್ಕೂಟ ತನ್ನ ಮೊದಲ ಸಭೆಯಲ್ಲಿ ಜಾತಿ ಜನಗಣತಿ ಹಾಗೂ ಮುಖ್ಯಮಂತ್ರಿ ಸಿದ್ಧರಾಮಯ್ಯನವರು 2015–16ರ ಬಜೆಟ್ಟಿನಲ್ಲಿ ದಲಿತರಿಗೆ ಮೀಸಲಾಗಿರಿಸಿರುವ 16,536 ಕೋಟಿ ರೂ. ವಿನಿಯೋಗ ಕುರಿತು ಚರ್ಚಿಸುತ್ತಿತ್ತು. 2016–17ರ ಬಜೆಟ್ಟಿನಲ್ಲಿ ದಲಿತರ ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿ 15,832 ಕೋಟಿ ಕಾಯ್ದಿರಿಸಿತ್ತು. ಈ ಹಿಂದೆ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪನವರು ಈ ನಿಟ್ಟಿನಲ್ಲಿ ಮೊದಲ ಬಾರಿಗೆ 8,000 ಕೋಟಿ ಮೀಸಲಿಟ್ಟಿದ್ದರು. ಈ ಮೊತ್ತ ಈ ತನಕ ದೇಶದ ಯಾವುದೇ ರಾಜ್ಯ ಮಂಜೂರು ಮಾಡದಷ್ಟು ಮೊತ್ತ.

ಈ ಮೊತ್ತದ ಬಳಕೆಯ ಪ್ರಕ್ರಿಯೆಯನ್ನು ದಸಂಸ ಒಕ್ಕೂಟ ಹಾಗೂ ಇನ್ನಿತರ ದಲಿತ ಸಂಘಟನೆಗಳ ತಜ್ಞರ ಮಾರ್ಗದರ್ಶನ, ನೆರವು ಪಡೆದುಕೊಳ್ಳಬೇಕಿದೆ. ಈ ಬಜೆಟ್, ಸಮಾಜ ಕಲ್ಯಾಣ ಇಲಾಖೆ ಮಂತ್ರಿಗಳು ಹಾಗೂ ಮುಖ್ಯಮಂತ್ರಿಗಳ ಬದ್ಧತೆಯ ಜೊತೆಗೆ ದಲಿತ ಚಳುವಳಿಯ ಹಲವು ವರ್ಷಗಳ ಒತ್ತಾಯದ ಫಲವೂ ಆಗಿದೆ. ದಲಿತ ಸಂಘಟನೆಗಳು ನಿರಂತರವಾಗಿ ಮಂಡಿಸುತ್ತಾ ಬಂದ ಬಜೆಟ್ ಪೂರ್ವದ ಬೇಡಿಕೆಗಳು ಹಾಗೂ ಬಜೆಟ್ ಮಂಡನೆಯ ನಂತರದ ವಿಶ್ಲೇಷಣೆಗಳು, ಬೆಂಗಳೂರಿನ 'ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ'ಯ 'ಸಾಮಾಜಿಕ ಪ್ರತ್ಯೇಕತೆ ಹಾಗೂ ಒಳಗೊಳ್ಳುವಿಕೆಯ ಅಧ್ಯಯನ ಕೇಂದ್ರ' ನಡೆಸಿದ ಬಜೆಟ್‌ಪೂರ್ವ ಚಿಂತನಾ ಸಭೆಗಳು ಈ ಬಜೆಟ್ ಪಡೆಯುವಲ್ಲಿ ನೆರವಾಗಿವೆ. (ನಟರಾಜ್ ಹುಳಿಯಾರ್, 15.4.15, ಪ್ರಜಾವಾಣಿ).

National Campaign of Dalit Human Rights (2014)ರಲ್ಲಿ ನಡೆಸಿದ ಸಮೀಕ್ಷೆಯಲ್ಲಿ ದಲಿತರು ಈಗಲೂ ದೇಶದಲ್ಲಿ 140 ರೀತಿಯ ಅಸ್ಪೃಶ್ಯತೆಯ ಆಚರಣೆಗಳು ಮತ್ತು ತಾರತಮ್ಯಗಳನ್ನು ಅನುಭವಿಸುತ್ತಿದ್ದಾರೆ ಎನ್ನುವುದನ್ನು ಪಟ್ಟಿಮಾಡಿದೆ. ಹನ್ನೊಂದು ರಾಜ್ಯಗಳ 565 ಹಳ್ಳಿಗಳಲ್ಲಿ ನಡೆಸಲಾದ ಈ ಸಮೀಕ್ಷೆಯಂತೆ ಶೇ.38

ಸರಕಾರಿ ಶಾಲೆಗಳಲ್ಲಿ ದಲಿತರ ಮಕ್ಕಳನ್ನು ಪ್ರತ್ಯೇಕವಾಗಿ ಕೂರಿಸಲಾಗುತ್ತಿದೆ. ಶೇ.25 ಪಡಿತರ ಅಂಗಡಿಗಳಲ್ಲಿ ಹೊರಗೆ ನಿಲ್ಲಿಸುತ್ತಾರೆ. ಶೇ.33 ಸಾರ್ವಜನಿಕ ಆರೋಗ್ಯ ಕಾರ್ಯಕರ್ತೆಯರು ದಲಿತರ ಮನೆಗಳಿಗೆ ಹೋಗುವುದಿಲ್ಲ. ಶೇ.23.5 ದಲಿತರ ಮನೆಗಳಿಗೆ ಟಪಾಲು ಕೊಡದೆ ಅವರೆ ಹೋಗಿ ಟಪಾಲು ಕಚೇರಿಯಲ್ಲಿ ಪತ್ರಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಶೇ.38 ಗ್ರಾಮೀಣ ಕಚೇರಿಗಳಲ್ಲಿ ದಲಿತರು ಪ್ರತ್ಯೇಕವಾಗಿ ಕುಳಿತುಕೊಳ್ಳುತ್ತಾರೆ. ಶೇ.14.4 ಹಳ್ಳಿಗಳಲ್ಲಿ ಪಂಚಾಯಿತಿ ಕಚೇರಿಗಳ ಒಳಗೆ ದಲಿತರನ್ನು ಬಿಟ್ಟುಕೊಳ್ಳುವುದಿಲ್ಲ. ಶೇ.12 ಹಳ್ಳಿಗಳಲ್ಲಿ ಚುನಾವಣೆಯ ಮತಗಟ್ಟೆಗಳ ಒಳಗೆ ದಲಿತರನ್ನು ಬಿಡುವುದಿಲ್ಲ ಪ್ರತ್ಯೇಕ ಸಾಲಿನಲ್ಲಿ ನಿಲ್ಲಬೇಕಾಗುತ್ತದೆ.

ಶೇ. 44.4 ಹಳ್ಳಿಗಳಲ್ಲಿ ದಲಿತರು ಅವರಿಗೆ ಮೀಸಲಾದ ಪ್ರತ್ಯೇಕ ಬಾವಿಗಳಲ್ಲಿ ನೀರು ತೆಗೆದುಕೊಳ್ಳಬೇಕು. ಶೇ.35.5 ಹಳ್ಳಿಗಳ ಅಂಗಡಿಗಳವರು ಸಾಮಾನುಗಳನ್ನು ತಂದು ಹೊರಗೆ ಇಟ್ಟಾಗ ದಲಿತರು ಅವುಗಳನ್ನು ಎತ್ತಿಕೊಂಡು ಪಾತ್ರೆ / ನೆಲದಲ್ಲಿ ಹಣ ಇಡಬೇಕು. ಶೇ.73 ಹಳ್ಳಿಗಳಲ್ಲಿ ಇತರ ಜಾತಿಗಳ ಮನೆಗಳ ಒಳಕ್ಕೆ ದಲಿತರನ್ನು ಬಿಟ್ಟುಕೊಳ್ಳುವುದಿಲ್ಲ. ಶೇ.70 ಹಳ್ಳಿಗಳಲ್ಲಿ ಇತರರು ದಲಿತರ ಜೊತೆಗೆ ಕುಳಿತು ತಿನ್ನುವುದಿಲ್ಲ. ಶೇ.47 ಹಳ್ಳಿಗಳಲ್ಲಿ ದಲಿತರ ಮದುವೆ ಮೆರವಣಿಗೆಯನ್ನು ಇತರ ಜಾತಿಗಳ ಜನರು ತಮ್ಮ ಬೀದಿಗಳಲ್ಲಿ ಹೋಗಲು ಬಿಡುವುದಿಲ್ಲ. ಶೇ.10–20 ಹಳ್ಳಿಗಳಲ್ಲಿ ದಲಿತರು ಹೊಸ ಬಟ್ಟೆ, ಚಪ್ಪಲಿ, ಕನ್ನಡಕ ಧರಿಸಲು ಬಿಡುವುದಿಲ್ಲ. ಸರಾಸರಿ ಶೇ.65 ಹಳ್ಳಿಗಳಲ್ಲಿ ದೇವಾಲಯಗಳ ಒಳಕ್ಕೆ ದಲಿತರನ್ನು ಬಿಟ್ಟುಕೊಳ್ಳುವುದಿಲ್ಲ. ಉತ್ತರ ಪ್ರದೇಶದಲ್ಲಿ ಕಡಿಮೆಯೆಂದರೆ ಶೇ.47 ಮತ್ತು ಅತ್ಯಂತ ಹೆಚ್ಚು ಕರ್ನಾಟಕದಲ್ಲಿ ಅಂದರೆ ಶೇ.94 ಹಳ್ಳಿಗಳ ದೇವಾಲಯಗಳ ಒಳಗೆ ದಲಿತರನ್ನು ಬಿಡುವುದಿಲ್ಲ. ಶೇ.48.9 ಹಳ್ಳಿಗಳಲ್ಲಿ ದಲಿತರನ್ನು ಇತರ ಜಾತಿಗಳ ಸ್ಮಶಾನಗಳಿಗೆ ಬಿಡುವುದಿಲ್ಲ. ಶೇ.25 ಹಳ್ಳಿಗಳಲ್ಲಿ ದಲಿತರು ಬೇರೆಯವರಿಗಿಂತ ಹೆಚ್ಚು ದುಡಿದರೂ ಕಡಿಮೆ ಕೂಲಿಯನ್ನು ಪಡೆಯುತ್ತಾರೆ. ಶೇ.25 ಹಳ್ಳಿಗಳಲ್ಲಿ ದಲಿತರು ತಾವು ಬೆಳೆದ ತರಕಾರಿ, ದವಸ ಧಾನ್ಯಗಳನ್ನು ಅದೇ ಹಳ್ಳಿಯಲ್ಲಿ ಮಾರಲು ಬಿಡದ ಕಾರಣ ಅವರು ಬೇರೆ ಹಳ್ಳಿ / ಪಟ್ಟಣಗಳಿಗೆ ಹೋಗಿ ಮಾರಬೇಕಾಗಿದೆ. ಇದು ನಮ್ಮ 'ವಂದೇಮಾತರಂ' ಭಾರತದ ಕಥೆ.

ಕರ್ನಾಟಕ ರಾಜ್ಯವನ್ನು ಮಾದರಿ ರಾಜ್ಯ ಎಂದು ಬಿಂಬಿಸಲಾಗುತ್ತದೆ. ಆದರೆ ದೇಶದಲ್ಲಿಯೇ ಶೇಕಡ 94ರಷ್ಟು ಹಳ್ಳಿಗಳ ದೇವಾಲಯಗಳಲ್ಲಿ ದಲಿತರನ್ನು ಒಳಗೆ ಬಿಡುವುದಿಲ್ಲ. ಇದರ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳುತ್ತಿಲ್ಲ.

## ಅಧ್ಯಾಯ–6

ಭಾರತದಲ್ಲಿ ಭಕ್ತಿಯೂ ರಾಜಕೀಯದಲ್ಲಿ ಪ್ರಭಾವಹೊಂದಿದೆ. ಇದು ಇನ್ನಾವ
ದೇಶದಲ್ಲೂ ಕಾಣಿಸುವುದಿಲ್ಲ. ರಾಜಕೀಯದಲ್ಲಿ ಭಕ್ತಿ ಅಥವಾ ನಾಯಕ
ಪೂಜೆ ಅವನತಿ ಮತ್ತು ಸರ್ವಾಧಿಕಾರಕ್ಕೆ ಮಾರ್ಗವಾಗುತ್ತದೆ

–ಅಂಬೇಡ್ಕರ್.

# ವಿದೇಶಗಳಲ್ಲಿ ಜಾತಿ ಅಸ್ಪೃಶ್ಯತೆ

ಬಹುಶಃ ಜಾತಿಪದ್ಧತಿ, ಪ್ರಪಂಚದ ಪುರಾಣ ಪದ್ಧತಿಗಳಲ್ಲಿ ಒಂದಾಗಿದ್ದು ಅದು ಹಿಂದೂಗಳ (ಆರ್ಯರ) ವರ್ಣಾಶ್ರಮ ಶ್ರೇಣಿ ಆಧಾರಿತ ಸಿದ್ಧಾಂತವಾಗಿದೆ. ವರ್ಣಗಳಲ್ಲಿ ಮೊದಲಿಗೆ ಮೂಲ ಜನರಾದ ಅಸುರರು/ದ್ರಾವಿಡರು ಇಲ್ಲದ ಕಾರಣ ನಾಲ್ಕನೇ ವರ್ಣ ಸೃಷ್ಟಿಸಿ ಅವರನ್ನು ಶೂದ್ರರೆಂದು ಹೆಸರಿಸಲಾಯಿತು. ಮುಂದೆ ಅದು ಕಸುಬುಗಳ ಆಧಾರದಿಂದ ಸೂರಾರು ಜಾತಿಗಳಾಗಿ ಮಾರ್ಪಟ್ಟು, ಅದರಲ್ಲೂ ಕೊನೆ ಜಾತಿಯನ್ನು ಅಂತ್ಯಜರು ಅಥವಾ ಅಸ್ಪೃಶ್ಯರೆಂದು ಕರೆಯಲಾಯಿತು. ಜಾತಿ, ಅಸ್ಪೃಶ್ಯತೆ ಎಂಬ ಈ ರೋಗ, ಈಗ ಭಾರತವೇ ಅಲ್ಲದೆ ಭಾರತದ ಸುತ್ತಮುತ್ತಲ ದೇಶಗಳಾದ ನೇಪಾಳ, ಬಾಂಗ್ಲಾ, ಪಾಕಿಸ್ತಾನ, ಶ್ರೀಲಂಕಾ ಮತ್ತು ದೂರದ ಇಂಗ್ಲೆಂಡ್, ಅಮೆರಿಕಾಗಳಲ್ಲೂ ಕ್ಯಾನ್ಸರ್‌ನಂತೆ ಹರಡಿಕೊಂಡಿದೆ. ದಲಿತರು ಎಲ್ಲೇ ಹೋದರೂ ಈ ಜಾತಿ, ಅಸ್ಪೃಶ್ಯತೆ ಎಂಬ ಕಳಂಕ ಅವರನ್ನು ಬೆಂಬಿಡದೆ ಬೆನ್ನತ್ತಿದೆ. ಭಾರತದಲ್ಲಿ ಹಿಂದೂ ಮೇಲ್ಜಾತಿಗಳು ನಡೆಸುವ ಎಲ್ಲಾ ರೀತಿಯ ದಬ್ಬಾಳಿಕೆ, ದೌರ್ಜನ್ಯಗಳು ಈ ದೇಶಗಳಲ್ಲೂ ನಡೆಯುತ್ತಿವೆ. ಆದರೆ ಅದರ ತೀವ್ರತೆ ಸ್ವಲ್ಪ ಕಡಿಮೆ ಎನ್ನುವುದನ್ನು ಬಿಟ್ಟರೆ ಉಳಿದಂತೆ ಎಲ್ಲಾ ರೀತಿಯ ತಾರತಮ್ಯ, ದಬ್ಬಾಳಿಕೆ, ದೌರ್ಜನ್ಯಗಳು ದಲಿತರ ಮೇಲೆ ಅದೇ ರೀತಿಯಾಗಿ ನಡೆಯುತ್ತಿದೆ. ಆತಂಕದ ವಿಷಯವೆಂದರೆ ಹಿಂದೂಗಳು ವಿದೇಶಗಳಿಗೆ ವಲಸೆ ಹೋಗುವುದು ಹೆಚ್ಚುತ್ತಿರುವಂತೆ ಜಾತಿ, ಅಸ್ಪೃಶ್ಯತೆಯ ತೀವ್ರತೆಯೂ ಆ ದೇಶಗಳಲ್ಲಿ ಹೆಚ್ಚುತ್ತಿದೆ. ವಿಚಿತ್ರವೆಂದರೆ ಮನುಷ್ಯ ವೈಜ್ಞಾನಿಕವಾಗಿ ಬೆಳೆದಿರುವ ಅತ್ಯಂತ ಆಧುನಿಕ ಯುಗವಾಗಿದ್ದು ಮನುಷ್ಯರಿಗಿಂತ ಹೆಚ್ಚು ಕೆಲಸಗಳನ್ನು ಯಂತ್ರಗಳು ಮಾಡುತ್ತಿವೆ. ಮಾನವ ಮಂಗಳ ಗ್ರಹವನ್ನು ಮುಟ್ಟಿ ಬಂದಿದ್ದಾನೆ. ಆದರೆ ಮನುಷ್ಯನ ಇನ್ನೊಂದು ಮುಖ ಅತ್ಯಂತ ಹೇಸಿಗೆ ಹುಟ್ಟಿಸುತ್ತದೆ.

2009ರಲ್ಲಿ ನೇಪಾಳದಲ್ಲಿ ಭಾರತ ಸರ್ಕಾರದ ಸಹಯೋಗದೊಂದಿಗೆ ನಡೆದ ಸಭೆಯೊಂದರಲ್ಲಿ ನೇಪಾಳದ ವಿದೇಶಿ ಮಂತ್ರಿ ಜೀತ್ ಬಹಾದುರ್ ದರ್ಜೀ ಗೌತಮ್ ದಕ್ಷಿಣ ಪೂರ್ವ ಏಷ್ಯಾದಲ್ಲಿ ದಲಿತರು ಅನುಭವಿಸುತ್ತಿರುವ ತೊಂದರೆಗಳ ಬಗೆಗಿನ

ಸಭೆಯನ್ನು ಉದ್ಘಾಟಿಸಿ UNHRC (ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಸಮಿತಿಯ) ಮೂಲಕ ಈ ತೊಂದರೆಗಳನ್ನು ನಿವಾರಿಸಲು ಸಹಾಯ ಕೋರಿದರು. ಈ ಸಭೆಯಲ್ಲಿ ಹಲವು ದೇಶಗಳ ತಜ್ಞರು ಭಾಗವಹಿಸಿದ್ದರು. ಹಿಂದೂ ಧರ್ಮದಲ್ಲಿ ಸೃಷ್ಟಿಯಾಗಿರುವ ಅಸ್ಪೃಶ್ಯತೆಯನ್ನು ಹಿಂದೂಗಳು ಹೋದಲ್ಲೆಲ್ಲ ಅದನ್ನು ಪ್ಲೇಗಿನಂತೆ ಹರಡಿಸುತ್ತಿದ್ದಾರೆ. ಪ್ರಪಂಚದಲ್ಲಿ ಹೆಚ್ಚು ಹಿಂದೂಗಳಿರುವ ನೇಪಾಳದಲ್ಲಿ ದಲಿತರನ್ನು ಪನಿನ್ಚಲ್ನೆ, ಅಚ್ಛೂತ್, ಅವರ್ಣ್, ದೂಮ್, ಪರಿಗನಿತ್, ತಲೂಜತ್ ಇತ್ಯಾದಿಯಾಗಿ ಕರೆಯುತ್ತಾರೆ. 24 ದಶಲಕ್ಷ ಜನಸಂಖ್ಯೆಯ ನೇಪಾಳದಲ್ಲಿ 4.5 ದಶಲಕ್ಷ ದಲಿತರಿದ್ದಾರೆ. ಜನಜಾತಿಗಳು ಎನ್ನುವ ಬುಡಕಟ್ಟುಗಳ ಜನಸಂಖ್ಯೆ ಶೇಕಡ 37. ಪ್ರಬಲ ಜಾತಿಗಳ ನೇಪಾಳಿಗರು ಹಿಂದೂಗಳೇ ಆದ್ದರಿಂದ ಭಾರತದಲ್ಲಿ ದಲಿತರ ವಿರುದ್ಧ ಯಾವ ರೀತಿಯ ತಾರತಮ್ಯಗಳು ನಡೆಯುತ್ತವೆಯೋ ಅವೆಲ್ಲವನ್ನು ಇಲ್ಲಿಯೂ ನಡೆಸುತ್ತಾರೆ. ಕಮಿ, ಸೋನಾರ್, ಲೋಹಾರ್ ಇತ್ಯಾದಿ ಮುಖ್ಯ ದಲಿತ ಜನಾಂಗಗಳು ತಮ್ಮನ್ನು ವಿಶ್ವಕರ್ಮಿಗಳು ಎಂದು ಕರೆದುಕೊಳ್ಳುವುದು ಒಂದು ವಿಶೇಷ. ಇವರು ಮೂಲವಾಗಿ ಕಾಳಿಕಾದೇವಿಯ ಆರಾಧಕರಾಗಿರಬೇಕು?

ನೇಪಾಳದಲ್ಲಿ ಶೇ.5ರಷ್ಟು ಇರುವ ಬ್ರಾಹ್ಮಣರು ಶೇ.73ರಷ್ಟು ಉದ್ಯೋಗಗಳನ್ನು ಪಡೆದು ಕೊಂಡರೆ, ಶೇ.37ರಷ್ಟು ಜನಸಂಖ್ಯೆ ಇರುವ ಜನಜಾತಿಗಳು ಶೇ.22ರಷ್ಟು ಉದ್ಯೋಗ ಗಳನ್ನು ಪಡೆದುಕೊಂಡಿದ್ದಾರೆ. ಶೇ.20ರಷ್ಟು ಜನಸಂಖ್ಯೆ ಇರುವ ದಲಿತರು ಕೇವಲ ಶೇ.3ರಷ್ಟು ಉದ್ಯೋಗಗಳನ್ನು ಪಡೆಯುವಲ್ಲಿ ಮಾತ್ರ ಸಫಲರಾಗಿದ್ದಾರೆ. ಕ್ರಿ. ಶ. 1991 ರಲ್ಲಿಯೇ ಶೇ.89ರಷ್ಟು ಐಎಎಸ್ ಅಧಿಕಾರಿಗಳು ಬ್ರಾಹ್ಮಣರಾಗಿದ್ದರು. ನೇಪಾಳ ಸರ್ಕಾರ 2011ರಲ್ಲಿ ಜಾತಿ ಆಧಾರಿತ ತಾರತಮ್ಯ ಮತ್ತು ಅಸ್ಪೃಶ್ಯತೆಯ ವಿರುದ್ಧ ಕಾಯಿದೆಯನ್ನು ಅನುಷ್ಠಾನಗೊಳಿಸಿತು. http://www.lawcommission>.gov.in.

ಈ ಕಾಯಿದೆಯ ಪ್ರಕಾರ ನೇಪಾಳದಲ್ಲಿ ಯಾರೂ ಸಂಪ್ರದಾಯ, ಧರ್ಮ, ಸಂಸ್ಕೃತಿ, ಜನಾಂಗ, ವಂಶ, ಸಮುದಾಯ ಅಥವಾ ಉದ್ಯೋಗ ಮಾಡುವ ಸ್ಥಳಗಳಲ್ಲಿ ಜಾತಿ ಆಧಾರದ ಮೇಲೆ ಯಾವುದೇ ಭೇದ ಭಾವಗಳನ್ನು ತೋರಿಸಬಾರದು, ಜಾತಿ, ಅಸ್ಪೃಶ್ಯತೆ ಆಚರಣೆ ಮಾಡಬಾರದು. ಸಾರ್ವಜನಿಕ ಸ್ಥಳ, ಸಮಾರಂಭಗಳಲ್ಲಿ ಪ್ರತ್ಯೇಕ ಅಥವಾ ಒಟ್ಟಾಗಿ ಯಾವುದೇ ರೀತಿಯ ಬಹಿಷ್ಕಾರ, ತಾರತಮ್ಯ ಎಸಗುವ ನಿರ್ಬಂಧಗಳನ್ನು ಹೇರಬಾರದು. ಹಾಗೆ ಮಾಡಿದಲ್ಲಿ ಅವರ ಮೇಲೆ ಕಠಿಣ ಕಾನೂನು ಕ್ರಮಗಳನ್ನು ಜರುಗಿಸಿ ದಂಡ ವಸೂಲಿ ಮಾಡುವುದರ ಜೊತೆಗೆ ಜೈಲು ಶಿಕ್ಷೆಗೂ ಗುರಿಯಾಗುತ್ತಾರೆ.

ನೇಪಾಳದಲ್ಲಿ ಹೊಸ ಸಂವಿಧಾನವನ್ನು ಸೆಪ್ಟೆಂಬರ್ 2015ರಲ್ಲಿ ಅನುಷ್ಠಾನ ಗೊಳಿಸಲಾಯಿತು. ಜಗತ್ತಿನ ಏಕೈಕ ಹಿಂದೂ ರಾಷ್ಟ್ರ ಎನಿಸಿಕೊಂಡಿರುವ ನೇಪಾಳ ಇನ್ನುಮುಂದೆ ಜಾತ್ಯತೀತ ಹಣರಾಜ್ಯ ರಾಷ್ಟ್ರವಾಗಿ ಮುಂದುವರಿಯಲಿದೆ. ಹೊಸ ಸಂವಿಧಾನದಲ್ಲಿ ಹಿಂದೂ ರಾಷ್ಟ್ರ ಎಂಬ ಸ್ಥಾನಮಾನವನ್ನು ಕಿತ್ತುಹಾಕಿ ಜಾತ್ಯತೀತ ಪದವನ್ನು ಇನ್ನು ಮುಂದು ಬಳಸಲಾಗುತ್ತದೆ. ಹೆಚ್ಚಿನ ಜನರು ಭಾರತದಂತೆ ಜಾತ್ಯತೀತ ರಾಷ್ಟ್ರದ ಸ್ವರೂಪಕ್ಕೆ ಬೆಂಬಲ ವ್ಯಕ್ತಪಡಿಸಿದ ಫಲಿತಾಂಶದಿಂದ ಇದು ಸಾಧ್ಯವಾಗಿದೆ. ಒಟ್ಟು 601 ಸಂಸತ್ ಸದಸ್ಯರ ಪೈಕಿ ಕೇವಲ 21 ಸದಸ್ಯರು ಮಾತ್ರ ಹಿಂದೂ ರಾಷ್ಟ್ರಕ್ಕೆ ಬೆಂಬಲ ವ್ಯಕ್ತಪಡಿಸಿದ್ದರು. ನೇಪಾಳ ಹಿಂದೂ ರಾಷ್ಟ್ರವಾಗಿದ್ದ ಕಾಲದಲ್ಲಿ

ಅಲ್ಪಸಂಖ್ಯಾತರು ತಾರತಮ್ಯವನ್ನು ಅನುಭವಿಸಿದ್ದಲ್ಲದೆ ಮೇಲ್ಜಾತಿಗಳ ದಮನಕ್ಕೂ ಕಾರಣರಾಗಿದ್ದರು. ಹೀಗಾಗಿ ಈಗ ಬಹುಸಂಖ್ಯಾತರ ಪ್ರಜಾಪ್ರಭುತ್ವ ಎನ್ನುವುದಕ್ಕಿಂತ ಎಲ್ಲರನ್ನೂ ಒಳಗೊಳ್ಳುವ ನೇಪಾಳ ಪ್ರಜಾಪ್ರಭುತ್ವ ದೇಶವಾಗಿದೆ. ನೇಪಾಳದಲ್ಲಿ ಹಿಂದೂಗಳೇ ಅಲ್ಲದೆ ಬೌದ್ಧರು, ಕ್ರೈಸ್ತರು, ಮುಸಲ್ಮಾನರೂ ಇದ್ದಾರೆ.

ಈಗೀಗ 'ದಲಿತ' ಎನ್ನುವ ಪದ ಪೂರ್ವ ಏಷ್ಯಾದಲ್ಲೆಲ್ಲ ಹರಡಿಕೊಂಡು ಮೇಲ್ಜಾತಿಗಳ ಜನರು ದಲಿತರ ವಿರುದ್ಧ ನಡೆಸುತ್ತಿರುವ ಅನ್ಯಾಯಗಳು ಎಲ್ಲರಿಗೂ ತಿಳಿಯುತ್ತಿವೆ. ಭಾರತದಲ್ಲಿ ಇದು ಸಾವಿರಾರು ವರ್ಷಗಳಿಂದಲೂ ಇದ್ದರೂ, ಈ ಅನಾಗರಿಕ ವಿಷಯ ಭಾರತದಿಂದ ಅಷ್ಟಾಗಿ ಹೊರಕ್ಕೆ ಪ್ರಚಾರವಾಗಿರಲಿಲ್ಲ. ಆದರೆ ಬ್ರಿಟಿಷರ ಕಾಲದಲ್ಲಿ ಇದು ತನ್ನ ತಲೆಯನ್ನು ಹೊರಹಾಕಿ ಸುತ್ತಲೂ ಹರಡಿಕೊಳ್ಳತೊಡಗಿತು. ಇದೇ ರೀತಿಯ ತಾರತಮ್ಯ ಅಮೆರಿಕಾ ಮತ್ತು ಆಫ್ರಿಕಾದಲ್ಲಿ ಬಿಳಿಯರು, ಕಪ್ಪು ಜನರಾದ ನೀಗ್ರೋಗಳ ವಿರುದ್ಧ (ವರ್ಣಭೇದ), ಜರ್ಮನ್ ನಾಜಿಗಳು, ಜ್ಯೂಸ್‌ರ ಮೇಲೆ ನಡೆಸಿದ ಘೋರ ಮತ್ತು ಜಪಾನಿನಲ್ಲಿ, ಜಪಾನೀಯರು ಬುರಾಕುಮಿನ್ ಎಂಬ ಮೂಲ ಜನರ ವಿರುದ್ಧ ನಡೆಸುತ್ತಾರೆ. ಆಫ್ರಿಕಾದ ಪ್ರಬಲ ಕೋಮಿನ ಜನರು ಅಸ್ಪೃಶ್ಯತೆಗೆ ಸಮಾನವಾದ ಆಚರಣೆಗಳನ್ನು ಅಲ್ಲಿನ ಬುಡಕಟ್ಟು ಜನರ ವಿರುದ್ಧ ಈಗಲೂ ನಡೆಸುತ್ತಿದ್ದಾರೆ. ಆಫ್ರಿಕಾದ ಮುಖ್ಯ ಬುಡಕಟ್ಟು ಜನಾಂಗಗಳೆಂದರೆ ಓಸು, ಓಮೋನಿ, ಅದು, ಇಬೋ, ಉಮೆ, ಓಹು, ಓರುಮ ಇತ್ಯಾದಿ. ಇಂತಹ ಆಚರಣೆಗಳು ಆಸ್ಟ್ರೇಲಿಯಾದಲ್ಲೂ ಬಿಳಿಯರು ಮತ್ತು ಬುಡಕಟ್ಟು ಜನರ ಮಧ್ಯೆ ಕಂಡುಬರುತ್ತವೆ.

ಕೋಣ್ (1996), ಡರ್ಕ್ಸ್ (2001) ಮತ್ತು ಹಲವು ಮಾನವಶಾಸ್ತ್ರಜ್ಞರು ಜಾತಿಯೆಂಬ ರಚನೆ ದಕ್ಷಿಣ ಪೂರ್ವ ಏಷ್ಯಾದಲ್ಲಿ ಹಿಂದೂಗಳಲ್ಲದವರ ಮಧ್ಯೆ ಕಾಣಿಸಿಕೊಳ್ಳಲು ಎರಡು ಕಾರಣಗಳಿವೆ ಎನ್ನುತ್ತಾರೆ. ಒಂದು, ಹಿಂದೂಗಳು ಆಚರಣೆ ಮಾಡುತ್ತಿದ್ದ ಜಾತಿ, ಅಸ್ಪೃಶ್ಯ ಪದ್ಧತಿಗಳು ಇವರನ್ನು ಪ್ರೇರೇಪಿಸಿದ್ದು; ಎರಡು ಮೂಲದಲ್ಲಿ ಹಿಂದೂಗಳು ಇಲ್ಲೆಲ್ಲ ಇದ್ದಿದ್ದು. ಅನಂತರ, ಕಾಲಾಂತರದಲ್ಲಿ ಹಿಂದೂಗಳು ಕ್ರೈಸ್ತರಾಗಿ, ಮುಸಲ್ಮಾನರಾಗಿ ಪರಿವರ್ತನೆಯಾಗಿರಬೇಕು. ಈ ರೀತಿಯ ಜಾತಿ ಆಧಾರಿತ ಶ್ರೇಣಿಯಿಂದ ಕೆಳಗಿನ ಜಾತಿಗಳ ಜನರ ದುಡಿಮೆ, ಮೇಲ್ಜಾತಿಯ ಜನರಿಗೆ ಸುಪ್ಪತ್ತಿಗೆಯಾಗಿ ಪರಿಣಮಿಸಿ ಅದು ನಿರಂತರವಾಗಿ ಮುಂದುವರಿಯುತ್ತಲೇ ಹೋಯಿತು. ಇದನ್ನು ಮುಸಲ್ಮಾನರಲ್ಲೂ ನೋಡಬಹುದಾಗಿದೆ. Surinder S. Jodha & Ghanshyam Shah, IIDS (2010).

ಹಣವಂತರು-ಹಣವಂತರ ಜೊತೆಗೆ ಸೇರಿಕೊಳ್ಳುವುದು ಸಾಮಾನ್ಯ. ಜಾತಿ, ಅನೇಕ ಆಯಾಮಗಳಿಂದ ಕೂಡಿದೆ. ನೋಟ, ಬಣ್ಣ, ಮೂಲ / ಪ್ರದೇಶ, ವಿನಮ್ರತೆ ಎಲ್ಲವೂ ಮುಖ್ಯವಾಗುತ್ತದೆ. ಮುಸಲ್ಮಾನರಲ್ಲಿನ ಮೇಲ್ಜಾತಿ ಜನ ಪ್ರವಾದಿಗೆ ಹತ್ತಿರದವರಾಗಿರುತ್ತಾರೆ. ಇವೆಲ್ಲದರ ಆಧಾರಗಳ ಮೇಲೆಯೇ ಮದುವೆಗಳು ಕೂಡ ನಿರ್ಧಾರವಾಗುತ್ತವೆ. ರಾಜಸ್ತಾನದ ಅನೇಕ ಮಹಾರಾಜರು ಮುಸಲ್ಮಾನರಿಗೆ ತಮ್ಮ ಜಾತಿಯ ಹೆಣ್ಣುಗಳನ್ನು ಕೊಟ್ಟು ಮದುವೆ ಮಾಡಿ ತಮ್ಮ ಆಸನಗಳನ್ನು ಉಳಿಸಿಕೊಂಡಿದ್ದರು.

ಹಿಂದೂಗಳ ಮಧ್ಯೆ ಹುಟ್ಟಿದ ಪದ್ಧತಿಗಳು ಪೂರ್ವ ಏಷ್ಯಾದಲ್ಲಿ ಇಸ್ಲಾಂ, ಸಿಖ್, ಕ್ರೈಸ್ತ ಮತ್ತು ಬೌದ್ಧ ಧರ್ಮಗಳ ಒಳಗೆ ನುಣುಚಿಕೊಂಡು ಬೇರುಗಳನ್ನು ಬಿಟ್ಟುಕೊಂಡಿತು.

ಇಂಡಿಯಾ-ಪಾಕಿಸ್ತಾನ ಪ್ರತ್ಯೇಕಗೊಂಡಾಗ ಮತ್ತು ಇಂಡಿಯಾ-ಪಾಕಿಸ್ತಾನದ ನಡುವೆ ನಡೆದ ಎರಡು ಯುದ್ಧಗಳ ಕಾಲದಲ್ಲಿ ಬಹಳಷ್ಟು ಹಿಂದೂಗಳು ಪಾಕಿಸ್ತಾನದಲ್ಲಿ ಎಲ್ಲವನ್ನೂ ಬಿಟ್ಟು ಭಾರತಕ್ಕೆ ಓಡಿಬಂದರು. ಆದರೆ ಇಂಡಿಯಾದಲ್ಲಿದ್ದ ಮುಸಲ್ಮಾನರು ಅಷ್ಟಾಗಿ ಪಾಕಿಸ್ತಾನಕ್ಕೆ ಹೋಗಲಿಲ್ಲ, ಮಹಾತ್ಮ ಗಾಂಧೀಜಿಯವರ ಹೋರಾಟ ಮತ್ತು ಕಳಕಳಿಯ ಮಾತುಗಳಿಂದ. ಆದರೂ ಈಗಲೂ ಪಾಕಿಸ್ತಾನದಲ್ಲಿ 3 ದಶಲಕ್ಷ ಹಿಂದೂಗಳಿದ್ದು ಅವರಲ್ಲಿ ಶೇ.75 ದಲಿತರಿದ್ದಾರೆ. ಇವರಲ್ಲಿ ಮುಖ್ಯವಾಗಿ ಮೇಘ್‌ವಾಲ, ಓಢ್ಸ್, ವಾಲ್ಮೀಕಿ, ಕೋಹ್ಲಿ ಮತ್ತು ಭಿಲ್ ಜನಾಂಗಗಳವರು. ಇವರೆಲ್ಲ ದಕ್ಷಿಣ ಪಂಜಾಬ್ ಮತ್ತು ಸಿಂಧ್ ಪ್ರಾಂತ್ಯಗಳಲ್ಲಿ ವಾಸಿಸುತ್ತಾರೆ. ಬಹಳಷ್ಟು ದಲಿತರಿಗೆ ಇಲ್ಲಿ ಯಾವುದೇ ಬದುಕಿನ ಆಧಾರವಿಲ್ಲದೆ ಕೃಷಿ ಕಾರ್ಮಿಕರಾಗಿ, ಜಾಡಮಾಲಿಗಳಾಗಿ, ಹಕ್ಕಿಪಿಕ್ಕರಂತೆ ಕೆಲಸಗಳಿಗೆ ಒಂದು ಕಡೆ ನೆಲೆಯೂರದೆ ಅಲೆಯುತ್ತಿರುತ್ತಾರೆ. ಭಾರತದಲ್ಲಿದ್ದಂತೆ ಇಲ್ಲಿಯೂ ದಲಿತರು ಪ್ರತ್ಯೇಕ ಸ್ಥಳಗಳಲ್ಲಿ ಉಳಿದುಕೊಂಡಿದ್ದಾರೆ. ಇವರೆಲ್ಲ ಹಿಂದೂ/ಮುಸ್ಲಿಂ ಜಮೀನುದಾರರ ಹೊಲಗಳಲ್ಲಿ ಜೀತದಾರರಾಗಿ ದುಡಿಯುತ್ತಾರೆ. ದಲಿತರು ಸತ್ತರೆ ಇವರಿಗೆ ಸಮಾಧಿ ಮಾಡಲು ನೆಲವೂ ಸಿಗುವುದಿಲ್ಲ. ದಲಿತರು ಭೀತಿಯಿಂದ ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗಳಿಗೆ ಕಳುಹಿಸುವುದಿಲ್ಲ. ಗಂಡುಮಕ್ಕಳೂ ಅಷ್ಟೇ, ತೀರಾ ಎಳೆವಯಸ್ಸಿನಲ್ಲೇ ಶಾಲೆಗಳಿಗೆ ಹೋಗದೆ ಪೋಷಕರ ಸಹಾಯಕ್ಕೆ ನಿಂತುಕೊಳ್ಳುತ್ತಾರೆ.

ಭಾರತದ ಗ್ರಾಮೀಣ ಶಾಲೆಗಳಂತೆ ಇಲ್ಲಿಯೂ ಮುಸ್ಲಿಂ ಶಿಕ್ಷಕರು ದಲಿತ ಮಕ್ಕಳನ್ನು ತರಗತಿಗಳಲ್ಲಿ ಹಿಂದೆ ಕೂರಿಸಿ, ಅಡಿಗೆ ಪಾತ್ರೆಗಳನ್ನು ಮುಟ್ಟದಂತೆ ನೋಡಿಕೊಳ್ಳುತ್ತಾರೆ. ಇವರಿಗೆ ಯಾವ ರೀತಿಯ ಪ್ರೋತ್ಸಾಹ, ಸ್ಕಾಲರ್‌ಶಿಪ್ ದೊರಕುವುದಿಲ್ಲ. ಇಲ್ಲಿಯೂ ಕೂಡ ಮೇಲ್ಜಾತಿಯ ಹಿಂದೂಗಳು/ಕ್ರೈಸ್ತರು ಅಳಿದುಳಿದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಾರೆ. ದೇವಾಲಯಗಳಲ್ಲೂ ಪ್ರವೇಶ ನೀಡುವುದಿಲ್ಲ. ವಿಪರ್ಯಾಸವೆಂದರೆ ಕೆಲವು ದಲಿತರು ಮುಸಲ್ಮಾನರಾಗಿ, ಕ್ರೈಸ್ತರಾಗಿ ಮತಾಂತರ ಹೊಂದಿದರೂ ಅವರ ಜಾತಿ/ಅಸ್ಪೃಶ್ಯತೆ ತಾರತಮ್ಯ, ಆರ್ಥಿಕ ತೊಂದರೆಗಳು ಸುಧಾರಿಸಲಿಲ್ಲ. ದಲಿತರಿಗೆ ರಾಜಕೀಯ ಬೆಂಬಲವೂ ಇಲ್ಲ. Pirbal Lal Satyani, Dalits in Pakistan, 2005. ಈ ಕೃತಿಯ ಲೇಖಕರಾದ ದಲಿತ ಪಾಕಿಸ್ತಾನಿ ಈ ಸಮಸ್ಯೆಗಳ ಕಡೆಗೆ SAARC ಗಮನ ಕೊಡಬೇಕೆಂದು ಒತ್ತಾಯ ಮಾಡಿದ್ದಾರೆ. ಆದರೆ ಇದುವರೆಗೂ SAARC (ದಕ್ಷಿಣ ಏಷ್ಯಾ ಪ್ರಾದೇಶಿಕ ಸಹಕಾರ ಸಂಸ್ಥೆ) ಯಾವುದೇ ರೀತಿಯ ಪ್ರತಿಕ್ರಿಯೆ ನೀಡಿಲ್ಲ.

*　　　　*　　　　*

ಬಾಂಗ್ಲಾದೇಶದಲ್ಲಿ ಹಿಂದೂ ಧರ್ಮಕ್ಕೆ ಸೇರಿದ ದಲಿತರನ್ನು ಹರಿಜನರೆಂದರೆ, ಮುಸ್ಲಿಂ ದಲಿತರನ್ನು ಅರ್ಝಲ್ಸ್ ಎನ್ನುತ್ತಾರೆ. ಜೊತೆಗೆ ಅವರು ಮಾಡುವ ಕಸುಬುಗಳಿಂದಲೇ ಅವರನ್ನು ಗುರುತಿಸುತ್ತಾರೆ. ಹರಿಜನ, ಭಜಂತ್ರಿ, ಮಡಿವಾಳ, ಡೈಯರ್, ಕಮ್ಮಾರ, ಆಚಾರಿ, ಚಮ್ಮಾರ, ಕಸಾಯಿ, ಗಾರ್ಡ್ನರ್, ಡೋಲಕ್ ಇತ್ಯಾದಿ. ಪಾಕಿಸ್ತಾನದಲ್ಲಿ ಅಸ್ಪೃಶ್ಯರನ್ನು ಎಸ್.ಸಿ. ಎಂದು ಕರೆಯುತ್ತಾರೆ. ಪಾಕಿಸ್ತಾನದ ಮುಸಲ್ಮಾನರು ಅಲ್ಲಿನ ದಲಿತರನ್ನು ದಲಿತರಾಗಿಯೇ ನೋಡುವರೆ ವಿನಾ ಇಂದಿಗೂ ಅವರನ್ನು ಮುಖ್ಯವಾಹಿನಿಗೆ ಸೇರಿಸಿಕೊಂಡಿಲ್ಲ (Alavi 1972 & Gazdur 2007). ಪಾಕಿಸ್ತಾನದಲ್ಲಿರುವ ದಲಿತರನ್ನು ಮುಖ್ಯವಾಗಿ ಮೋಚಿ, ಭಂಗಿ, ಪತ್ತರ್ ಎಂದು

ಕರೆಯುತ್ತಾರೆ. ಇನ್ನು ಅಡ್ಡ ಹೆಸರುಗಳಾದ ಮುಸ್ಲಮಾನ್ ಷೇಕ್ಸ್ ಮತ್ತು ಮುಸಾಲಿಸ್ (ಮುಸ್ಲಿಮ್ ದಲಿತರು) ಮತ್ತು ಮಸಿಹಿರ್ (ಕ್ರೈಸ್ತ ದಲಿತರು) ಎಂದೇ ಗುರುತಿಸುತ್ತಾರೆ. ಇವರೆಲ್ಲ ಪ್ರತ್ಯೇಕವಾದ ಸ್ಥಳಗಳಲ್ಲಿ ನೆಲೆಸಿರುತ್ತಾರೆ. ಪಂಜಾಬಿನ ಬಹಳ ಭೂಹರಾಸ್ ದಲಿತರು ಕ್ರೈಸ್ತರಾಗಿ ಪರಿವರ್ತನೆಗೊಂಡಿದ್ದಾರೆ. ಪಾಕಿಸ್ತಾನದಲ್ಲಿ ಅಪರಿಚಿತರು ಸಿಕ್ಕಿದರೆ ಮೊದಲು ಅವರ ಊರು, ಜಾತಿ/ಅಡ್ಡ ಹೆಸರು ಕೇಳುವುದು ಸರ್ವೇಸಾಮಾನ್ಯ. ಶ್ರೀಲಂಕಾದಲ್ಲಿ ಅಸ್ಪೃಶ್ಯತೆಯ ತೊಂದರೆ ಅಷ್ಟೇನೂ ಇಲ್ಲ ಎಂದೇ ಹೇಳಬೇಕು. ಆದರೆ ಹಿಂದೂ (ತಮಿಳು) ಅಹಿಂದೂ (ಬೌದ್ಧ) ಎನ್ನುವ ಪ್ರಶ್ನೆ ಏಳುತ್ತದೆ.

ಭಾರತದಲ್ಲಿರುವುದಕ್ಕಿಂತ ಒಂದು ಪಟ್ಟು ಹೆಚ್ಚು ಅಸ್ಪೃಶ್ಯತೆಯ ತಾರತಮ್ಯಗಳನ್ನು ಬಾಂಗ್ಲಾ ದೇಶದಲ್ಲಿ ಪಾಲಿಸಲಾಗುತ್ತಿದೆ. ಇಲ್ಲಿ ಸುಮಾರು 5 ದಶಲಕ್ಷ ದಲಿತರಿದ್ದು ಇವರಲ್ಲಿ ಮುಸ್ಲಿಂ ದಲಿತರೂ ಇದ್ದಾರೆ. ಹಿಂದೂ ಮತ್ತು ಮುಸ್ಲಿಂ ಮೇಲ್ಜಾತಿಗಳ ದೌರ್ಜನ್ಯಗಳನ್ನು ದಲಿತರು ಎದುರಿಸಬೇಕಾಗಿದೆ. ಬ್ರಿಟಿಷರ ಕಾಲದಲ್ಲಿ ಭಾರತದಿಂದ ಇಲ್ಲಿಗೆ ದಲಿತರನ್ನು ಕರೆದುತರಲಾಯಿತು. ಪ್ರಪಂಚದಲ್ಲೇ ದಟ್ಟ ಜನಸಂಖ್ಯೆ ಇರುವ ಬಾಂಗ್ಲಾ ದೇಶ ಮೊದಲೇ ಕೊಳಕು ದೇಶ. ಇನ್ನು ದಲಿತರು ಬದುಕುತ್ತಿರುವುದು ಆ ಕೊಳಕು ದೇಶದ ಕೊಳಕು ಪ್ರದೇಶಗಳಲ್ಲಿ ಎಂದರೆ ಹೇಗಿರುತ್ತೊ ಊಹಿಸುವುದೇ ಕಷ್ಟ. ಢಾಕಾದ ಕೊಳೆಗೇರಿಗಳು ಯಾವಾಗಲೂ ರಾಡಿಯಿಂದ ಕೂಡಿದ್ದು ಮಳೆಗಾಲದಲ್ಲಿ ಇಲ್ಲಿನ ಬದುಕು ನರಕವಾಗಿಬಿಡುತ್ತದೆ. ಬಾಂಗ್ಲಾದಲ್ಲಿ ಜಾಡಮಾಲಿಗಳ ಮಕ್ಕಳು ಜಾಡಮಾಲಿಗಳು, ಮಡಿವಾಳರ ಮಕ್ಕಳು ಮಡಿವಾಳರು, ಚಮ್ಮಾರರ ಮಕ್ಕಳು ಚಮ್ಮಾರರಾಗಿಯೇ ಪೀಳಿಗೆಗಳಿಂದ ಮುಂದುವರಿಯುತ್ತಿದ್ದಾರೆ. ದಲಿತರ ಮಕ್ಕಳಿಗೆ ವಿದ್ಯಾಭ್ಯಾಸ ಎನ್ನುವುದು ಗಗನಕುಸುಮ. ಬಾಂಗ್ಲಾ ದೇಶ ಪ್ರಪಂಚದ ಅತ್ಯಂತ ಬಡ ದೇಶವಾದರೂ ದಲಿತರ ವಿರುದ್ಧ ಜಾತಿ, ಅಸ್ಪೃಶ್ಯತೆ ಆಚರಣೆ ಮಾಡುವುದರಲ್ಲಿ ಹಿಂದೆ ಬಿದ್ದಿಲ್ಲ.

International Dalit Solidarity Network - IDSN ಸಮೀಕ್ಷೆಯ ಪ್ರಕಾರ ಶೇ.29.2 ಹಿಂದೂಗಳು ಮತ್ತು ಶೇ.45.3 ಮುಸಲ್ಮಾನರು ದಲಿತರನ್ನು ಮನೆಗಳ ಒಳಕ್ಕೆ ಬಿಟ್ಟುಕೊಳ್ಳುವುದಿಲ್ಲ. ದಲಿತರೇ ಸ್ವಚ್ಛ ಮಾಡುವ ದೇವಾಲಯಗಳು, ಶೌಚಾಲಯಗಳ ಒಳಕ್ಕೆ ಅವರನ್ನೇ ಬಿಡುವುದಿಲ್ಲ. 1996ರಲ್ಲಿ ಒಟ್ಟು ದೇಶದ ಜನಸಂಖ್ಯೆಯ ಶೇ.20 ಮಕ್ಕಳು ಶಾಲೆಗೆ ಹೋಗದೆ ಪೋಷಕರಿಗೆ ಸಹಾಯ ಮಾಡಲು ಕೆಲಸಗಳಿಗೆ ಹೋಗುತ್ತಿದ್ದರು. ಇವರು 430 ರೀತಿಯ ಕೆಲಸಗಳಲ್ಲಿ ತೊಡಗಿಕೊಂಡಿದ್ದು ಅದರಲ್ಲಿ 63 ರೀತಿಯ ಕೆಲಸಗಳು ತೀರಾ ಅಪಾಯಕರವಾದವು. ಇವರೆಲ್ಲರ ವಯಸ್ಸು 5–14 ವರ್ಷಗಳ ಒಳಗಿದ್ದು, ಇದರಲ್ಲಿ 15–20 ಸಾವಿರ ಹೆಣ್ಣುಮಕ್ಕಳು ಬೀದಿಯ ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡಿದ್ದರು.

ಪಾಕಿಸ್ತಾನ–ಇಂಡಿಯಾ ಯುದ್ಧಗಳ ಕಾಲದಲ್ಲಿ ಬಾಂಗ್ಲಾ ದೇಶದಲ್ಲಿದ್ದ 9 ಲಕ್ಷಕ್ಕಿಂತ ಹೆಚ್ಚು ಹಿಂದೂ ಕುಟುಂಬಗಳು ತೊಂದರೆಗೆ ಒಳಗಾಗಿ 1964–1991ರ ನಡುವೆ 5.3 ದಶಲಕ್ಷ ಕುಟುಂಬಗಳು ಎಲ್ಲವನ್ನೂ ಬಿಟ್ಟು ಭಾರತದ ಕಡೆಗೆ ಓಡಿಬಂದವು. ಇದರ ಜೊತೆಗೆ ಸಾವಿರಾರು ಬಡ ಮುಸ್ಲಿಂ ಕುಟುಂಬಗಳು ಭಾರತದ ಗಡಿ ದಾಟಿ ಬಂದು ಪಶ್ಚಿಮ ಬಂಗಾಳ ಮತ್ತು ಈಶಾನ್ಯ ವಲಯದಲ್ಲಿ ನೆಲೆಸಿದವು. ಇಂಡಿಯಾ–ಪಾಕಿಸ್ತಾನದ

ಯುದ್ಧ ಕಾಲದಲ್ಲಿ ಸುರಕ್ಷಣೆಗಾಗಿ ಭಾರತದ ಮಿಲಿಟರಿ, ಬಾಂಗ್ಲಾ ಮುಸ್ಲಿಮರನ್ನು ಭಾರತದ ಗಡಿಯೊಳಕ್ಕೆ ಕರೆದು ತಂದು ನಿರಾಶ್ರಿತ ಶಿಬಿರಗಳಲ್ಲಿ ಇಟ್ಟಿತ್ತು. ಆದರೆ ಯುದ್ಧ ಮುಗಿದ ಎಷ್ಟೋ ವರ್ಷಗಳಾದ ನಂತರವೂ ಶಿಬಿರಗಳಲ್ಲಿಯೇ ಉಳಿದುಕೊಂಡು ನಿಧಾನವಾಗಿ ಭಾರತದ ಗಡಿ ಒಳಕ್ಕೆ ಪ್ರವೇಶಿಸಿದ ಅವರು ದೇಶದ ನಾನಾ ಭಾಗಗಳಲ್ಲಿ ಚೆಲ್ಲಿಹೋದರು. ಮುಂದಿನ ದಿನಗಳಲ್ಲಿ ದೆಹಲಿಯಂತಹ ನಗರದಲ್ಲಿಯೇ ಬಾಂಗ್ಲಾ ದೇಶ ಕಾಲೋನಿಗಳು ಹುಟ್ಟಿಕೊಂಡವು. ಕರ್ನಾಟಕದಲ್ಲೂ ಬಾಂಗ್ಲಾ ನಿರಾಶ್ರಿತರ ಕಾಲೋನಿಗಳಿವೆ.

* * *

ಶ್ರೀಲಂಕಾದ ಸಿಂಹಳಿಯರು ಒಂದು ಕಾಲದಲ್ಲಿ ರೋಡಿಯಾ ಅಥವಾ ರೋಡಿ ಎಂಬ ಮೂಲ ಜನಾಂಗವನ್ನು ಭಾರತದಲ್ಲಿ ಹಿಂದೂಗಳು ಅಸ್ಪೃಶ್ಯರನ್ನು ಹೇಗೆ ನಡೆಸಿಕೊಳ್ಳುತ್ತಿದ್ದರೋ ಅದೇ ರೀತಿಯಲ್ಲಿ ನಡೆಸಿಕೊಳ್ಳುತ್ತಿದ್ದರು. ರೋಡಿಯಾಗಳು ಮೂಲವಾಗಿ ರಾಜ ಬಾಹು–1 (12ನೇ ಶತಮಾನದ) ರಾಜನ ಮಗಳಾದ ರತ್ನವಲ್ಲಿಯ ಸಂತಾನ ಎಂಬ ಕತೆಯಿದೆ. ಇನ್ನೊಂದು ಕತೆಯಂತೆ ಸುಮಾರು 2 ಸಾವಿರ ವರ್ಷಗಳ ಹಿಂದೆ ಪವಿತ್ರ ಬೋ–ಸಸಿಗಳೊಂದಿಗೆ ಪೂರ್ವ ಭಾರತದಿಂದ ಇಂದಿನ ಅನುರಾಧಪುರಂಗೆ ಮೂಲ ನಿವಾಸಿಗಳ ಒಂದು ಸಮುದಾಯ ಬಂದಿತು ಎನ್ನುವ ಮಾತಿದೆ. ಇವರು ಕಾಳಿಕಾದೇವಿಯ ಆರಾಧಕರು ಮತ್ತು ಇವರ ಹೆಣ್ಣುಮಕ್ಕಳು ಅತಿ ಸುಂದರಿಯರು. ರತ್ನವಲ್ಲಿ ಎಂದರೆ ರತ್ನಗಳನ್ನು ಮುಡಿದಿದ್ದವಳು ಎನ್ನುವ ಅರ್ಥವಿದೆ. ಬೌದ್ಧ ಧರ್ಮ ಇವರಿಂದಲೇ ಇಲ್ಲಿ ಪ್ರಾರಂಭವಾಯಿತು ಎನ್ನಲಾಗಿದೆ. (M. D. Raghavan, Handsome Beggers: The Rodiyas of Ceylon - 1957).

ಶ್ರೀಲಂಕಾದಲ್ಲಿ ಮುಖ್ಯವಾಗಿ ಮೂರು ಜನಾಂಗಗಳಿವೆ. ಪ್ರಬಲ ಸಿಂಹಳಿಯರು, ಶ್ರೀಲಂಕಾ ತಮಿಳರು ಮತ್ತು ತಮಿಳುನಾಡಿನ ತಮಿಳರು. ಭಾರತದಿಂದ ವಲಸೆ ಹೋಗಿರುವ ತಮಿಳರು ಇಲ್ಲಿನ ಕೆಳದರ್ಜೆಯ ಕೆಲಸಗಳನ್ನು ಮಾಡುತ್ತಾರೆ. ಕೆಲವು ದೇವಾಲಯಗಳು ಮತ್ತು ಸ್ಮಾರಕಗಳ ಒಳಕ್ಕೆ ಇವರನ್ನು ಬಿಡುವುದಿಲ್ಲ. ಶೇಕಡ 20ರಷ್ಟು ಜನರು ಇಂತಹ ತಾರತಮ್ಯಕ್ಕೆ ಒಳಗಾಗಿದ್ದಾರೆ ಎನ್ನುತ್ತದೆ International Institute of Dalit Studies (IIDS). ಸಮಾಜದಲ್ಲಿ ಒಂದು ರೀತಿಯಲ್ಲಿ ಇದು ಎಲ್ಲರಿಗೂ ಗೊತ್ತು, ಆದರೆ ಯಾರಿಗೂ ಗೊತ್ತಿಲ್ಲ ಎನ್ನುವ ಹಿಡನ್ ಅಜೆಂಡಾ. ಭಾರತ/ನೇಪಾಳದಲ್ಲಿನ ದಲಿತರಲ್ಲಿ ಇರುವಂತಹ ಒಗ್ಗಟ್ಟಿಲ್ಲದೆ ಶ್ರೀಲಂಕಾ ದಲಿತರು ಒಂದು ರೀತಿಯಲ್ಲಿ ಅನಾಥರಾಗಿದ್ದಾರೆ. ಇಲ್ಲಿನ ದಲಿತರಿಗೆ ಯಾವುದೇ ಮೀಸಲಾತಿಯೂ ಇಲ್ಲ. ಒಟ್ಟಿನಲ್ಲಿ ಶ್ರೀಲಂಕಾದಲ್ಲಿ ಭಾರತದಲ್ಲಿ ನಡೆಯುವಷ್ಟು ಅಮಾನುಷವಾದ ದೌರ್ಜನ್ಯಗಳು ನಡೆಯುವುದಿಲ್ಲ ಎನ್ನುವುದೇ ಸಮಾಧಾನ. ಅದಕ್ಕೆ ಕಾರಣ ಇಲ್ಲಿನ ಸಿಂಹಳಿಯರು ಬೌದ್ಧರಾಗಿರುವುದು ಒಂದು ಕಾರಣವಿರಬೇಕು. ಶ್ರೀಲಂಕಾ ಸರ್ಕಾರ 1971ರಲ್ಲಿಯೇ ಜಾತಿ ಮತ್ತು ಅಸ್ಪೃಶ್ಯತೆ ವಿರುದ್ಧ ಕಾನೂನನ್ನು ಅಳವಡಿಸಿಕೊಂಡಿದೆ.

ಶ್ರೀಲಂಕಾದಲ್ಲಿ ದಲಿತರನ್ನು ಪಂಚಮರ್ (ತಮಿಳು ಪದ) ಎಂದು ಕರೆಯಲಾಗುತ್ತದೆ. ಇವರು ಹೆಚ್ಚಾಗಿ ಟೀ ತೋಟ/ಬತ್ತದ ಗದ್ದೆಗಳಲ್ಲಿ ಕೆಲಸ ಮಾಡುತ್ತಾರೆ. 1960ರ ದಶಕದಲ್ಲಿ ಶ್ರೀಲಂಕಾದ ಎಲ್‌ಟಿಟಿಇಗಳು ದೇವಾಲಯಗಳಿಗೆ ಪ್ರವೇಶ ಪಡೆಯಲು

ಹೋರಾಟ ನಡೆಸಿ, 1980ರ ದಶಕದಲ್ಲಿ ಪ್ರಬಲ ತಮಿಳರಾದ ವೆಲ್ಲಲಾರ್ಸ್ (ಭೂಮಾಲಿಕರು) ವಿರುದ್ಧ ಹೋರಾಟ ನಡೆಸಿದರು. ಇದಕ್ಕೆ ಎರಡು ಕಾರಣಗಳಿದ್ದವು. ಒಂದು ಸಿಂಹಳಿಯರ ವಿರುದ್ಧ ಮತ್ತು ಇನ್ನೊಂದು ಪ್ರಬಲ ಜಾತಿ ತಮಿಳರಿಂದ ದಲಿತ ತಮಿಳರಿಗೆ ಆಗುತ್ತಿದ್ದ ಅನ್ಯಾಯಗಳ ವಿರುದ್ಧ. ಎಲ್‌ಟಿಟಿಇ ಮತ್ತು ಸಿಂಹಳಿಯರ ನಡುವಿನ ಯುದ್ಧದಿಂದ ವೆಲ್ಲಲಾರ್ಸ್ ಓಡಿಹೋದ ಕಾರಣ ಪಂಚಮರು ಕೆಲವು ವರ್ಷಗಳ ಕಾಲ ಭೂಮಾಲಿಕರಾದರು. ಯುದ್ಧದಲ್ಲಿ ಸತ್ತ ಎಲ್ಲಾ ಜಾತಿಗಳ ಜನರನ್ನು ಅಕ್ಕಪಕ್ಕ ಹಾಕಿ ಹೂಳಲಾಯಿತು. ಬಹುಶಃ ಹಿಂದೂಗಳು ಪ್ರಪಂಚದಲ್ಲಿ ಮೊದಲ ಬಾರಿಗೆ ದಲಿತರ ಜೊತೆಗೆ ಇಲ್ಲಿ ಸಮಾಧಿಗಳನ್ನು ಹಂಚಿಕೊಂಡಿದ್ದರು. ಅಂತರ್ಜಾತೀಯ ಮದುವೆಗಳು ನಡೆದವು. ಆದರೆ ಮತ್ತೊಮ್ಮೆ ಜಾತಿಗಳ ನಡುವೆ ತಾರತಮ್ಯಗಳು ತಲೆದೋರಿ ಪಂಚಮರ್ ಮತ್ತೆ ಯಥಾಸ್ಥಿತಿಗೆ ಬಂದರು. ಹೆಚ್ಚು ಕಡಿಮೆ 25 ವರ್ಷಗಳ ಕಾಲ ಸುದೀರ್ಘವಾಗಿ ಎಲ್‌ಟಿಟಿಇ ಮತ್ತು ಶ್ರೀಲಂಕಾ ಸರ್ಕಾರ ಮಧ್ಯೆ ನಡೆದ ಈ ಯುದ್ಧದಲ್ಲಿ ಸುಮಾರು 80 ಸಾವಿರದಿಂದ 1 ಲಕ್ಷ ಜನರು ಸತ್ತರು ಎನ್ನುತ್ತದೆ UNO. ಶ್ರೀಲಂಕಾದ 81 ನಿರಾಶ್ರಿತರ ಕ್ಯಾಂಪುಗಳಲ್ಲಿ ಹೆಚ್ಚಾಗಿ ದಲಿತರಾದ ಪಂಚಮರ್, ನಲ್‌ವರ್ ಮತ್ತು ಪರಯಾರ್ ನೆಲೆಸಿದ್ದರು ಮತ್ತು ಇವರು ಎಲ್ಲಾ ರೀತಿಯಲ್ಲೂ ತೊಂದರೆಗೆ ಒಳಗಾದರು. 2009ರಲ್ಲಿ ಎಲ್‌ಟಿಟಿಇ ಮುಖ್ಯಸ್ಥ ವಿ. ಪ್ರಭಾಕರನ್ ಹತ್ಯೆಯಾದ ಮೇಲೆ ಶ್ರೀಲಂಕಾ ಸಮಾಧಾನದಿಂದ ಉಸಿರಾಡತೊಡಗಿತು.

* * *

ಇಂಗ್ಲೆಂಡಿನಲ್ಲಿ 4 ಲಕ್ಷ ಕೆಳಜಾತಿಯ ದಲಿತರಿದ್ದು ಇವರು ಮುಖ್ಯವಾಗಿ ಹಿಂದೂಗಳು ಮತ್ತು ಸಿಖ್ಖರು. ಕಳೆದ ಎರಡು/ಮೂರು ದಶಕಗಳಲ್ಲಿ ಬ್ರಿಟನ್‌ನಲ್ಲಿ ಕೆಲಸ ಮಾಡುವ ಸ್ಥಳಗಳಲ್ಲಿ ಜಾತಿ/ಅಸ್ಪೃಶ್ಯತೆ ಪ್ಲೇಗಿನಂತೆ ಹರಡಿಕೊಳ್ಳುತ್ತಿರುವುದಾಗಿ ತಿಳಿದುಬರುತ್ತಿದೆ. ಇಲ್ಲಿ ಹುಟ್ಟಿಕೊಂಡ 'ಜಾತಿ ವಿರೋಧಿ ತಾರತಮ್ಯ' ಸಂಘಟನೆಯ ಸಂಚಾಲಕ ರವಿಕುಮಾರ್, 'ನಾವು ಯು.ಕೆ.ಯಲ್ಲಿ ಸಮಾನತೆ, ಗೌರವ ಮತ್ತು ಘನತೆಯನ್ನು ಎದುರು ನೋಡುತ್ತೇವೆ' ಎಂದು ಬ್ರಿಟನ್ ಸಂಸತ್ತಿನ ಮುಂದೆ ಹೇಳಿಕೊಂಡರು. ಬ್ರಿಟನ್ ಸಂಸತ್ತಿನಲ್ಲಿ ಸಮಾನತೆಯ ಮಂತ್ರಿ ಜೋ ಸ್ವಿನ್ಸನ್ ಸಂಸತ್ತಿನಲ್ಲಿ 'ಇದು ಕಣ್ಣಿಗೆ ಕಾಣಿಸದ ವ್ಯಾಧಿ, ಇದನ್ನು ಅನುಭವಿಸುವವರಿಗೆ ಮಾತ್ರ ಗೊತ್ತಿದೆ. ಇದರ ಬಗ್ಗೆ ಇತರ ದೇಶಗಳ ಜನರಿಗೆ ಈಗೀಗ ಅರ್ಥವಾಗುತ್ತಿದ್ದು ಇದನ್ನು ನಮ್ಮ ದೇಶದಲ್ಲಿ ಈಗಲೇ ಕೊನೆಗಾಣಿಸಬೇಕಿದೆ' ಎಂದು ನುಡಿದರು. ಇಡೀ ದೇಶದಾದ್ಯಂತ ಎರಡು ದಶಕಗಳಿಂದ ದಲಿತರು ಮತ್ತು ಇತರ ಸಮಾನ ಮನಸ್ಕರು ನಡೆಸಿದ ಜಾತಿ/ಅಸ್ಪೃಶ್ಯತೆಯ ವಿರೋಧದಿಂದ ಸಂಸತ್ತಿನಲ್ಲಿ ಬಹಳಷ್ಟು ಸಂಸದರು ಜಾತಿ/ ಅಸ್ಪೃಶ್ಯತೆಯನ್ನು ವಿರೋಧಿಸುತ್ತ 'ನಮ್ಮ ದೇಶದಲ್ಲಿ ಇದಕ್ಕೆ ಜಾಗವಿಲ್ಲ. ಶೀಘ್ರವೇ ಇದಕ್ಕೆ ಸರಿಯಾದ ಕಾನೂನು ತರಬೇಕಿದೆ' ಎಂದು ಸರ್ಕಾರವನ್ನು ಒತ್ತಾಯಿಸಿದರು. ಕೊನೆಗೆ ಏಪ್ರಿಲ್ 2013ರಲ್ಲಿ 103 ಸಂಸದರು ಜಾತಿ/ಅಸ್ಪೃಶ್ಯತೆಯ ವಿರುದ್ಧ ಬಹುಮತ ಚಲಾಯಿಸಿ ಸಮಾನತೆ ಜಾತಿ ಆಕ್ಟ್ ತರಲು ನಾಂದಿ ಹಾಕಿದರು. ಆ ದಿನ ಬ್ರಿಟನ್‌ನ ಹಲವಾರು ಪ್ರದೇಶಗಳಿಂದ ಬಂದ ದಲಿತರು ಮತ್ತು ಸಾಮಾಜಿಕ ಪ್ರಜ್ಞೆಯುಳ್ಳವರು ಸಂಸತ್ತಿನ ಮುಂದೆ ನೆರೆದಿದ್ದರು. ಸರ್ಕಾರ ಸಮಾನತೆ ಮತ್ತು ಮಾನವ ಹಕ್ಕುಗಳ ಆಯೋಗವನ್ನು

ಜಾತಿ ಪೂರ್ವಾಗ್ರಹ ಕಿರುಕುಳ, ಅಪಮಾನ, ದೌರ್ಜನ್ಯಗಳ ಪೂರ್ವಾಪರ ರೀತಿಗಳನ್ನು ಸಂಗ್ರಹಿಸಿ ಕಾನೂನಿನಲ್ಲಿ ಅಳವಡಿಸಲು ಸಮಿತಿಯನ್ನು ನೇಮಿಸಿತು.

* * *

ಕೆನಡಾದಲ್ಲಿ ದಕ್ಷಿಣ ಪೂರ್ವ ದೇಶಗಳ 2 ಲಕ್ಷ ಜನರಿದ್ದಾರೆ. ಕಮಲೇಶ್ ಅಹಿರ್ ಎಂಬ ದಲಿತ ಮಹಿಳೆ ತನ್ನ ಇಡೀ ಜೀವಮಾನ ಭಾರತದಲ್ಲಿ ಅಸ್ಪೃಶ್ಯತೆಯಿಂದ ತಪ್ಪಿಸಿಕೊಳ್ಳಲು ಹೆಣಗಾಡಿ ಕೊನೆಗೆ ಈ ಪೀಡೆಯಿಂದ ತಪ್ಪಿಸಿಕೊಂಡೆ ಎಂದು ಕೆನಡಾದ ವ್ಯಾಂಕೋವರ್ ವಿಶ್ವವಿದ್ಯಾಲಯದಲ್ಲಿ 1994ರಲ್ಲಿ ಉಪನ್ಯಾಸಕಿಯಾಗಿ ಸೇರಿಕೊಂಡಳು. ಆದರೆ ಭಾರತದಿಂದ ವಲಸೆ ಹೋಗಿದ್ದ ಮೇಲ್ಜಾತಿಯ ಜನ ಅವಳ ಅಡ್ಡ ಹೆಸರು 'ಅಹಿರ್' ನೋಡಿ ಅವಳನ್ನು ದಲಿತಳೆಂದು ಗುರುತಿಸಿ ಹೀಯಾಳಿಸತೊಡಗಿದರು. ಅಹಿರ್ ಕೆನಡಾಗೆ ಬಂದರೂ ಜಾತಿ ಪೀಡೆ ತಪ್ಪಲಿಲ್ಲವಲ್ಲ ಎಂದು ದುಃಖ ಅನುಭವಿಸುತ್ತ 'ನಾವು ವೈದ್ಯರು, ಇಂಜಿನಿಯರು, ಉಪನ್ಯಾಸಕರಾಗಿ ಅತ್ಯಂತ ನುರಿತ ತಜ್ಞರಾಗಿ ಕಾರ್ಯ ನಿರ್ವಹಿಸಿದರೂ ನಮ್ಮನ್ನು ಅದೇ ರೀತಿ ನೋಡುತ್ತಾರೆ' ಎಂದು ವಿಷಾದ ಪಡುತ್ತಾರೆ. ಈ ತಾರತಮ್ಯ ರೇಸ್‌ನ ಆಧಾರದಿಂದಲ್ಲ, ಅದು ಹುಟ್ಟು, ಜಾತಿ, ವರ್ಣ, ಆರ್ಥಿಕ ಸ್ಥಿತಿ, ಮೂಲ ಪ್ರದೇಶ ಮತ್ತು ರಾಜಕೀಯದಿಂದ ಕೂಡಿರುತ್ತದೆ ಎನ್ನುತ್ತಾರೆ ಅಹಿರ್. ಬ್ರಿಟನ್ ಕೊಲಂಬಿಯಾದಲ್ಲಿ (ಕೆನಡಾದಲ್ಲಿ ಒಂದು ರಾಜ್ಯ) 20 ಸಾವಿರ ದಲಿತರಿದ್ದು ಹೊಸದಾಗಿ ಮಹಿಳೆಯರು ಎದುರಾದರೆ ಅವರು ಮೊದಲು ಕೇಳುವುದು ಪೂರ್ವದ ಹಳ್ಳಿ, ರಾಜ್ಯ, ಅಡ್ಡಹೆಸರು ಇತ್ಯಾದಿ. ಮುಖ ನೋಡಿದರೆ ಗೊತ್ತಾಗುತ್ತಲ್ಲ, ಇವಳು ದಲಿತಳೇ ಇರಬೇಕು ಎಂದು ಹಿಂದಿನಿಂದ ಮಾತನಾಡಿಕೊಳ್ಳುವುದು ಸರ್ವೇಸಾಮಾನ್ಯ. ಈ ಹಿಂದೂಗಳಿಗೆ ನಾನು ಯಾವುದರಲ್ಲೂ ಕಡಿಮೆ ಇಲ್ಲ ಎನ್ನುವ ಅಹಿರ್ ಕೊನೆಗೂ ಕೆನಡಾದಲ್ಲಿ ಬೌದ್ಧ ಧರ್ಮವನ್ನು ಅಪ್ಪಿಕೊಂಡು ಹಿಂದೂ ಧರ್ಮಕ್ಕೆ ಗುಡ್‌ಬೈ ಹೇಳಿಬಿಟ್ಟಳು. (Cherynchan, Post Media News, 3.10.2013).

ಹೊರ ದೇಶಗಳಲ್ಲಿನ ಸಮಸ್ಯೆಯೆಂದರೆ ನೀವು ಯಾವುದೇ ದೇಶದ ಜನರ ಒಟ್ಟಿಗೆ ಕೆಲಸ ಮಾಡಿ, ನೀವು ಯಾರು? ಯಾವ ಧರ್ಮ/ಜಾತಿಯೆಂದು ಕೇಳುವುದಿಲ್ಲ. ಭಾರತೀಯರ ಜೊತೆಗೂಡಿದರೆ ಸಾಕು, ಅವರು ಮೊದಲು ಹೇಗಾದರೂ ಮಾಡಿ ಜಾತಿಯನ್ನು ತಿಳಿದುಕೊಳ್ಳಲು ಹತ್ತಾರು ಪ್ರಯೋಗಗಳನ್ನು ಮಾಡುತ್ತಾರೆ. ಇನ್ನು ಜಾತಿ ಎನ್ನುವುದು ಮದುವೆಯ ವಿಷಯದಲ್ಲಂತೂ ಎದ್ದು ತಲೆ ಕೊಡವಿ ಹಾವಿನಂತೆ ನಿಂತುಬಿಡುತ್ತದೆ. ಈ ಕಾರಣಕ್ಕಾಗಿ ಬಹಳಷ್ಟು ಪೋಷಕರು ತಮ್ಮ ಮಗಳು, ತಮ್ಮದೇ ಜಾತಿಯಲ್ಲಿ ಮದುವೆಯಾಗಲು ಬಯಸುತ್ತಾರೆ. ಅಪವಾದವೆಂಬಂತೆ ಇಲ್ಲಿ ಕೆನಡಾದಲ್ಲಿ ಅಂತರ್ಜಾತೀಯ ಮದುವೆಗಳಿಗಿಂತ (ಹಿಂದೂಗಳ ನಡುವೆ) ಅಂತರ್ ಧರ್ಮೀಯ ಮದುವೆಗಳು ಹೆಚ್ಚು ನಡೆಯುತ್ತಿವೆ.

## ಅಧ್ಯಾಯ-7

ನಾನು ಕರಗುವ ಮಣ್ಣಲ್ಲ, ನದಿಯ ದಿಕ್ಕನ್ನು ಬದಲಿಸಬಲ್ಲ ಕಲ್ಲುಬಂಡೆ

-ಅಂಬೇಡ್ಕರ್.

# ಜಾತಿಗಳ ಮೂಲ

ಬಹಳಷ್ಟು ಹಿಂದೂಗಳನ್ನು ಜಾತಿ ಮತ್ತು ಅಸ್ಪೃಶ್ಯತೆಯ ಬಗ್ಗೆ ಕೇಳಿದಾಗ ಅವರು ಮೊದಲು ಹೇಳುವುದೆಂದರೆ ಯಾವ ವೇದ, ಉಪನಿಷತ್ತು, ಧರ್ಮಶಾಸ್ತ್ರಗಳಲ್ಲೂ ಜಾತಿಗಳ ಬಗ್ಗೆಯಾಗಲಿ, ಅಸ್ಪೃಶ್ಯತೆಯ ಬಗ್ಗೆಯಾಗಲಿ ಬರೆದಿಲ್ಲ, ಇದೆಲ್ಲ ಇತ್ತೀಚೆಗೆ ಸೃಷ್ಟಿಸಲ್ಪಟ್ಟ ಕಟ್ಟುಕಥೆಗಳು ಎಂದು. ಮನುಸ್ಮೃತಿಯನ್ನು ಗಮನಕ್ಕೆ ತಂದಾಗ ಅವರು ಕಸಿವಿಸಿಗೊಳ್ಳುತ್ತಾರೆ. ಮತ್ತೆ ಜಾತಿ, ಅಸ್ಪೃಶ್ಯತೆ ಮನುವಿನ ವರ್ಣಾಶ್ರಮದಿಂದ ಸೃಷ್ಟಿಯಾದುದಲ್ಲ ಎಂದು ವಾದಿಸುತ್ತಾರೆ. ಆರ್ಯರಿಂದ ಸೃಷ್ಟಿಯಾದ ಎಲ್ಲಾ ವೇದ, ಧರ್ಮಶಾಸ್ತ್ರಗಳಿಂದ ಹಿಡಿದು ರಾಮಾಯಣ, ಮಹಾಭಾರತಗಳು ಸಹ ವರ್ಣಾಶ್ರಮ, ಕರ್ಮಫಲ, ಪುನರ್ಜನ್ಮ, ಜಾತಿಪದ್ಧತಿ, ಅಸ್ಪೃಶ್ಯತೆ, ಮೇಲುಕೀಳೆಂಬ ತಾರತಮ್ಯಗಳಿಂದ ತುಂಬಿ ತುಳುಕಾಡುತ್ತಿವೆ ಎನ್ನುವುದು ಮಾತ್ರ ಸತ್ಯ.

ಹಿಂದೂ ಧರ್ಮದ ನಿಯಮಗಳನ್ನು ನಿರೂಪಿಸಲು ಅಧಿಕಾರವಿರುವ ಅಥವಾ ಹಿಂದೂಗಳು ಮಾನ್ಯತೆ ನೀಡಿರುವ ಪ್ರಮುಖ ಧರ್ಮಶಾಸ್ತ್ರಕಾರರಾದ ಮನು, ಯಾಜ್ಞವಲ್ಕ್ಯ, ನಾರದ, ವಿಷ್ಣು, ಕಾತ್ಯಾಯನ ಮುಂತಾದವರು ಸೃಷ್ಟಿಸಿದ ಧರ್ಮಶಾಸ್ತ್ರಗಳಿಂದ ಆಯ್ದುಕೊಳ್ಳಲಾದ ಕೆಲವು ನಿಯಮಗಳು ಹೀಗೆ ಹೇಳುತ್ತವೆ :

ವಿಶ್ವವು ಮೊದಲಿಗೆ ಕತ್ತಲೆಯ ಸ್ವರೂಪದಲ್ಲಿತ್ತು. ಆಮೇಲೆ ದಿವ್ಯಾತ್ಮ ಸ್ವರೂಪದ ಸ್ವಯಂಭು, ಮಹಾನ್ ಭೂತಗಳು ಇತ್ಯಾದಿಗಳನ್ನು ಸೃಷ್ಟಿಸಿ ತನ್ನ ಅಪ್ರತಿಮವಾದ ಸೃಷ್ಟಿ ಶಕ್ತಿಯಿಂದ ಈ ಕತ್ತಲನ್ನು ಹೋಗಲಾಡಿಸಿದನು (ಮನು ಅ 1 ಶ್ಲೋಕ 6). ವಿಶ್ವದ ಏಳಿಗೆಗಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ತನ್ನ ಬಾಯಿ, ಭುಜ, ತೊಡೆ ಮತ್ತು ಪಾದಗಳಿಂದ ಉದ್ಭವಿಸುವಂತೆ ಅವನು ಸೃಷ್ಟಿಸಿದ (ಮನು ಅ 1 ಶ್ಲೋಕ 31). ವಿಶ್ವವನ್ನು ರಕ್ಷಿಸುವ ಸಲುವಾಗಿ ಆ ದೇದೀಪ್ಯಮಾನ ಸ್ವಯಂಭು ಮೇಲಿನ ನಾಲ್ವರಿಗೂ ಬೇರೆ ಬೇರೆ ಕರ್ತವ್ಯಗಳನ್ನು ಮತ್ತು ಕರ್ಮಗಳನ್ನು ಗೊತ್ತುಪಡಿಸಿದ (ಮನು ಅ 1 ಶ್ಲೋಕ 87).

ಈ ಸ್ವಯಂಭು ಬರೀ ಭಾರತದ ಕತ್ತಲು ಖಂಡಕ್ಕೆ ಅದೂ ಹಿಂದೂಗಳ ಸೃಷ್ಟಿಗೆ ಮಾತ್ರ ತನ್ನನ್ನು ಸೀಮಿತಗೊಳಿಸಿಕೊಂಡಿರುವುದು ಖೇದವೆನಿಸುತ್ತದೆ. ವಿಶ್ವದಲ್ಲಿರುವ ಇನ್ನಿತರ ಮತಗಳವರು ಹೇಗೆ ಸೃಷ್ಟಿಯಾದರು? ಇನ್ನು ಡಾರ್ವಿನ್‌ನ ವಿಕಾಸವಾದ,

ಆಧುನಿಕ ವಿಜ್ಞಾನ ಇವೆಲ್ಲವನ್ನು ಎಲ್ಲಿಗೆ ಕೊಂಡೊಯ್ಯಬೇಕು? ಈ ವಿಷಯಕ್ಕೆ ಬಂದಾಗ ಮಹಮ್ಮದೀಯರ ಖುರಾನಾಗಲಿ, ಕ್ರಿಶ್ಚಿಯನ್ನರ ಬೈಬಲ್ಲಾಗಲಿ ಅಷ್ಟೇ ಅನುಮಾನಾಸ್ಪದ ವಿವರಗಳಿಂದಲೇ ತುಂಬಿದ ವಿಷಯಗಳನ್ನೇ ಎತ್ತಿ ಸಾರುತ್ತವೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಬ್ರಾಹ್ಮಣರಿಗೆ ನೀಡಿರುವ ಕೆಲಸಗಳೆಂದರೆ ವೇದಾಧ್ಯಯನ ಮತ್ತು ಅಧ್ಯಾಪನ; ವಿಶ್ವದ ಶ್ರೇಯಸ್ಸಿಗಾಗಿ ಯಜ್ಞಾದಿ ವಿಧಿಗಳನ್ನು ನಡೆಸುವುದು. ಕ್ಷತ್ರಿಯರ ಕರ್ತವ್ಯವೆಂದರೆ ಪ್ರಜಾರಕ್ಷಣೆ, ದಾನ ಮಾಡುವುದು, ಯಜ್ಞಗಳನ್ನು ನೆರವೇರಿಸಲು ಸಹಾಯ ಮಾಡುವುದು. ವೈಶ್ಯರ ಕರ್ತವ್ಯವೆಂದರೆ ಪಶುಪಾಲನೆ, ದಾನ ಮಾಡುವುದು ಮತ್ತು ಯಜ್ಞಾದಿಗಳನ್ನು ನೆರವೇರಿಸಲು ನೆರವಾಗುವುದು. ಇನ್ನು ಭಗವಂತನು ಶೂದ್ರನಿಗೆ ಒಂದೇ ಒಂದು ಕರ್ತವ್ಯವನ್ನು ಪಾಲಿಸಲು ಆಜ್ಞೆ ಮಾಡಿದ; ಅದೆಂದರೆ ಮೇಲಿನ ಮೂರು ವರ್ಣಗಳವರನ್ನು ನಮ್ರತೆಯಿಂದ ಶುಶ್ರೂಷೆ ಮಾಡುವುದು.

ಕಾನೂನಿನನ್ವಯ ಋಷಿಗಳು ಐದು ವಿವಿಧ ಸೇವಕರನ್ನು ವಿಂಗಡಿಸಿದ್ದಾರೆ. ಐದನೆಯವರೆಂದರೆ ದಾಸರು ಅಥವಾ ಗುಲಾಮರು. ಅದರಲ್ಲೂ ಹದಿನೈದು ವಿಧದವರಿದ್ದಾರೆ (ನಾರದ ಸ್ಮೃತಿ ಅ 5 ಶ್ಲೋಕ 2). ಪರತಂತ್ರವು ಎಲ್ಲಾ ವಿಧದವರಿಗೂ ಸಾಮಾನ್ಯ ಲಕ್ಷಣವೆಂದು ಮುನಿಗಳು ಘೋಷಿಸಿದ್ದರು. ಅವರವರ ಸ್ಥಾನ ಮತ್ತು ವರಮಾನ ಅವರವರ ಜಾತಿ ಮತ್ತು ಕರ್ಮ(ಕೆಲಸ)ಗಳಿಗೆ ಅನುಸಾರವಾಗಿ ತೀರ್ಮಾನಿಸಲ್ಪಡುತ್ತದೆ (ನಾರದ ಸ್ಮೃತಿ ಅ 5 ಶ್ಲೋಕ 4).

ಇಬ್ಬರ ನಡುವೆ ಬೈದಾಟ ನಡೆದಿದ್ದರೆ ಅವರು ಸಮಾನ ಜಾತಿಯವರಾಗಿದ್ದಲ್ಲಿ ಅವರಿಬ್ಬರಿಗೂ ಶಿಕ್ಷೆ ಸಮಾನವಾಗಿರುತ್ತದೆ. ಒಬ್ಬನು ಕೀಳು ಜಾತಿಯವನಾಗಿದ್ದಲ್ಲಿ ಅವನಿಗೆ ಶಿಕ್ಷೆ ದ್ವಿಗುಣವಾಗಿರುತ್ತದೆ (ಬೃಹಸ್ಪತಿ ಅ 20 ಶ್ಲೋಕ 5). ಒಂದು ಸಲ ಜನ್ಮತಾಳಿದಂತಹ ಶೂದ್ರನೊಬ್ಬನು ಎರಡು ಸಲ ಜನ್ಮತಾಳಿದಂತಹ ದ್ವಿಜನೊಬ್ಬನನ್ನು ಅವಾಚ್ಯ ಬೈಗುಳದಿಂದ ಮುಖಭಂಗ ಮಾಡಿದರೆ ಅವನ ನಾಲಿಗೆಯನ್ನು ಕತ್ತರಿಸಿ ಹಾಕಬೇಕು; ಏಕೆಂದರೆ ಅವನು ಹೀನ ಜಾತಿಯವನು (ಮನುಸ್ಮೃತಿ ಅ 8 ಶ್ಲೋಕ 270) ಅಥವಾ ಹತ್ತು ಅಂಗುಲ ಉದ್ದದ ಕಬ್ಬಿಣದ ಮೊಳೆಯನ್ನು ಕೆಂಪಾಗಿ ಕಾಯಿಸಿ ಅದನ್ನು ಅವನ ಗಂಟಲಲ್ಲಿ ತುರುಕಬೇಕು (ಮನುಸ್ಮೃತಿ ಅ 8 ಶ್ಲೋಕ 271). ಕೆಳಜಾತಿಯವನೊಬ್ಬ ಮೇಲ್ವರ್ಗದ ಮೂರು ಜಾತಿಗಳ ಯಾರನ್ನಾದರೂ ಗಾಯಗೊಳಿಸಿದರೆ ಅವನು ತನ್ನ ಯಾವ ಅಂಗದಿಂದ ಹಾಗೆ ಗಾಯಗೊಳಿಸಿರುತ್ತಾನೋ ಆ ಅಂಗವನ್ನು ಕತ್ತರಿಸಿ ಹಾಕಬೇಕು (ಮನುಸ್ಮೃತಿ ಅ 8 ಶ್ಲೋಕ 279). ಕೀಳು ಜಾತಿಯವನೊಬ್ಬ ತನ್ನ ಕೈಯಿಂದ ಅಥವಾ ದೊಣ್ಣೆಯಿಂದ ಮೇಲ್ಜಾತಿಯವನನ್ನು ಹೊಡೆದರೆ ಅವನ ಕೈಯನ್ನು ಕಡಿದುಹಾಕಬೇಕು. ಕಾಲಿಂದ ಒದ್ದರೆ ಅವನ ಕಾಲನ್ನು ಕತ್ತರಿಸಬೇಕು. (ಮನುಸ್ಮೃತಿ ಅ 4 ಶ್ಲೋಕ 280). ಕೀಳು ಜಾತಿಯವನು, ಮೇಲ್ಜಾತಿಯವನು ಕುಳಿತಿರುವ ಒಂದೇ ಆಸನದಲ್ಲಿ ಕುಳಿತುಕೊಳ್ಳಲು ಪ್ರಯತ್ನಿಸಿದರೆ ಅವನ ಕುಂಡಿಗಳ ಮೇಲೆ ಬರೆ ಹಾಕಬೇಕು ಅಥವಾ ಅವನ ಕುಂಡಿಗಳನ್ನು ಕೊಚ್ಚಿ ಹಾಕಬೇಕು (ಮನುಸ್ಮೃತಿ ಅ 8 ಶ್ಲೋಕ 281). ಕೀಳು ಜಾತಿಯವನು ಮೇಲ್ಜಾತಿಯವನ ಮೇಲೆ ಉಚ್ಚೆ ಹುಯ್ದರೆ ಅವನ ಶಿಶ್ನವನ್ನು, ಹೂಸು ಬಿಟ್ಟರೆ ಅವನ ಗುದಸ್ಥಾನವನ್ನು ಕತ್ತರಿಸಿ ಹಾಕಬೇಕು (ಮನುಸ್ಮೃತಿ ಅ 8 ಶ್ಲೋಕ 282).

ಇವು ಹಿಂದೂಗಳ ಪವಿತ್ರವಾದ ಕೆಲವು ಗ್ರಂಥಗಳಲ್ಲಿ ದೊರಕುವ ಅಣಿಮುತ್ತುಗಳು.

ಯಾರೇ ಆಗಲಿ ಕಪ್ಪು ಚರ್ಮದ ಹುಲ್ಲೆ ಮೇಲೆ ಕುಳಿತಿರುವವರು ಎಳ್ಳು, ಚಿನ್ನ, ಜೇನು ಮತ್ತು ಬೆಣ್ಣೆ ಬ್ರಾಹ್ಮಣನಿಗೆ ನೀಡಿದರೆ ಅವರ ಎಲ್ಲಾ ಪಾಪಗಳು ನಿವಾರಣೆಯಾಗುತ್ತವೆ (Vasishtha p-135). ಆಪಸ್ತಂಭದಲ್ಲಿ, ರಾಜನು ಯಾವ ಪೂರ್ವಾಗ್ರಹವೂ ಇಲ್ಲದೆ ಅರ್ಹ ಬ್ರಾಹ್ಮಣರಿಗೆ ನೆಲ ಮತ್ತು ಹಣವನ್ನು ನೀಡಿದರೆ ಆತ ಸ್ವರ್ಗಕ್ಕೆ ಹೋಗುತ್ತಾನೆ. ಆದರೆ ಬ್ರಾಹ್ಮಣ ಅದನ್ನು ಸಂತೋಷದಿಂದ ಸ್ವೀಕರಿಸಬೇಕು, ಇಲ್ಲವೆಂದರೆ ಪ್ರಯೋಜನವಿಲ್ಲ. ಒಂದು ರೀತಿಯಲ್ಲಿ ಬ್ರಾಹ್ಮಣ ಭೂಮಿಯ ದೇವತೆ. ಮಹಾಭಾರತದ ಒಂದು ಕಡೆ ಹೀಗಿದೆ: ಇದ್ದಿದ್ದು ಒಂದೇ ವರ್ಣ, ಅದು ಬ್ರಾಹ್ಮಣ ಎಂಬ ವರ್ಣ. ಉಳಿದ ವರ್ಣಗಳು ಈ ವರ್ಣದಿಂದ ಬಂದ ಮಾರ್ಪಾಡುಗಳು (Mahabharata, Shanti Parva pp-50.59). ಗೌತಮನ ಪ್ರಕಾರ ವೈದಿಕ ಸಾಹಿತ್ಯದಲ್ಲಿ ಹೇಳಿರುವಂತೆ ಬ್ರಾಹ್ಮಣರಿಗೆ ಸಹಾಯ ಮಾಡುವ ಕ್ಷತ್ರಿಯ ಅಭಿವೃದ್ಧಿ ಹೊಂದುವನು. ಈ ಇಬ್ಬರ ಹೊಂದಾಣಿಕೆಯಿಂದ ನೈತಿಕತೆಯನ್ನು ಎತ್ತಿ ಹಿಡಿಯಲಾಗುತ್ತದೆ. ಆದರೆ ಬ್ರಾಹ್ಮಣ ಮತ್ತು ಕ್ಷತ್ರಿಯ ಒಂದೇ ರಸ್ತೆಯಲ್ಲಿ ನಡೆದು ಹೋಗುವಾಗ ಆ ರಸ್ತೆ ಬ್ರಾಹ್ಮಣನಿಗೆ ಸೇರುತ್ತದೆ ಎನ್ನುತ್ತಾನೆ ಗೌತಮ (Gautama p.235).

ದೇವರು ಶೂದ್ರನನ್ನು ಸೃಷ್ಟಿಸಿದ್ದೆ ಮೇಲಿನ ಮೂರು ವರ್ಣಗಳ ಜನರಿಗೆ ಸೇವೆ ಮಾಡುವುದಕ್ಕೆ. ಆತ ಈ ಮೂರು ವರ್ಣಗಳ ಜನರು ಉಪಯೋಗಿಸಿ ಬಿಸಾಕಿದ ಬಟ್ಟೆಗಳನ್ನು ತೊಡಬೇಕು ಮತ್ತು ಅವರು ತಿಂದು ಉಳಿದ ಆಹಾರವನ್ನು ಮಾತ್ರ ಸೇವಿಸಬೇಕು. ಶೂದ್ರ, ಆರ್ಯರ ತದ್ವಿರುದ್ಧ, ಕಡಿಮೆ ವಯಸ್ಸಿನ ಆರ್ಯ ಬಂದಿದ್ದೆ ಹೆಚ್ಚು ವಯಸ್ಸಿನ ಶೂದ್ರ ಎದ್ದು ನಿಂತುಕೊಳ್ಳಬೇಕು (Gautama p-206). ವೈದಿಕ ಸಾಹಿತ್ಯದಲ್ಲಿ ದಾಸ ಜನಾಂಗವನ್ನು ಕಪ್ಪು ಜನಾಂಗ ಎಂದು ಕರೆಯಲಾಗಿದೆ, ಗೌತಮನ ಕಾಲದಲ್ಲಿ ಇದನ್ನು ಶೂದ್ರ ಜನಾಂಗಕ್ಕೆ ನೀಡಲಾಯಿತು (Apastamba, p-87). ಮಹಾಭಾರತದಲ್ಲಿ ಹೇಳಿರುವಂತೆ ಶೂದ್ರ ಯಾವುದೇ ನೆಲ, ವಸ್ತುಗಳಿಗೆ ಒಡೆಯ ಆಗಲಾರ. ಆಗಿದ್ದರೂ ಅದನ್ನು ಅವನ ಬ್ರಾಹ್ಮಣ ಒಡೆಯ ವಶಪಡಿಸಿಕೊಳ್ಳಬಹುದು. ಶೂದ್ರನ ಒಡೆಯ ಯಾತನೆಗೆ ಒಳಗಾದಾಗ ಇಲ್ಲ ಆಸ್ತಿ ಕಳೆದುಕೊಂಡಾಗ ಶೂದ್ರನ ಆಸ್ತಿಯನ್ನು ಮಾರಿಕೊಳ್ಳಬಹುದು (Gautama, p-231). ಗೌತಮನ ಪ್ರಕಾರ, ಜನರು ತಮ್ಮ ತಮ್ಮ ಜಾತಿ ಜನಾಂಗಗಳಿಗೆ ನಿಗದಿಪಡಿಸಿದ ಪ್ರಕಾರ ನಡೆದುಕೊಂಡರೆ, ಮುಂದಿನ ಜನ್ಮದಲ್ಲಿ ಉಚ್ಚ ಜಾತಿ, ಒಳ್ಳೆ ಕುಟುಂಬ ಮತ್ತು ಒಳ್ಳೆ ಪ್ರದೇಶಗಳಲ್ಲಿ ಹುಟ್ಟುತ್ತಾರೆ ಎಂದು ಹೇಳುತ್ತಾನೆ. ಅದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಮುಂದಿನ ಜನ್ಮದಲ್ಲಿ ವಿವಿಧ ರೂಪಗಳಲ್ಲಿ ದುಷ್ಟರಾಗಿ ಜನಿಸಿ ಅನೇಕ ರೀತಿಯ ಪಾಪಗಳನ್ನು ಅನುಭವಿಸುತ್ತಾರೆ.

ಶೂದ್ರ ಮೇಲಿನ ಮೂರು ವರ್ಣಗಳ ಮಹಿಳೆಯರ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದರೆ ಆತನಿಗೆ ಮರಣದಂಡನೆ ವಿಧಿಸಬೇಕು ಇಲ್ಲ ಹುಲ್ಲಿನಲ್ಲಿ ಹಾಕಿ ಬೆಂಕಿ ಹಚ್ಚಬೇಕು (Apastamba, p-165). ಮುಂದುವರಿಯುತ್ತ ಬ್ರಾಹ್ಮಣ, ಶೂದ್ರ ಮಹಿಳೆಯನ್ನು ಮದುವೆ ಮಾಡಿಕೊಂಡಿದ್ದನ್ನು ಪರಿಗಣಿಸಲಾಗಿದೆಯಾದರೂ, ಅದು ಧರ್ಮದ ಪ್ರಕಾರ ನಿಜವಾದ ಮದುವೆಯಲ್ಲ. ಬ್ರಾಹ್ಮಣ ಆಕೆಯನ್ನು ಸಂತೋಷಕ್ಕಾಗಿ ಇಟ್ಟುಕೊಂಡ ಪತ್ನಿಯಾಗುತ್ತಾಳೆ (Vasishtha p.96). ಬ್ರಾಹ್ಮಣ, ಶೂದ್ರ ಮಹಿಳೆಯ

ಜೊತೆಗೆ ಬದುಕುವುದೆಂದರೆ ಪಾಪ (Baudhayana, p.313; Apastamba, p.84). ಶೂದ್ರ, ಆರ್ಯ ಮಹಿಳೆಯ ಜೊತೆಗೆ ಸಂಬಂಧ ಮಾಡಿದರೆ ಆತನ ಮರ್ಮಾಂಗವನ್ನು ಕತ್ತರಿಸಿ ಹಾಕಬೇಕು ಮತ್ತು ಆತನ ಆಸ್ತಿಯನ್ನು ಕಿತ್ತುಕೊಳ್ಳಬೇಕು. ಶೂದ್ರ ಅತಿಥಿಯಾಗಿ ಬಂದರೆ ಸೇವಕರ ಜೊತೆಗೆ ಆಹಾರ ನೀಡಬೇಕು, ಅದೂ ಕೂಡ ಆತನಿಂದ ಏನಾದರು ಕೆಲಸವನ್ನು ಮಾಡಿಸಿಕೊಂಡ ಮೇಲೆ. ಒಟ್ಟಿನಲ್ಲಿ ಶೂದ್ರ ಎಲ್ಲದಕ್ಕೂ ಅನರ್ಹ (Gautama, p.236; Gautama, p.204.5). ಆದರೂ ಶೂದ್ರ ಮಹಿಳೆಯರನ್ನು ಕ್ಷತ್ರಿಯ ರಾಜರು ಮದುವೆ ಮಾಡಿಕೊಂಡಿರುವ ಉದಾಹರಣೆಗಳು ಉಂಟು. ರಾಮಾಯಣದ ದಶರಥ ರಾಜನ ಮೂವರು ಪಟ್ಟದ ರಾಣಿಯರಲ್ಲಿ ಒಬ್ಬಳಾದ ಸುಮಿತ್ರಾ ಶೂದ್ರಳು. ಪ್ರಖ್ಯಾತ ರಾಜನಾದ ಚಂದ್ರಗುಪ್ತನು ಸಾಂಪ್ರದಾಯಿಕವಾಗಿ ಶೂದ್ರ ಜನಾಂಗಕ್ಕೆ ಸೇರಿದವನು. ದಖ್ಖನ್ ಪ್ರದೇಶವನ್ನು ಸ್ವಲ್ಪ ಕಾಲ ಆಳಿದ ಅಭಿರಾಸ ಪತಂಜಲಿಯ ಪ್ರಕಾರ ಶೂದ್ರನೆ.

ಪ್ರಖ್ಯಾತ ಚರಿತ್ರೆಕಾರ ಜಿ. ಎಸ್. ಘುರ್ಯೆ ತನ್ನ Caste and Race in India ಕೃತಿಯಲ್ಲಿ ಹೇಳುವಂತೆ ಬ್ರಾಹ್ಮಣರ ಅಟ್ಟಹಾಸವನ್ನು ಚರಿತ್ರೆಯ ಉದ್ದಕ್ಕೂ ಸಹಿಸಿಕೊಳ್ಳಲಾರದೆ ಹೋದ ಕ್ಷತ್ರಿಯರು ತಮ್ಮ ಅನುಯಾಯಿಗಳ ಮೂಲಕ ಬ್ರಾಹ್ಮಣ ಧರ್ಮವನ್ನು ಹತ್ತಿಕ್ಕಲು ಬೌದ್ಧ ಮತ್ತು ಜೈನ ಧರ್ಮಗಳನ್ನು ಸ್ಥಾಪಿಸಿ ಚಳುವಳಿಗಳ ಮೂಲಕ ಅಸಾಧಾರಣ ಸಾಮರ್ಥ್ಯದಿಂದ ಹೊಸ ತತ್ವಗಳನ್ನು ಬೋಧಿಸತೊಡಗಿದರು. ಬ್ರಾಹ್ಮಣರ ಮೇಲೆ ಸಾಮಾಜಿಕ ಶ್ರೇಷ್ಠತೆಯನ್ನು ಸ್ಥಾಪಿಸಿಕೊಳ್ಳುವ ಅವಸರ ಅವರಿಗೆ ತೀರಾ ಅಗತ್ಯವಾಗಿತ್ತು.

ಸಮಾಜದಲ್ಲಿ ನಿಯಮ ಮತ್ತು ನಿಬಂಧನೆಗಳು ವರ್ಣಗಳ ಮೇಲೆ ಆಧಾರ ಪಟ್ಟಿರುತ್ತವೆ. ನಾಲ್ಕು ವರ್ಣಗಳ ಜನರಿಗೆ ಮಾತ್ರ ಇವು ಅನ್ವಯಿಸುತ್ತವೆ. ಉಳಿದ ಮಿಶ್ರಣ ಜಾತಿಗಳು, ಮತ್ತು ಬಹಿಷ್ಕೃತ ಜಾತಿಗಳ ಹೆಸರುಗಳಿದ್ದರೂ ಅವರ ಬಗ್ಗೆ ಕಾನೂನುಗಳು ಏನೂ ಹೇಳುವುದಿಲ್ಲ. ಬ್ರಾಹ್ಮಣರು ಎಲ್ಲವನ್ನು ಅನುಸರಿಸಬಹುದು, ಕ್ಷತ್ರಿಯ ನಾಲ್ಕರಲ್ಲಿ ಮೂರುಭಾಗ, ವೈಶ್ಯ ಅರ್ಧ, ಶೂದ್ರ ಕಾಲು ಭಾಗ ಮಾತ್ರ (Mahabharata, Shanti Parva, pp.34,32.3). ವಿದ್ಯಾರ್ಥಿ ಭಿಕ್ಷೆ ಬೇಡುವಾಗ ತನ್ನ ಜಾತಿಗೆ ತಕ್ಕಹಾಗೆ ವಿವಿಧ ಸೂತ್ರಗಳನ್ನು ಬಳಸಿ ಭಿಕ್ಷೆ ಬೇಡಬೇಕು. ಮದುವೆಯ 8 ರೀತಿಗಳಲ್ಲಿ ಪ್ರತಿ ಜಾತಿಯೂ ತನಗೆ ನಿಗದಿಪಡಿಸಿದ ರೀತಿಯಲ್ಲಿ ಮದುವೆ ಮಾಡಬೇಕು. ನೀರು ಕುಡಿಯುವುದು ಶುದ್ಧೀಕರಣಕ್ಕಾದ್ದರಿಂದ ಅದು ಹೃದಯವನ್ನು ಮುಟ್ಟಬೇಕು, ಹಾಗೇ ಗಂಟಲು, ಬಾಯಿಯ ಒಳಗನ್ನು. ಶೂದ್ರನಿಗಾದರೆ ತುಟಿಗಳನ್ನು ಮುಟ್ಟಿದರೆ ಸಾಕು (Baudhayana, p.167). ಜಾತಿ ಉನ್ನತವಾದಷ್ಟು ಹುಟ್ಟು ಸಾವುಗಳ ಸಮಯದಲ್ಲಿ ಅಶುದ್ಧತೆಯನ್ನು ಆಚರಿಸುವ ಕಾಲ ಕಡಿಮೆಯಿರುತ್ತದೆ (Vasishtha p.29). ಅತಿಥಿಯನ್ನು ಆರೋಗ್ಯದ ಬಗ್ಗೆ ವಿಚಾರಿಸುವ ರೀತಿಯು, ಅತಿಥಿಯ ಜಾತಿಯ ಮೇಲೆ ಆಧಾರಪಟ್ಟಿರುತ್ತದೆ. ಬ್ರಾಹ್ಮಣರ ಬಗ್ಗೆ ಕುಶಲ, ಕ್ಷತ್ರಿಯರ ಬಗ್ಗೆ ಅನಮಯ, ವೈಶ್ಯ ಮತ್ತು ಶೂದ್ರರನ್ನು ಕೇಳುವಾಗ ಆರೋಗ್ಯ ಎಂಬ ಪದಗಳನ್ನು ಬಳಸಬೇಕು.

ಪತಂಜಲಿ ಪ್ರಕಾರ ಶೂದ್ರರಲ್ಲಿ ಮುಖ್ಯವಾಗಿ 5 ಗುಂಪುಗಳು: ಒಂದು, ಶಾಕಾ ಮತ್ತು ಯವನರು, ಇವರು ಆರ್ಯಾವರ್ತದ (ಆರ್ಯರು ನೆಲೆಸಿರುವ ಸ್ಥಳ) ಹೊರಗೆ

ಇರುತ್ತಾರೆ. ಎರಡು, ಚಂಡಾಲ ಮತ್ತು ಡೋಮರು, ಇವರು ಆರ್ಯರ ಹಳ್ಳಿ ಮತ್ತು ಪಟ್ಟಣಗಳ ಸರಹದ್ದುಗಳಲ್ಲಿ ನೆಲೆಸಿರುತ್ತಾರೆ. ಮೂರು, ಬಡಗಿಗಳು, ಬಟ್ಟೆ ಒಗೆಯುವವರು, ಕಮ್ಮಾರರು ಮತ್ತು ನೇಕಾರರ ಗುಂಪುಗಳು. ನಾಲ್ಕು, ಅನೇಕ ರೀತಿಯ ಇತರೆ ಶೂದ್ರರ ಗುಂಪುಗಳು. ಐದು, ಇವರಲ್ಲದೆ ಇನ್ನೊಂದು ಗುಂಪಿನ ಜನರೂ ಇದ್ದು ಅವರು ಆರ್ಯರ ಹಳ್ಳಿಪಟ್ಟಣಗಳಿಂದ ದೂರದಲ್ಲಿ ನೆಲೆಸಿರುತ್ತಾರೆ (Vasishtha p.92).

ಜಾತಿಗಳು, ಭಾರತೀಯ ಸಾಮಾಜಿಕ ಸಂಘಟನೆಯ ಮೇಲೆ ಮೆಗಾಸ್ತನೀಸ್ ಕಾಲದಿಂದಲೂ ಎಷ್ಟೊಂದು ಗಾಢವಾದ ಪರಿಣಾಮವನ್ನು ಬೀರಿವೆಯೆಂದರೆ, ವಿದೇಶಗಳಿಂದ ಬಂದಂತಹ ಚರಿತ್ರೆಕಾರರು, ಪ್ರವಾಸಿಗರು, ಆಡಳಿತಗಾರರು ಮತ್ತು ಸಂಸ್ಕೃತ ಕಲಿಯಲು ಬಂದ ಎಲ್ಲರನ್ನು ಹಿಂದೂ ಧರ್ಮ ಮತ್ತು ಜಾತಿಗಳು ಆಕರ್ಷಿಸದೆ ಬಿಡಲಿಲ್ಲ. ಹಿಂದೂ ಸಾಮಾಜಿಕ ಪದ್ಧತಿಯ ಒಳಗೆ ಜಾತಿಯ ಅಳವಡಿಕೆಯ ವಿವರಣೆಗಳನ್ನು ವಿವರಿಸಲು ಹಲವರು ಪ್ರಯತ್ನಪಟ್ಟರು. ಜಾತಿಯ ಉಗಮ ಮತ್ತು ಬೆಳವಣಿಗೆಯ ಬಗ್ಗೆ ವಿಸ್ತಾರವಾದ ಸಮಗ್ರ ಅಧ್ಯಯನ ಪ್ರಾರಂಭವಾಗಿದ್ದು ಡೆಂಜಿಲ್ ಇಬ್ಬೆಟ್ಸನ್ ಮತ್ತು ಜೆ. ಸಿ. ನೆಸ್‌ಫೀಲ್ಡ್‌ರಿಂದ ಎನ್ನಬಹುದು. ಇವರಿಬ್ಬರು ಜಾತಿಗಳ ಬಗ್ಗೆ ಮೇಲಿನಂತೆ ವ್ಯಾಖ್ಯಾನಿಸಿದ್ದಾರೆ (Risley,(2) pp.263.5).

ದ್ರಾವಿಡರಿಗಿಂತ ಮುಂಚೆ, ಕೆಲವು ದ್ರಾವಿಡ ಪೂರ್ವ ಜನಾಂಗಗಳು ದಕ್ಷಿಣ ಭಾರತದ ಕಾಡುಗಳಲ್ಲಿ ಇದ್ದರು. ಇದೇ ಜನಾಂಗಗಳಿಗೆ ಸೇರಿದವರು ಪಶ್ಚಿಮ ಭಾರತ, ಮಧ್ಯ ಭಾರತದ ಬೆಟ್ಟಗಳಲ್ಲಿ, ರಾಜಸ್ತಾನ ಮತ್ತು ಉತ್ತರ ಪ್ರದೇಶಗಳಲ್ಲೂ ಹರಡಿಕೊಂಡಿದ್ದರು. ಬಹುಶಃ ಇವರೇ ದಕ್ಷಿಣ ಭಾರತದ ಮೂಲ ಜನಾಂಗಗಳು ಇರಬೇಕು. ಅನಂತರದ ಕಾಲದಲ್ಲಿ ಈ ಪ್ರದೇಶಗಳಿಗೆ ವಲಸೆಗಾರರ ದಾಳಿ ನಡೆದುದರಿಂದ ಇವರು ಕಾಡುಗಳ ಮಧ್ಯಕ್ಕೆ ಹೋಗಬೇಕಾಯಿತು. ದ್ರಾವಿಡರೆ ಆ ವಲಸೆಗಾರರಾಗಿರಬೇಕು. ಇರುಲ, ಕದಿರ್, ಕನಿಕರ್, ಪನಿಯನ್ ಇತ್ಯಾದಿ ದ್ರಾವಿಡ ಪೂರ್ವ ಜನಾಂಗಗಳಿರಬೇಕು. ಉದ್ದನೆ ತಲೆ, ಚಪ್ಪಟೆ ಮೂಗುಗಳನ್ನು ಇವರು ಹೊಂದಿರುವರು. ಪಶ್ಚಿಮ ಭಾರತದ ಭಿಲ್ ಮತ್ತು ಕಟ್ಕರಿ ಕೂಡ ಇದೇ ಜನಾಂಗಕ್ಕೆ ಸೇರಿದ ಜನ. ಮಧ್ಯಭಾರತದ ಮುಸಾಹರ್, ಪಸಿ, ಚಮಾರ್ ಮತ್ತು ಕೆಲವು ಕೆಳ ಜಾತಿಗಳು ಇದೇ ಜನಾಂಗಕ್ಕೆ ಸೇರಿದವು. ದ್ರಾವಿಡ ಪೂರ್ವ ಜನಾಂಗಗಳು ಪಾರಂಪರತೆಯನ್ನು ಹೊಂದಿದವರು. ಉತ್ತರಕ್ಕೆ ಸಾಗಿದಂತೆ ಇವರು ಮುಂದೆ ದ್ರಾವಿಡರ ಪದ್ಧತಿಗಳನ್ನು ಮುಂದುವರಿಸಿಕೊಂಡಂತೆ ತೋರುತ್ತದೆ. ಇವರು ಹೋದ ಕಡೆಯಲ್ಲೆಲ್ಲ ಶಿಲಾಯುಗದ ಸಮಾಧಿಗಳನ್ನು ಮತ್ತು ಹಳೆ ಕಾಲದ ಸ್ಮಾರಕಗಳನ್ನು ಸ್ಥಾಪನೆ ಮಾಡಿದ್ದಾರೆ. ಇವು ಮಧ್ಯಪ್ರದೇಶ, ಪೂರ್ವ ರಾಜಸ್ತಾನ ಮತ್ತು ಉತ್ತರ ಪ್ರದೇಶದ ಮಿರ್ಜಾಪುರ ಜಿಲ್ಲೆಯಲ್ಲಿ ಕಂಡುಬರುತ್ತವೆ. ಇವರೆಲ್ಲ ದ್ರಾವಿಡ ಭಾಷೆಗಳನ್ನು ಮಾತನಾಡುವುದರೊಂದಿಗೆ ಕೆಲವು ಹಳ್ಳಿಗಳ ಹೆಸರುಗಳು ಕನ್ನಡದ ಅರ್ಥದಿಂದ ಮುಕ್ತಾಯವಾಗುತ್ತವೆ (Central Province District, Gazetteers: Chanda, p.123). ಗಯಾ ಮತ್ತು ಮಿರ್ಜಾಪುರ ಜಿಲ್ಲೆಗಳಲ್ಲಿನ ಕೆಲವು ಹಳ್ಳಿಗಳು ವಿಶಿಷ್ಟವಾಗಿ ದ್ರಾವಿಡ ಹೆಸರಿನಿಂದ ಕೂಡಿವೆ. ಈ ಜನಾಂಗಗಳು ಸಾಮಾಜಿಕ ಸಂಘಟನೆಯಿಂದ ಅಡ್ಡ ಸೋದರ ಸಂಬಂಧಿ ಮದುವೆಗಳನ್ನು ಮಾಡಿಕೊಳ್ಳುತ್ತವೆ.

ಬಹಳಷ್ಟು ಕಡೆ ಇವರ ಮಧ್ಯೆ ಈಗಲೂ ಈ ಪದ್ಧತಿ ಚಾಲ್ತಿಯಲ್ಲಿದೆ. ಇದು ಪೂರ್ವ ದ್ರಾವಿಡ ಮಾದರಿಯಾಗಿದ್ದು, ಕೆಲವು ವಿದ್ವಾಂಸರು ಇದನ್ನು ಮಲಯ ಪರ್ಯಾಯ ದ್ವೀಪ ಮತ್ತು ಆಸ್ಟ್ರೇಲಿಯಾದ ಸಕೈ ಜನಾಂಗಕ್ಕೆ ಹೋಲಿಸುತ್ತಾರೆ (Kane, p.422). ಇದರಲ್ಲಿ ನೀಗ್ರೋ ವಂಶಾವಳಿಯ ಸಂಕೇತಗಳೂ ಇವೆ ಎನ್ನುತ್ತಾರೆ ಕೆಲವು ವಿದ್ವಾಂಸರು.

ಜಾತಿಗಳ ನಾಮಕರಣವಾಗಿದ್ದರ ಬಗ್ಗೆ ಸರಿಯಾದ ವಿವರಗಳು ಎಲ್ಲೂ ದೊರಕುವುದಿಲ್ಲ. ಬ್ಲಂಟ್ ಎಂಬ ವಿದ್ವಾಂಸ ಕೆಲವು ವಿವರಗಳನ್ನು ನೀಡುತ್ತಾನೆ. ಆತ ಮೊದಲಿಗೆ ಜಾತಿಗಳ ಹೆಸರುಗಳನ್ನು ವಿಶ್ಲೇಷಿಸುತ್ತ ಹೀಗೆ ವಿವರಿಸುತ್ತಾನೆ: ಜಾತಿಗಳ ಪ್ರಧಾನ ವೈಶಿಷ್ಟ್ಯಗಳು 10 ರೀತಿ: 1. ಸ್ಥಳೀಯ, ನಾಮಸೂಚಕ ಮತ್ತು ಕಸುಬು ಆಧಾರಿತ ಹೆಸರುಗಳು. 2. ಜಾತಿಗಳ ಆಧಾರದಿಂದ ಬಂದ ವಿಭಾಗೀಯ ಹೆಸರುಗಳು. (3 ಮತ್ತು 4 ಈ ಕೃತಿಯಲ್ಲಿ ಇಲ್ಲ), 5. ಒಂದು ಜನಸಮುದಾಯ ಅಥವಾ ಕುಟುಂಬ ಒಂದು ಪ್ರಾಣಿಯ ಜೊತೆಗಿನ ಸಂಬಂಧದಿಂದ ಬಂದ ಹೆಸರುಗಳು. 6. ಅಡ್ಡ ಹೆಸರುಗಳು. 7 ಸಾಮಾಜಿಕ ಪದ್ಧತಿಗಳ ಆಧಾರದಿಂದ ಬಂದ ಹೆಸರುಗಳು. 8. ಮೂಲ ಉಲ್ಲೇಖಿಸುವ ಹೆಸರುಗಳು. 9. ಧಾರ್ಮಿಕ ನಂಬಿಕೆಯ ಆಧಾರದಿಂದ ಬಂದ ಹೆಸರುಗಳು. 10. ಪುರಾಣಗಳಲ್ಲಿ ಬರುವ ಜಾತಿಗಳ ಆಧಾರದಿಂದ ಬಂದ ಹೆಸರುಗಳು.

ಕೇತ್ಕರ್ ಹೇಳುವಂತೆ, 200 ದಶಲಕ್ಷ (1951 ಜನಗಣತಿಯ ಪ್ರಕಾರ) ಹಿಂದೂಗಳು ವೈವಿಧ್ಯಮಯ ಜನಾಂಗೀಯ ಅಂಶಗಳಿಂದ ಸೃಷ್ಟಿಯಾಗಿದ್ದಾರೆ. ಅವರೆಲ್ಲ 3000 ಜಾತಿಗಳಿಂದ ಕೂಡಿದ್ದು, ಮತ್ತೆ ಉಪಜಾತಿಗಳನ್ನು ಹೊಂದಿದ್ದಾರೆ. ಬ್ರಾಹ್ಮಣರು 800 ಉಪಜಾತಿಗಳಿಂದ ಕೂಡಿರುವರು. ಜಾತಿ ಎನ್ನುವುದು ಸಾಮಾಜಿಕ ಗುಂಪಾಗಿದ್ದು ಎರಡು ಗುಣಲಕ್ಷಣಗಳನ್ನು ಹೊಂದಿರುತ್ತದೆ. ಪ್ರತಿಯೊಂದು ಒಂದು ವಿಶೇಷ ಹೆಸರು ಹೊಂದಿದ್ದು ಒಟ್ಟಾರೆ ಒಂದು ಸಾಮಾನ್ಯ ಹೆಸರು ಇರುತ್ತದೆ. ಹಾಗಾಗಿ ಜಾತಿ ಎನ್ನುವುದು ಒಂದು ಹೆಸರಿಸಿಂದ ಕೂಡಿದ ಗುಂಪಾಗಿರುತ್ತದೆ. ಅಂದರೆ ಜಾತಿಯ ಹೆಸರಿನಲ್ಲಿ 200 ದಶಲಕ್ಷ ಹಿಂದೂಗಳು ಸಾವಿರಾರು ಜಾತಿಗಳಾಗಿ ಒಡೆದುಹೋಗಿದ್ದಾರೆ (Ketkar, pp.5,15-6).

ಭಾರತದಲ್ಲಿ ಜಾತಿಗೆ ಮೂಲ ಕಾರಣ ಬ್ರಾಹ್ಮಣರ...ಸಗೋತ್ರ ಪದ್ಧತಿ... ಜಾತಿ ವ್ಯವಸ್ಥೆಯೇ ಅತ್ಯುತ್ತಮ ಬುನಾದಿ ಎನ್ನುತ್ತಾರೆ ಘುರ್ಯೆ. ಇದನ್ನು ಮೊದಲಿಗೆ ಬ್ರಾಹ್ಮಣರು ಇಂದಿನ ಉತ್ತರ ಭಾರತದ ಬಯಲುಗಳಲ್ಲಿ ಕಾರ್ಯರೂಪಕ್ಕೆ ತಂದರು. ಮುಂದೆ ಅದು ದೇಶದ ಇತರ ಪ್ರದೇಶಗಳನ್ನು ಆವರಿಸಿಕೊಂಡಿತು. ಈ ಕಲ್ಪನೆಗೆ ಸರಿಯಾದ ಆಧಾರಗಳಿಲ್ಲ ಎಂಬುದಾಗಿ ಕೆಲವು ವಿದ್ವಾಂಸರು ತಳ್ಳಿಹಾಕುತ್ತಾರೆ. ಇದನ್ನು ದೃಢೀಕರಿಸುವ ಮುನ್ನ ಬೇರೆಬೇರೆ ಆಯಾಮಗಳನ್ನ ಪರಿಶೀಲಿಸಬೇಕು. ಜನಸಮುದಾಯಗಳು, ಪಶ್ಚಿಮ ಭಾರತದ ದೇವಕಾಗಳು, ಇತರೆ ಅಂಶಗಳಾದ ಜನಾಂಗಗಳು, ಬುಡಕಟ್ಟುಗಳು, ರಕ್ತಸಂಬಂಧ, ಪ್ರದೇಶ, ಧರ್ಮ, ಸಾಮಾಜಿಕ ಬಳಕೆಗಳು ಇತ್ಯಾದಿ ಈ ಜಾತಿ ಎಂಬ ಸಂಕೀರ್ಣತೆಯನ್ನು ಹುಟ್ಟುಹಾಕಲು ಕಾರಣವಾಗಿವೆ. ಇದರ ಮೂಲ ಆರ್ಯರ ವಲಸೆಯ ಕಾಲದವರೆಗೂ ಹೋಗಬಹುದು.

ಚಂಡಾಲ, ಶ್ವಪಚ ಮತ್ತು ಮ್ರಿತಪಾಗಳ ಸಾಮಾಜಿಕ ಪರಿಸ್ಥಿತಿ, ಪಾಣಿನಿ ಮತ್ತು ಮನು ನಡುವಿನ ಕಾಲದಲ್ಲಿ ನಿಧಾನವಾಗಿ ಮತ್ತು ಸ್ಪಷ್ಟವಾಗಿ ಹದಗೆಟ್ಟಿರುವ

ಸೂಚನೆಗಳು ಕಂಡುಬರುತ್ತವೆ. ಮೊದಲಿಗೆ ಚಂಡಾಲರು ಇತರೆ ಜಾತಿಗಳ ಜನರೊಂದಿಗೆ ಆರ್ಯರ ಹಳ್ಳಿಗಳ ಸರಹದ್ದುಗಳಲ್ಲೇ ಇದ್ದುದಾಗಿ ಕಂಡುಬರುತ್ತದೆ. ಮನು ಕಾಲದಲ್ಲಿ ಚಂಡಾಲ ಮತ್ತು ಸಂಬಂಧಪಟ್ಟ ಜಾತಿಗಳ ಜನರನ್ನು ಆರ್ಯರ ಹಳ್ಳಿಯ ಸರಹದ್ದುಗಳಿಂದ ದೂರ ಮಾಡಲಾಯಿತು. ಜೊತೆಗೆ ಅವರನ್ನು ಕೆಳದರ್ಜೆಯ ಕೆಲಸಗಳನ್ನು ಮಾಡುವಂತೆ ಒತ್ತಾಯ ಮಾಡಿ, ಅವರನ್ನು ಪ್ರಾಣಿಗಳಿಗಿಂತ ಹೀನವಾಗಿ ನೋಡಿಕೊಳ್ಳಲಾಯಿತು.

ಪಾಲಿ ಭಾಷೆಯಲ್ಲಿ ಬರೆದಿರುವ ಬುದ್ಧನ ಜಾತಕ ಕಥೆಗಳಲ್ಲಿ ಬರುವ ಅಸ್ಪೃಶ್ಯರ ಪರಿಸ್ಥಿತಿಯನ್ನು ನಾವು ನೋಡಬಹುದು. ಇದು ಅಲಹಾಬಾದ್‌ನ ಪೂರ್ವದಲ್ಲಿ ಕ್ರಿ. ಪೂ. 2ನೇ ಶತಮಾನದಲ್ಲಿ ನಡೆದಿರುವಂತೆ ದಾಖಲಾಗಿದೆ. ಚಂಡಾಲರೆ ಅತಿ ಕೆಳಗಿನ ಜಾತಿ ಎಂಬುದಾಗಿ ಹೇಳಲ್ಪಟ್ಟಿದೆ. ಚಂಡಾಲರ ನಂತರ ಪುಕ್ಕಾಸರನ್ನು ಹೆಸರಿಸಲಾಗಿದೆ. ಚಂಡಾಲ ಜನಾಂಗ ಪಶ್ಚಿಮದ ತಕ್ಷಶಿಲಾದಿಂದ ಪೂರ್ವದ ಉಜ್ಜೈನಿವರೆಗೂ ಹರಡಿರುವುದಾಗಿ ಮತ್ತು ಅವರ ಕೆಲಸ ಗುಡಿಸುವ ಕೆಲಸವಾಗಿದ್ದು ಅದು ಅವರ ವಂಶಪರಂಪರೆಯ ಕೆಲಸ ಎಂದು ಹೇಳಲಾಗಿದೆ.

ಬಸವ ಯುಗದಲ್ಲಿ, ಅಥವಾ ಅದಕ್ಕಿಂತ ಮುನ್ನ ಅಸ್ಪೃಶ್ಯತೆಯ ಸಂಬೋಳಿ ಸಂಸ್ಕೃತಿ ತಾರಕಕ್ಕೇರಿತ್ತು. ಒಬ್ಬ ಶೋಷಿತ ಅಥವಾ ಶೂದ್ರ ನಡುಬೀದಿಯಲ್ಲಿ ನಡೆಯುವುದು ಸುಲಭವಾಗಿರಲಿಲ್ಲ. ಅವನ ನೆರಳು ಇತರರ ಮೇಲೆ ಬೀಳುವಂತಿರಲಿಲ್ಲ. ಅದಕ್ಕಾಗಿ ಅವನು ತನ್ನ ಬಾಯಿಂದ 'ಸಂಬೋಳಿ... ಸಂಬೋಳಿ...' ಎಂದು ಕೂಗುತ್ತ ಬರಬೇಕಾಗಿತ್ತು. ಈ ಶಬ್ದ ಕೇಳಿದಾಕ್ಷಣ ಸವರ್ಣೀಯರು ತಮ್ಮ ಬಾಗಿಲುಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಅವನು ನಡುಬೀದಿಯಲ್ಲಿ ಉಗುಳುವಂತಿರಲಿಲ್ಲ. ತನ್ನ ಕೊರಳಲ್ಲಿ ಮಡಿಕೆಯನ್ನು ಕಟ್ಟಿಕೊಂಡು ಅದರಲ್ಲಿ ಉಗುಳಬೇಕಾಗಿತ್ತು. ಅಸ್ಪೃಶ್ಯತೆಯ ಈ ಘನಘೋರ ದಯನೀಯ ಸ್ಥಿತಿಯನ್ನು ಕಂಡ ಬಸವಣ್ಣ ಸಿಡಿದೆದ್ದರು. ಅಸ್ಪೃಶ್ಯರು ಅನುಭವಿಸುತ್ತಿದ್ದ ನೋವನ್ನು ತಾವೇ ಸಮೀಕರಿಸಿಕೊಂಡ ರೀತಿ ಇದು:

**ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರು**
**ಸಲಿಗೆವಂತರಾಗಿ ಒಳಗೈದಾರೆ.**
**ಆನು ದೇವಾ ಹೊರಗಣವನು**
**'ಸಂಬೋಳಿ ಸಂಬೋಳಿ' ಅನ್ನುತ್ತ ಇಂಬಿನಲ್ಲಿ ಇದ್ದೇನೆ**
**ಕೂಡಲಸಂಗಮದೇವ**
**ನಿಮ್ಮ ನಾಮವಿಡಿದ ಅನಾಮಿಕ ನಾನು**
**ಅಸ್ಪೃಶ್ಯರೊಂದಿಗೆ ತಾನೂ ಇರುತ್ತೇನೆ.**

ಅವರು ನುಡಿಯುವ ಸಂಬೋಳಿ ಶಬ್ದವನ್ನು ನುಡಿಯುತ್ತ ಜತೆಯಲ್ಲಿ ಇರುತ್ತೇನೆ. ಕೂಡಲಸಂಗಮದೇವ ನಿಮ್ಮ ನಾಮವನ್ನು ಭಜಿಸುವ ಅನಾಮಿಕ (ಶೂದ್ರ) ತಾನು ಎಂಬುದು ಬಸವಣ್ಣನ ನಿಲುವು. ನಾಯಕ ಅನ್ನಿಸಿಕೊಳ್ಳಲು ಎಲ್ಲರೂ ಹಾತೊರೆಯುತ್ತಾರೆ. ಆದರೆ ಅನಾಮಿಕ ಅನಿಸಿಕೊಳ್ಳಲು ಯಾರು ಸಿದ್ಧರಿದ್ದಾರೆ? ಬಸವಣ್ಣನವರಿಂದ ಮಾತ್ರ ಅದು ಸಾಧ್ಯ.

ಇನ್ನು ಬ್ರಾಹ್ಮಣನು ಪ್ರಾರಂಭದಿಂದಲೇ ವೇದಗಳನ್ನು ತನ್ನದಾಗಿಸಿಕೊಂಡಿದ್ದರಿಂದ

ಇಡೀ ಸೃಷ್ಟಿಯಲ್ಲಿ ಅಗ್ರಸ್ಥಾನದಲ್ಲಿರಲು ಹಕ್ಕುದಾರ (ಮನುಸ್ಮೃತಿ ಅ 1 ಶ್ಲೋಕ 93). ಪ್ರತಿಯೊಬ್ಬ ಬ್ರಾಹ್ಮಣನೂ ದೇವೀ ಪುರುಷನೇ. ರಾಜನಿಗೆ ಧರ್ಮಶಾಸ್ತ್ರದಲ್ಲಿ ನಿಪುಣನಾದ ಬ್ರಾಹ್ಮಣ ದೊರಕದಿದ್ದಲ್ಲಿ ಅದೇ ಧರ್ಮಶಾಸ್ತ್ರದಲ್ಲಿ ನಿಪುಣನಾದ ಒಬ್ಬ ಕ್ಷತ್ರಿಯನನ್ನೋ, ವೈಶ್ಯನನ್ನೋ ನೇಮಿಸಿಕೊಳ್ಳಬಹುದು. ಆದರೆ ಶೂದ್ರನೊಬ್ಬ ಆ ಸ್ಥಳಕ್ಕೆ ಆಯ್ಕೆಯಾಗುವುದನ್ನು ಎಚ್ಚರಿಕೆಯಿಂದ ತಪ್ಪಿಸಬೇಕು (ಕಾತ್ಯಾಯನ ಶ್ಲೋಕ 67). ಬಾಬು ಜಗಜೀವನರಾಂ ಅವರನ್ನು ಪ್ರಧಾನಿ ಪಟ್ಟಕ್ಕೆ ಬರದಂತೆ ನೋಡಿಕೊಂಡ ಶೂದ್ರ ರಾಷ್ಟ್ರಾಧ್ಯಕ್ಷ ನೀಲಂ ಸಂಜೀವರೆಡ್ಡಿಯವರ ಪ್ರಸಂಗವು ಇದೇ ರೀತಿಯದು. ಇಲ್ಲಿ ಶೂದ್ರನೊಬ್ಬ ಹಿಂದೂ ಸೂತ್ರದ ನಿಯಮವನ್ನು ಅತಿ ಶೂದ್ರನ ಮೇಲೆ ಪ್ರಯೋಗಿಸಿಬಿಟ್ಟಿದ್ದ. ಶೂದ್ರನೊಬ್ಬನು ಧರ್ಮವನ್ನು ಅರ್ಥೈಸುತ್ತಿರುವಂತಹ ಪ್ರಸಂಗವನ್ನು ನೋಡಿಯೂ ರಾಜನು ಸುಮ್ಮನಿದ್ದರೆ ಅಂತಹ ರಾಜನ ರಾಜ್ಯವು ಉಸುಬು ನೆಲದಲ್ಲಿ ಹೂತುಹೋಗುವಂತೆ ಹಸಿವಿನಿಂದ ಮುಳುಗಿಹೋಗುತ್ತದೆ (ಮನುಸ್ಮೃತಿ ಅ 8 ಶ್ಲೋಕ 21).

ಮೂರು ವರ್ಣಗಳವರು ದಾಸರಾಗಬಹುದು ಆದರೆ ಬ್ರಾಹ್ಮಣರು ಎಂದಿಗೂ ದಾಸರಾಗಬಾರದು. ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಲ್ಲಿ ದಾಸ್ಯವು ಅನುಕ್ರಮವಾಗಿರಬೇಕೇ ಹೊರತು ವಿಪರ್ಯಕ್ರಮದಲ್ಲಲ್ಲ. ಧರ್ಮಕ್ಕೆ ಅನುಗುಣವಾಗಿ ಜೀವನ ನಡೆಸುವ ಶೂದ್ರರು ತಿಂಗಳಿಗೊಮ್ಮೆ ತಮ್ಮ ತಲೆಗಳನ್ನು ಬೋಳಿಸಿಕೊಳ್ಳಬೇಕು. ಅವರ ಶುದ್ಧೀಕರ್ಮವು ವೈಶ್ಯರಿಗೆ ಅನ್ವಯವಾಗುವ ಶುದ್ಧೀಕರ್ಮದ ವಿಧಾನವನ್ನೇ ಹೋಲುತ್ತದೆ. ಅವರ ಆಹಾರವು ಆರ್ಯನೊಬ್ಬನು ಭೋಜನ ಮಾಡಿ ಉಳಿದದ್ದೇ ಆಗಿರುತ್ತದೆ (ಮನುಸ್ಮೃತಿ ಅ 5 ಶ್ಲೋಕ 140). ಹೀಗೆ ಎಲ್ಲಾ ರೀತಿಯ ದೈನಂದಿನ ಕೆಲಸಗಳಲ್ಲೂ ಸಾಮಾಜಿಕ ಕಾನೂನು ಕಟ್ಟಳೆಗಳನ್ನು ವಿಧಿಸಿರುವ ಹಿಂದೂ ಧರ್ಮಶಾಸ್ತ್ರಗಳಿಂದ ಅಸಂಖ್ಯಾತ ತಾರತಮ್ಯ, ಮೇಲುಕೀಳೆಂಬ ಭಾವನೆ, ಜಾತಿ, ಅಸ್ಪೃಶ್ಯತೆ, ಮೂಢನಂಬಿಕೆಗಳು ಸೃಷ್ಟಿಯಾಗಿವೆ.

ಪ್ರಾಚೀನ ಧರ್ಮಶಾಸ್ತ್ರಕಾರರು ನಿಗದಿಗೊಳಿಸಿರುವ ನಿಯಮಗಳ ಪ್ರಕಾರ ಹಿಂದೂ ಸಮಾಜ ಮುಖ್ಯವಾಗಿ ಎರಡು ವಿಭಾಗಗಳಿಂದ ಕೂಡಿದೆ. ಒಂದು ಚಾತುರ್ವರ್ಣ್ಯದ ವ್ಯವಸ್ಥೆಯ ಒಳಗೆ ಸೇರ್ಪಡೆ ಹೊಂದಿದ್ದರೆ, ಇನ್ನೊಂದು ಅದರ ಛಾಯೆಯಿಂದ ಹೊರಗೆ ಉಳಿದುಕೊಂಡಿರುವುದಾಗಿದೆ. ಮನುಧರ್ಮ ಶಾಸ್ತ್ರದಲ್ಲಿ ಅವರನ್ನು ಬಾಹ್ಯರು ಎಂದರೆ ಚಾತುರ್ವರ್ಣ್ಯದ ಛಾಯೆಯ ಹೊರಗಿನವರು ಅಥವಾ ಕೀಳು ಜಾತಿಯವರು ಎಂದು ಹೆಸರಿಸಲಾಗಿದೆ. ಪ್ರಾಚೀನ ಧರ್ಮಶಾಸ್ತ್ರಗಳ ಪ್ರಕಾರ ಈ ಕೀಳು ಜಾತಿಗಳವರು ಚಾತುರ್ವರ್ಣ್ಯದ ಪದ್ಧತಿಯ ನಾಲ್ಕು ವರ್ಗಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ನಡುವಣ ಅಂತರ ವಿವಾಹಗಳಿಂದ ಹುಟ್ಟಿದ ಸಂತತಿಯೆಂಬುದು ಸಾಬೀತಾಗುತ್ತದೆ.

ಈ ದೇಶದ ಮೂಲ ಜನರಾದ ದ್ರಾವಿಡರಿಗೆ ಶೂದ್ರರು ಎಂಬ ಹಣೆಪಟ್ಟಿ ಕಟ್ಟಿದವರೇ ಆರ್ಯರು. ಮನುಧರ್ಮಶಾಸ್ತ್ರದ 10ನೇ ಅಧ್ಯಾಯದಲ್ಲಿ ಸಂಕರವರ್ಣ ಎಂಬ ಶಿರೋನಾಮದ ಕೆಳಗೆ ಜಾತಿ ಅನುಷ್ಠಾನವನ್ನು ತಿರಸ್ಕರಿಸಿದ ಜನರಿಗೆ ಹುಟ್ಟಿದವರ ವಿವರಣೆಯನ್ನು ನೀಡಲಾಗಿದೆ. ಶೂದ್ರ-ಬ್ರಾಹ್ಮಣರಿಗೆ ಹುಟ್ಟಿದವರು ಚಂಡಾಲರು, ಬ್ರಾಹ್ಮಣರು-ಶೂದ್ರತಿಗೆ ಹುಟ್ಟಿದವರು ಅಂಬಿಗ ಮತ್ತು ಬೆಸ್ತರು, ಜಾತಿ ಧರ್ಮವನ್ನು ಪಾಲಿಸದೆ ಬೆರೆತು ಹುಟ್ಟಿದವರೆ ಮೋಚಿಗಳು. ದ್ರಾವಿಡರು-ಆಂಧ್ರರು ಕೀಳಾದ,

ನೀಚರಾದ, ಮುಟ್ಟಬಾರದ, ಕಳವು ಪ್ರವೃತ್ತಿಯ ಜನಾಂಗದವರೆಂಬುದಾಗಿ ಮತ್ತು ಹಳ್ಳಿ ಪಟ್ಟಣಗಳ ಆಚೆಯಿದ್ದುಕೊಂಡು ಮರದಡಿಯಲ್ಲಿ, ಸುಡುಗಾಡಿನ ಬಳಿಯಲ್ಲಿ ವಾಸಮಾಡಿಕೊಂಡು ನೀಚ ವೃತ್ತಿಗಳಲ್ಲಿ ತೊಡಗಿದವರು ಎಂಬುದಾಗಿ ಮನುಸ್ಮೃತಿಯಲ್ಲಿ ಹೇಳಲಾಗಿದೆ.

ಚಾತುರ್ವರ್ಣ್ಯವು ಸಮಾಜದ ದಾರುಣ ಶೋಷಣೆಗೆ ಮೂಲವಾಗಿದ್ದು ವರ್ಣಧರ್ಮದ ಕಾನೂನಿನ ಪ್ರಕಾರ ಅವರವರ ಕರ್ತವ್ಯ – ಕರ್ಮಗಳನ್ನು ಎಲ್ಲ ವರ್ಣದವರು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬುದು ಭಗವದ್ಗೀತೆಯ ಸಾರಾಂಶವಾಗಿದೆ. ತಮ್ಮ ತಮ್ಮ ವರ್ಣ ಧರ್ಮ ಪ್ರಾಪ್ತ ಕರ್ಮಗಳನ್ನು ಅರ್ಥಾತ್ ನೀಚವೃತ್ತಿಗಳು, ಜಾತಿ ಅಸ್ಪೃಶ್ಯತೆಯನ್ನು ಮುಂದುವರಿಸಿಕೊಂಡು ಹೋಗುವುದರಿಂದಲೇ ಮನುಷ್ಯನಿಗೆ ಮೋಕ್ಷ ದೊರಕುತ್ತದೆ ಎಂಬುದೇ ಅದರ ಸಿದ್ಧಾಂತವಾಗಿದೆ. ನ್ಯಾಯಾಲಯದಲ್ಲಿ ಎಲ್ಲರ ಕೈಯಲ್ಲೂ ಭಗವದ್ಗೀತೆಯನ್ನಿಟ್ಟು 'ನಾನು ಹೇಳುವುದೆಲ್ಲಾ ಸತ್ಯ, ಸತ್ಯವನ್ನೇ ಹೇಳುತ್ತೇನೆ' ಎಂದು ಹೇಳಿಸುತ್ತಾರೆ, ನ್ಯಾಯವಾದಿಗಳು. ಈ ಭಗವದ್ಗೀತೆಯೇ ಎಷ್ಟು ಸತ್ಯ? ಎನ್ನುವುದನ್ನು ನ್ಯಾಯಾಲಯದಲ್ಲಿ ಇದುವರೆಗೂ ಯಾರೂ ಪ್ರಶ್ನಿಸದೆ ಇರುವುದೇ ಸೋಜಿಗವಾಗಿದೆ. 'ಕಾಯಕವೇ ಕೈಲಾಸ' ಎನ್ನುವುದನ್ನು ಬಸವಣ್ಣನವರು ಹೇಳಿರುವುದಾಗಿ ತಿಳಿದುಬರುತ್ತದೆ. ಇದೇ ವಿಷಯವನ್ನು ದೊಡ್ಡ ದೊಡ್ಡ ವೇದಾಂತಿಗಳು ಮತ್ತು ಮಹಾತ್ಮರು ಮತ್ತೆ ಮತ್ತೆ ಉಚ್ಚರಿಸಿದ್ದಾರೆ.

ಬ್ರಾಹ್ಮಣರು ಸಂಸ್ಕೃತ ಪಠಿಸುತ್ತ ಉನ್ನತ ಉದ್ಯೋಗ / ಸ್ಥಾನಗಳಲ್ಲಿ ತೊಡಗಿದ್ದರೆ, ಕ್ಷತ್ರಿಯರು ಸೈನಿಕರಾಗಿ ಮತ್ತು ವೈಶ್ಯರು ವ್ಯಾಪಾರದಲ್ಲಿ ತೊಡಗಿರುತ್ತಾರೆ. ಶೂದ್ರರು ಹುಟ್ಟಿನಿಂದ ಸಾಯುವವರೆಗೆ ಹೊಲಗದ್ದೆಗಳಲ್ಲಿ ದುಡಿಯುತ್ತಲೇ ಇರುತ್ತಾರೆ. ಅವರಿಗಾಗಿಯೇ ಸೃಷ್ಟಿಸಿದ 'ಕೈ ಕೆಸರಾದರೆ ಬಾಯಿ ಮೊಸರು' ಎನ್ನುವ ನಾಣ್ಣುಡಿ ಬೇರೆ ಇದೆ. ಅಸ್ಪೃಶ್ಯರು ಅದರಲ್ಲೂ ಎಡಗೈ ಎಂದು ಕರೆಸಿಕೊಳ್ಳುವ ಮಾದಿಗರು ತಲೆತಲಾಂತರಗಳಿಂದಲೂ ಜಾಡಮಾಲಿ ಕೆಲಸದಲ್ಲಿಯೇ ತೊಡಗಿದ್ದಾರೆ. ಈ ಅತಿಶೂದ್ರರು ದೇಶದ ಉದ್ದಗಲಕ್ಕೂ ಸಾರ್ವಜನಿಕ ಪಾಯಿಖಾನೆಗಳನ್ನು ತೊಳೆಯುತ್ತಾ ತಲೆ ಮೇಲೆ ಮಲ ಹೊರುವುದನ್ನು 'ಕಾಯಕವೇ ಕೈಲಾಸ' ಎಂದು ತಿಳಿದುಕೊಳ್ಳುವುದು ಹೇಗೆ ತಾನೇ ಸಾಧ್ಯ? ಈ ವೇದಾಂತ ಮಾತುಗಳಲ್ಲಿ ಏನಾದರೂ ಹುರುಳಿದೆಯೆ? ಶೂದ್ರರನ್ನು, ಅಸ್ಪೃಶ್ಯರನ್ನು ಶೋಷಣೆ ಮಾಡುವುದಕ್ಕಾಗಿಯೇ ಈ ನಾಣ್ಣುಡಿಗಳು ಸೃಷ್ಟಿಯಾಗಿವೆ.

ಮನು, ಕೃಷಿಯ ಕೆಲಸವನ್ನೂ ಸಹ ಕೀಳು ಕರ್ಮದ ಕೆಲಸವೆಂದೇ ಕರೆದಿದ್ದಾನೆ. ನೇಗಿಲಿಂದ ಉಳುವಾಗ ಮಣ್ಣಿನಲ್ಲಿರುವ ಕ್ರಿಮಿ–ಜಂತುಗಳು ಸಾಯುತ್ತವೆ. ಹೀಗಾಗಿ ಕೃಷಿಕರ್ಮವನ್ನು ಬ್ರಾಹ್ಮಣ ಎಂದಿಗೂ ಮಾಡಕೂಡದು ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಬ್ರಾಹ್ಮಣನಿಗೆ ಅಂತಹ ಆಪತ್‌ಸ್ಥಿತಿ ಬಂದರೆ ಆವನು ಕಳುವು ಮಾಡಬಹುದೇ ಹೊರತು ಅಪ್ಪಿತಪ್ಪಿಯೂ ಕೃಷಿಯನ್ನು ಮಾಡಬಾರದು ಎಂದು ಆಜ್ಞೆ ನೀಡಿದ್ದಾನೆ. ಈ ದೇಶದ ಪವಿತ್ರ ಭೂಮಿಯಲ್ಲಿ ಬೆಳೆ ತೆಗೆಯುವುದೇ ಪಾಪ ಕರ್ಮ ಎನ್ನುವುದಾದರೆ ಮನುವಿನ ಸಂತತಿ ವಂದೇ ಮಾತರಂ... ಮಾತೃಭೂಮಿ... ಮೇರಾ ಭಾರತ್ ಮಹಾನ್... ಎಂದು ಬೀದಿಗಳಲ್ಲಿ ಕೂಗುವುದು ಎಂತಹ ವಿಪರ್ಯಾಸ.

## ಹಿಂದೂಗಳಲ್ಲಿ ಜಾತಿಪದ್ಧತಿ

ಹಿಂದೂಗಳಲ್ಲಿ ಜಾತಿಪದ್ಧತಿ ಒಂದು ಲೋಕ ಸಮಸ್ಯೆಯಾಗಿ ಪರಿಣಮಿಸಿದೆ. ಪ್ರಸಿದ್ಧ ಮಾನವ ಕುಲಶಾಸ್ತ್ರಜ್ಞರ ಪ್ರಕಾರ ಭಾರತದ ಜನರು ದ್ರಾವಿಡ, ಆರ್ಯ, ಮಂಗೋಲಿಯನ್, ಪರ್ಷಿಯನ್, ಗ್ರೀಕ್, ಹೂಣ, ಕುಶಾಣ, ಪಾರ್ಥಿಯನ್, ಸಿಥಿಯನ್ ಮುಂತಾದ ಜನಾಂಗಗಳ ಕಲಬೆರಕೆಯಾಗಿದೆ. ಈ ಎಲ್ಲಾ ಜನಾಂಗದವರೂ ಆದಿವಾಸಿಗಳಾಗಿದ್ದಾಗಲೇ ತಮ್ಮ ವಿವಿಧ ಸಂಸ್ಕೃತಿಗಳೊಂದಿಗೆ ಹಲವು ಶತಮಾನಗಳ ಹಿಂದೆಯೇ ನಾನಾ ಕಡೆಗಳಿಂದ ಭಾರತವನ್ನು ಪ್ರವೇಶಿಸಿದರು. ಅವರಿಗಿಂತ ಮುಂಚಿನಿಂದ ಇಲ್ಲಿದ್ದ ದ್ರಾವಿಡ ಜನಾಂಗದ ಜೊತೆಗೆ ಘರ್ಷಣೆ ನಡೆಸುತ್ತ ಅವರನ್ನು ತಳ್ಳಿಕೊಂಡು ಭಾರತ ಪ್ರವೇಶಿಸಿದರು. ಕಾಲಾಂತರದಲ್ಲಿ ಅವರು ಪರಸ್ಪರ ಸೌಹಾರ್ದಯುತವಾಗಿ ನೆರೆಹೊರೆಯವರಂತೆ ಹೊಂದಿಕೊಳ್ಳುತ್ತಾ ಬಾಳುವೆ ನಡೆಸತೊಡಗಿದರು. ನಿರಂತರ ಸಂಪರ್ಕದಿಂದಲೂ, ಪರಸ್ಪರ ವ್ಯವಹಾರ ಸಂಬಂಧದಿಂದಲೂ ಅವರು ತಮ್ಮ ಪ್ರತ್ಯೇಕ ಸಂಸ್ಕೃತಿಗಳನ್ನು ತಳ್ಳಿ ಹಾಕಿ ಒಂದು ಸಮಾನ ಸಂಸ್ಕೃತಿಯೊಂದನ್ನು ರೂಪಿಸಿಕೊಂಡರು. ಇಷ್ಟೆಲ್ಲಾ ನಡೆದರೂ ಭಾರತದ ಜನತೆಯಾಗಿರುವ ವಿವಿಧ ಸಮುದಾಯಗಳು ಸಾಂಸ್ಕೃತಿಕವಾಗಿ ಬೆರೆಯಲಿಲ್ಲ. ಸಂಪೂರ್ಣವಾಗಿ ಸಂಕರವೂ ಆಗಲಿಲ್ಲ ಎಂದರೂ ತಪ್ಪಾಗಲಾರದು.

ಭಾರತದ ಗಡಿಯೊಳಗಿರುವ ಹಲವು ಸಮುದಾಯಗಳ ಮಧ್ಯೆ ಇಂದಿಗೂ ಹಲವು ದೈಹಿಕ ಹಾಗೂ ಮೈಬಣ್ಣದ ಭಿನ್ನತೆಯ ವೈದೃಶ್ಯಗಳು ಎದ್ದು ಕಾಣುತ್ತವೆ. ಯಾವುದೇ ಜನಾಂಗದ ಬಗ್ಗೆ ನಿರೀಕ್ಷಿಸುವಂತೆ ಸಮರೂಪ ಧಾರಣೆಗೆ ಸಮ್ಮಿಶ್ರಣಗೊಳ್ಳುವಿಕೆಯೊಂದೇ ಅಳತೆಗೋಲು ಆಗಲಾರದು. ಜನಾಂಗಿಕವಾಗಿ ಎಲ್ಲಾ ಜನರೂ ಭಿನ್ನ ಭಿನ್ನ ಅಂಶಗಳಿಂದ ಕೂಡಿದವರೆ ಆಗಿದ್ದಾರೆ. ಆದರೂ ಭಾರತದಲ್ಲಿರುವುದು ಮೇಲಿನ ನೋಟಕ್ಕೆ ಕಾಣುವ ಏಕರೂಪತೆ ಮಾತ್ರ ಅಲ್ಲ. ಇದೆಲ್ಲಕ್ಕೂ ಮೀರಿ ಆಳವೂ ಮೂಲಭೂತವೂ ಆದ ಒಂದು ಒಗ್ಗಟ್ಟಿದೆ. ಅದೆಂದರೆ ದೇಶವನ್ನು ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಆಚ್ಛಾದಿಸಿರುವ ಅಸಂದಿಗ್ಧತೆ, ಸಾಂಸ್ಕೃತಿಕ ಅಖಂಡತೆ. ಈ ಕಾರಣದಿಂದಲೇ ಜಾತಿಯನ್ನು ವಿವರಿಸುವುದು ತುಂಬ ಕ್ಲಿಷ್ಟವಾದ ಸಮಸ್ಯೆ ಎನ್ನುತ್ತಾರೆ ಡಾ. ಅಂಬೇಡ್ಕರ್ ಅವರು.

ಇಂದಿನ ಯಾವ ನಾಗರಿಕ ಸಮಾಜವೂ ಪ್ರಾಚೀನ ಕಾಲದ ಪಳೆಯುಳಿಕೆಗಳನ್ನು ಭಾರತದ ಸಮಾಜಕ್ಕಿಂತ ಮಿಗಿಲಾಗಿ ತೋರಿಸಲಾರದೆಂದು ಒತ್ತಿ ಹೇಳಬಹುದು. ಭಾರತದ ಧರ್ಮವು ಮೂಲಭೂತವಾಗಿ ಪುರಾತನವಾದದ್ದು ಮತ್ತು ಅದರ ಗೋತ್ರ ನಿಯಮಗಳು ತಮ್ಮೆಲ್ಲ ಪೌರೋಹಿತ್ಯ ಬಲದೊಂದಿಗೆ ಇಂದಿಗೂ ಜಾರಿಯಲ್ಲಿವೆ. ಜಾತಿಗಳ ಉಗಮ ಮತ್ತು ಪ್ರಸಾರಗಳನ್ನು ಕುರಿತು ಎರಡು ಪ್ರಶ್ನೆಗಳನ್ನು ಪ್ರತ್ಯೇಕಿಸಬಹುದು. ಒಂದು ಜಾತಿಪದ್ಧತಿ ದೈವ ನಿಯಮವೆಂದು, ನ್ಯಾಯ ನಿಬಂಧನೆಯೆಂದು ಭಾರತದ ಉದ್ದಗಲಕ್ಕೂ ಮುಗ್ಧ ಜನರ ಮೇಲೆ ಹೇರಲ್ಪಟ್ಟಿರುವುದು. ಎರಡು, ಹಿಂದೂಗಳಿಗೆ ವಿಶಿಷ್ಟವಾದ ಸಾಮಾಜಿಕ ಬೆಳವಣಿಗೆಯಿದ್ದು ಅದು ಯಾವುದೋ ಒಂದು ನಿಯಮದಂತೆ ಹುಟ್ಟಿಕೊಂಡಿದೆಯೆಂದು ವಿದ್ವಾಂಸರು ಸಹ ನಂಬಿರುವುದು.

ಪ್ರತಿಯೊಂದು ರಾಷ್ಟ್ರವೂ ತನ್ನ ನ್ಯಾಯ ನಿಬಂಧನಕಾರರನ್ನು ಪಡೆದಿರುತ್ತದೆ. ಆತ ಆ ದೇಶದ ಗ್ಲಾನಿಯ ಕಾಲದಲ್ಲಿ ಅವತಾರವಾಗಿ ಪಾಪಪೂರಿತ ಮಾನವ ಸಮುದಾಯವನ್ನು ಸರಿಪಡಿಸುತ್ತಾನೆ ಮತ್ತು ಆ ರಾಷ್ಟ್ರದ ಜನರಿಗೆ ನ್ಯಾಯ ಮತ್ತು ನೈತಿಕತೆಯ ನಿಯಮಗಳನ್ನು ಕೊಡುತ್ತಾನೆ. ಹಿಂದೂ ಧರ್ಮದ ಜನಕನಾದ ಮನು ನಿಶ್ಚಯವಾಗಿಯೂ ನಿರ್ಲಜ್ಜ ನರಿಬುದ್ಧಿಯವನೇ ಆಗಿರಬೇಕು. ಜಾತಿಯ ಕಾನೂನುಗಳನ್ನು ಕೊಟ್ಟವನು ಆತನೇ ಎಂದು ಪುರಸ್ಕರಿಸುವುದಾದರೆ ಅವನೊಬ್ಬ ದುರಾಲೋಚನೆಯ ವ್ಯಕ್ತಿಯೇ ಇರಬೇಕು. ಆತನ ನಿಯಮಗಳನ್ನು ಒಪ್ಪಿಕೊಂಡ ಮಾನವ ಜನಾಂಗ ನಮಗಿಂತ ತೀರ ಭಿನ್ನವಾದ ಪರಿಸ್ಥಿತಿಯಲ್ಲಿದ್ದಿರಬಹುದಾದ ಜನಾಂಗವಾಗಿರಬೇಕು. ಸಾಮಾಜಿಕ ನಿಯಮಗಳಿಂದಲೇ ಜಾತಿಯನ್ನು ಸೃಷ್ಟಿಸಲಾಯಿತು ಎನ್ನುವುದನ್ನು ಊಹಿಸಿಕೊಳ್ಳುವುದು ಅಷ್ಟು ಸುಲಭದ ವಿಷಯವಲ್ಲ. ಮನು ಕೂಡ ತನ್ನ ನಿಯಮಗಳನ್ನು ಮೀರಿ ಬದುಕಿರಲಾರ. ಒಂದು ಜನಾಂಗವನ್ನು ಅನಾಗರಿಕ ಸ್ಥಿತಿಗೆ ತಳ್ಳಿ ತನ್ನ ಜನಾಂಗವನ್ನು ಸಮಾಜದ ಉಚ್ಚ ಸ್ಥಿತಿಯಲ್ಲಿರಿಸಿ, ಇನ್ನೊಂದು ಜನಾಂಗವನ್ನು ಅಧೋಗತಿಗೆ ಇಳಿಸಿ ಮಾನವ ಜನಾಂಗದ ಮಧ್ಯೆ ತಾರತಮ್ಯವನ್ನು ಸೃಷ್ಟಿಸಿದ ಆತ ಎಲ್ಲಾ ಜನರನ್ನು ತನ್ನ ಸ್ವಾಧೀನಪಡಿಸಿಕೊಂಡ ಒಬ್ಬ ಪ್ರಜಾ ಪೀಡಕನಾಗಿರಬೇಕು. ಇಲ್ಲವಾದರೆ ಈ ರೀತಿಯಾಗಿ ಒಟ್ಟಾರೆ ಅನ್ಯಾಯವಾದ ವಿಧಾನವನ್ನು ನಿರ್ವಹಿಸಲು ಒಂದು ಕುಟಿಲ ಜನಾಂಗವು ಆತನನ್ನು ತನ್ನ ಮುಂದಾಳಾಗಿ ಆಯ್ಕೆ ಮಾಡಿರಬೇಕು.

ಅಂಬೇಡ್ಕರ್, ಮನು ಬಗ್ಗೆ ಹೀಗೆ ಹೇಳುತ್ತಾರೆ: 'ನನ್ನ ಪೂರ್ಣ ಶಕ್ತಿ ಆತನ ಪ್ರೇತವನ್ನೂ ಸಹ ಕೊಲ್ಲುವಷ್ಟು ಸಶಕ್ತವಾಗಿಲ್ಲವೆಂದು ನನಗೆ ಖಚಿತವಾಗಿದೆ. ಆತ ಅಮೂರ್ತ ವ್ಯಕ್ತಿಯಂತೆ ಜೀವಿಸಿದ್ದು, ಇಂದಿಗೂ ಕೆಲವು ಜನಾಂಗಗಳನ್ನು ಆಕರ್ಷಿಸುತ್ತಿದ್ದಾನೆ ಮತ್ತು ಆತ ಇನ್ನೂ ದೀರ್ಘಕಾಲ ಬದುಕಿರಬಲ್ಲನೆಂಬ ಭಯ ಕೂಡ ನನಗಿದೆ.'

ಜಾತಿಯ ಕಟ್ಟಳೆಗಳನ್ನು ಮನು ಕೊಡಲಿಲ್ಲ. ಆತ ಹಾಗೆ ಮಾಡುವುದು ಸಾಧ್ಯವೂ ಇರಲಿಲ್ಲ. ಮನುವಿಗಿಂತ ಮುಂಚೆ ತುಂಬ ಹಿಂದಿನಿಂದಲೂ ಜಾತಿಪದ್ಧತಿ ಇದ್ದಿರಬೇಕು. ಸಮಾಜದ ವಿಕಾಸದ ಹಾದಿಯಲ್ಲಿ ಒಂದು ಹಂತದ ಉತ್ಪನ್ನ ಅದು – ಋಗ್ವೇದದ ಆದಿಭಾಗವು ರಚನೆಗೊಂಡ ಕಾಲದಲ್ಲಿ ವರ್ಣ ವಿಂಗಡಣೆ ಇರಲಿಲ್ಲ, ಏಕೆಂದರೆ ಆಗಿನ್ನೂ ಬುಡಕಟ್ಟು ಸಮಾಜದ ಲಕ್ಷಣಗಳು ಜೀವಂತವಾಗಿದ್ದವು. ಬದಲಾದ ಹಂತದ ಸನ್ನಿವೇಶವನ್ನು ಮನು ಎತ್ತಿಹಿಡಿದು ಸೈದ್ಧಾಂತಿಕಗೊಳಿಸಿದ್ದಾನೆ. ಆದರೆ ನಿಶ್ಚಯವಾಗಿಯೂ ಹಿಂದೂ ಸಮಾಜದ ಇಂದಿನ ವ್ಯವಸ್ಥೆಯನ್ನು ಗಟ್ಟಿಗೊಳಿಸಿದವನು ಆತನೇ. ಮೊದಲೇ ಸ್ವಲ್ಪಮಟ್ಟಿಗೆ ಅಸ್ತಿತ್ವದಲ್ಲಿದ್ದ ಜಾತಿ ನಿಯಮಗಳನ್ನು ಕ್ರೋಢೀಕರಿಸುವುದರೊಂದಿಗೆ ಆತ ಜಾತಿ ಧರ್ಮವನ್ನು ಬೋಧಿಸಿ ಗಟ್ಟಿಗೊಳಿಸಿದ. ಜಾತಿ ವ್ಯವಸ್ಥೆಯ ಪ್ರಸಾರ ಮತ್ತು ಅದರ ಬೆಳವಣಿಗೆ ಅತಿ ಬೃಹತ್ತಾದುದು. ಅದನ್ನು ಒಬ್ಬ ವ್ಯಕ್ತಿ ಸಾಧಿಸಿರಲಾರ. ಒಂದು ಜನಾಂಗದ ಶಕ್ತಿಯ ಜೊತೆಗೆ ಕಪಟವೂ ಸೇರಿರಬೇಕು. ಇದಕ್ಕೆ ಸಮರ್ಥನೀಯ ವಾದವೆಂದರೆ ಬ್ರಾಹ್ಮಣರು ಜಾತಿಯನ್ನು ಸೃಷ್ಟಿ ಮಾಡಿದರೆಂಬ ಸಿದ್ಧಾಂತ. ಇಷ್ಟಾದ ಮೇಲೆಯೂ ಬ್ರಾಹ್ಮಣರು ಜಾತಿಪದ್ಧತಿಯನ್ನು ಬ್ರಾಹ್ಮಣೇತರರ ಮೇಲೆ ಹೇರುವ ಕೆಲಸ ಅವರ ಸಾಮರ್ಥ್ಯಕ್ಕೆ ಮೀರಿದ್ದು. ಜಾತಿಯ ಪ್ರಕ್ರಿಯೆಗೆ

ಬ್ರಾಹ್ಮಣರು ತಮ್ಮ ನಯವಾದ ಸಿದ್ಧಾಂತದ ಮೂಲಕ ಸಹಾಯ ಮಾಡಿರಬಹುದು. ತಾವು ಇಚ್ಛಿಸುವ ಮಾದರಿಗಳಿಗೆ ಅನುಗುಣವಾಗಿ ಸಮಾಜವನ್ನು ರೂಪಿಸುವುದು ಅಷ್ಟೊಂದು ಸುಲಭವಾದ ಕೆಲಸವಲ್ಲ. ಆದರೆ ಅದರ ಮುಂದುವರಿಸುವಿಕೆಯನ್ನು ಸ್ತುತಿಸುತ್ತಾ ಸುಖಿಸಬಹುದಷ್ಟೇ ವಿನಾ ಅದನ್ನು ಇನ್ನೂ ದೀರ್ಘವಾಗಿ ಚಾಚುವುದು ಸುಲಭದ ಕೆಲಸವಲ್ಲ. ಹಿಂದೂ ಸಮಾಜವೆಂಬುದು ಯಾವುದೋ ಒಂದು ಬಗೆಯಲ್ಲಿ ಜಾತಿ ವ್ಯವಸ್ಥೆಯ ಚೌಕಟ್ಟಿನೊಳಗೆ ರೂಪಿತವಾಗಿದೆಯೆಂದು ಸಂಪ್ರದಾಯನಿಷ್ಠರಾದ ಹಿಂದೂಗಳ ಮನಸ್ಸಿನಲ್ಲಿ ಬಲವಾದ ಒಂದು ನಂಬಿಕೆಯಿದೆ. ಹಿಂದೂ ಸಮಾಜವೆಂಬ ಈ ಸಂಸ್ಥೆಯು ಶಾಸ್ತ್ರ ಸಮ್ಮತಿಯಿಂದ ಪ್ರಜ್ಞಾಪೂರ್ವಕವಾಗಿ ಸೃಷ್ಟಿಯಾಗಿದೆಯೆಂದು ಹಿಂದೂಗಳು ನಂಬಿದ್ದಾರೆ.

ಕೆಲವು ಪಾಶ್ಚಾತ್ಯ ವಿದ್ವಾಂಸರು ಭಾರತದಲ್ಲಿ ವಿವಿಧ ಜಾತಿಗಳು ಹುಟ್ಟಿಕೊಂಡು ರೂಪಿತವಾಗಿರುವ ಕೇಂದ್ರ ಬಿಂದುಗಳನ್ನು ಈ ರೀತಿಯಾಗಿ ವಿಂಗಡಿಸಿದ್ದಾರೆ. 1. ಕಸುಬು 2. ಬುಡಕಟ್ಟು ಜನಾಂಗದ ಪಳೆಯುಳಿಕೆಗಳು 3. ಹೊಸ ನಂಬಿಕೆಯ ಉದಯ 4. ಅಂತರಜಾತಿಯ ಸಂತಾನ ಮತ್ತು 5. ವಲಸೆ. ಈ ಕೇಂದ್ರ ಬಿಂದುಗಳು ಬೇರೆ ಸಮಾಜದಲ್ಲಿ ಇರಲಿಲ್ಲವೆ? ಅವು ಭಾರತಕ್ಕೆ ಮಾತ್ರ ಸೀಮಿತಗೊಂಡವೆ ಎನ್ನುವ ಪ್ರಶ್ನೆ ಏಳುತ್ತದೆ. ಇವು ಭಾರತಕ್ಕಷ್ಟೇ ಸೀಮಿತವಾಗಿಲ್ಲದೆ ಜಗತ್ತಿಗೆಲ್ಲ ಸಮಾನವಾಗಿದ್ದರೆ ಇತರ ಭಾಗಗಳಲ್ಲೂ ಅವು ಜಾತಿಗಳಾಗಿ ರೂಪ ಪಡೆದಿಲ್ಲವೇಕೆ? ವೇದ ಘೋಷಗಳ ನಾಡಾದ ಭಾರತಕ್ಕಿಂತಲೂ ಆ ಭಾಗಗಳು ಪವಿತ್ರವಾದವೆ? ಅಥವಾ ವಿದ್ವಾಂಸರು ತಪ್ಪು ತಿಳಿದಿರಬಹುದೇ? ಈ ಉತ್ತರಾರ್ಧವೇ ನಿಜವಿರಬೇಕು ಎನ್ನುತ್ತಾರೆ ಅಂಬೇಡ್ಕರ್ ಅವರು.

ನೆಸ್‌ಫೀಲ್ಡ್‌ರು ಭಾರತದಲ್ಲಿ ಇಡೀ ಜಾತಿ ವ್ಯವಸ್ಥೆ ರಚನೆಯಾಗಿರುವುದು ಅದರ ಕಾರ್ಯವಿಧಾನದ ಬುನಾದಿಯ ಮೇಲೆ ಎಂದರೆ, ಹರ್ಬರ್ಟ್ ಸ್ಪೆನ್ಸರ್ ಅವರು ಸಮುದಾಯಗಳು ಭಿನ್ನಭಿನ್ನವಾಗಿ ಸಿಡಿದುಹೋಗುವ ಘಟನೆ ಎನ್ನುತ್ತಾರೆ. ಸಂಪ್ರದಾಯವಾದಿ ಸಮರ್ಥಕರ ನುಡಿಕಟ್ಟನ್ನು ಅಳವಡಿಸಿ ಹೇಳುವುದಾದರೆ ಜಾತಿ ವ್ಯವಸ್ಥೆ ಪರಸ್ಪರಾವಲಂಬಿತ ಭಾಗಗಳುಳ್ಳ ಒಂದು ಸಮಷ್ಟಿಯೊಳಗಿನ ರಾಚನಿಕ ವ್ಯತ್ಯಾಸಗಳಂತೆ ಉತ್ತಮ ಸಂತಾನ ಪಡೆಯುವ ಶಾಸ್ತ್ರದ ನಿಯಮಗಳ ಒಂದು ಪ್ರಾರಂಭಿಕ ಪ್ರಯತ್ನವಾಗಿ ಜನರ ಮೇಲೆ ವ್ಯವಸ್ಥಿತವಾಗಿ ಎಚ್ಚರದಿಂದಲೇ ಹೇರಲಾಗಿದೆ ಎನ್ನುವುದು.

ಇದಕ್ಕೆ ಉತ್ತರವಾಗಿ ಅಂಬೇಡ್ಕರ್‌ರವರು ತಮ್ಮದೇ ಆದ ದೃಷ್ಟಿಯಲ್ಲಿ ಹೀಗೆ ವಿವರಿಸುತ್ತಾರೆ. ಹಿಂದೂ ಸಮಾಜವು ಪ್ರಾರಂಭದಲ್ಲಿ ಇತರ ಸಮಾಜಗಳಿಗೆ ಸಮಾನವಾದ ವರ್ಗಗಳನ್ನೇ ಹೊಂದಿತ್ತು. 1. ಬ್ರಾಹ್ಮಣರು ಅಥವಾ ಪುರೋಹಿತ ವರ್ಗ 2. ಕ್ಷತ್ರಿಯರು ಅಥವಾ ಸೈನಿಕ ವರ್ಗ 3. ವೈಶ್ಯರು ಅಥವಾ ವರ್ತಕ ವರ್ಗ ಮತ್ತು 4. ಶೂದ್ರರು ಅಥವಾ ಕಸುಬುದಾರರು ಮತ್ತು ದಾಸ್ಯ ವೃತ್ತಿಯವರು.

ಒಂದು ಸಮಾಜದ ಉಪ-ವಿಭಜನೆಯು ತೀರ ಸ್ವಾಭಾವಿಕವಾದುದು. ಈ ಉಪ ವಿಭಾಗಗಳು ತಮ್ಮ ಸುತ್ತ ಬೇಲಿ ಕಟ್ಟಿಕೊಂಡು ಬೇರೆ ಬೇರೆ ಘಟಕಗಳಾಗಿ ಅಂದರೆ ಜಾತಿಗಳಾಗಿ ಮಾರ್ಪಟ್ಟವು. ಪ್ರತಿ ಉಪಜಾತಿಯೂ ಒಂದು ಸ್ವಜಾತಿ ಪದ್ಧತಿಯಾಗುವಂತೆ ಒತ್ತಾಯಿಸಲಾಯಿತೆ ಅಥವಾ ಅವರೇ ಸ್ವಇಚ್ಛೆಯಿಂದ ಬಾಗಿಲುಗಳನ್ನು ಮುಚ್ಚಿಕೊಂಡರೆ ಎನ್ನುವ ಪ್ರಶ್ನೆಗೆ ಅಂಬೇಡ್ಕರ್ ಹೀಗೆ ಉತ್ತರ ಹೇಳಿದ್ದಾರೆ : ಕೆಲವರು ಬಾಗಿಲುಗಳನ್ನು

ಮುಚ್ಚಿದರು; ಉಳಿದವರು ತಮ್ಮ ಪಾಲಿಗೆ ಬಾಗಿಲುಗಳನ್ನು ಮುಚ್ಚಲಾಗಿದೆ ಎಂದು ಕಂಡುಕೊಂಡರು. ಏಕೆಂದರೆ ಬ್ರಾಹ್ಮಣರು ಹಾಗಿದ್ದರು ಎಂಬುದೇ ಇದಕ್ಕೆ ಮೂಲಕಾರಣ. ಈ ಪ್ರವೃತ್ತಿಯನ್ನು ಎಲ್ಲ ಬ್ರಾಹ್ಮಣೇತರರ ಉಪ-ವಿಭಾಗಗಳು ಅಥವಾ ವರ್ಗಗಳು ಹೃದಯಪೂರ್ವಕವಾಗಿ ಅನುಕರಿಸಿದವು. ಮುಂದೆ ಪ್ರತಿ ಉಪವಿಭಾಗವು ಸ್ವಜಾತಿ ಪದ್ಧತಿ ಪಾಲಿಸುವ ಜಾತಿಗಳಾದವು. ಅನುಕರಣೀಯ ಪ್ರವೃತ್ತಿ ಜನಮನದಲ್ಲಿ ಆಳವಾಗಿ ಬೇರೂರಿತು.

ಗೇಬ್ರಿಯಲ್ ಟರ್ಡೇ ಈ ಅನುಕರಣೆಯ ಪ್ರವೃತ್ತಿಯನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡಿ ಈ ರೀತಿ ವಿವರಿಸಿದ್ದಾರೆ : ಅನುಕರಣೆ ಎಂಬುದು ಮೇಲಿನಿಂದ ಕೆಳಕ್ಕೆ ಹರಿದುಬರುತ್ತದೆ. ಉತ್ತಮವರ್ಗ ಯಾವಾಗಲೂ ಎಲ್ಲೆಡೆಗಳಲ್ಲೂ ತನ್ನ ಮುಂದಾಳುಗಳಾದ ರಾಜರು ಮತ್ತು ಸಾರ್ವಭೌಮರನ್ನು ಅನುಕರಿಸುತ್ತದೆ. ಜನತೆ ಶ್ರೀಮಂತ ವರ್ಗವನ್ನು ಅನುಕರಿಸುತ್ತ ಹೋದಂತೆ ಜಾತಿಯ ಪ್ರಜ್ಞೆ ಬೆಳೆಯುತ್ತಾ ಹೋಗಿ ಅದು ನೈತಿಕ, ಧಾರ್ಮಿಕ, ಸಾಮಾಜಿಕ ಸಂಹಿತೆಯನ್ನು ಗಂಭೀರವಾಗಿ ವಿರೋಧಿಸುವ ಯಾವುದೇ ಹೊಸ ಬದಲಾವಣೆಯನ್ನೂ ಸಹಿಸಲಾರದು. ಯಾವುದೇ ಒಂದು ಜಾತಿ ತನಗೆ ಮಣಿಯದಿರುವ ಸದಸ್ಯರನ್ನು ಜಾತಿಯಿಂದ ಹೊರಗೆ ಹಾಕಬಲ್ಲದು. ಅವರನ್ನು ಬೇರೆ ಜಾತಿಗಳವರು ತಮ್ಮೊಳಗೆ ಸೇರಿಸಿಕೊಳ್ಳುವ ಅಥವಾ ಬರಮಾಡಿಕೊಳ್ಳುವ ಪರ್ಯಾಯ ವ್ಯವಸ್ಥೆಯಿಲ್ಲದ ಕಾರಣ ಅವರ ಪಾಡಿಗೆ ಅವರನ್ನು ಬಿಟ್ಟುಬಿಡಲಾಗುವುದು.

ಜಾತಿಯ ಕಟ್ಟುಪಾಡುಗಳು ಎಷ್ಟು ಕಠೋರ ಎಂದರೆ ಅಪರಾಧಗಳ ಸ್ವರೂಪ, ಭಿನ್ನತೆಗಳನ್ನು ಮತ್ತು ಅವುಗಳ ಸೂಕ್ಷ್ಮ ಮತ್ತು ಒಳ ವ್ಯತ್ಯಾಸಗಳನ್ನು ಅವು ಗುರುತಿಸುವುದಿಲ್ಲ. ಹೊಸತನವೆಂಬುದು ಯಾವುದೇ ಸ್ವರೂಪದ್ದಾಗಿರಬಹುದು. ಆದರೆ ಅವೆಲ್ಲವೂ ಒಂದೇ ಬಗೆಯ ದಂಡವನ್ನು ಅನುಭವಿಸುತ್ತವೆ. ಉದಾಹರಣೆಗೆ ಅನೈತಿಕ ಪ್ರೇಮಿಗಳು ಸಮ್ಮಿಶ್ರ ಜಾತಿಯನ್ನು ಸೃಷ್ಟಿಸುತ್ತಾರೆ. ಸಂಹಿತೆಯನ್ನು ಉಲ್ಲಂಘಿಸುವ ತಪ್ಪಿತಸ್ಥರಿಗೆ ಜಾತಿಗಳು ದಯೆ, ದಾಕ್ಷಿಣ್ಯ ತೋರುವುದಿಲ್ಲ. ಅವರಿಗೆ ದಂಡನೆಯೆಂದರೆ ಸಾಮಾಜಿಕ ಬಹಿಷ್ಕಾರ. ಅಂದರೆ ಗಂಡು-ಹೆಣ್ಣುಗಳೆರಡನ್ನೂ ಎರಡು ಜಾತಿಗಳವರೂ ಬಹಿಷ್ಕರಿಸುವುದು. ಇದರ ಫಲಿತಾಂಶವೆಂದರೆ ಇನ್ನೊಂದು ಹೊಸ ಜಾತಿಯ ಸೃಷ್ಟಿ.

ಅಂಬೇಡ್ಕರ್‌ರವರು ಜಾತಿ ಸಮಸ್ಯೆಯನ್ನು ಕುರಿತು ತಾವು ನಡೆಸಿದ ಅಧ್ಯಯನದಿಂದ ಮುಖ್ಯವಾಗಿ ನಾಲ್ಕು ಅಂಶಗಳನ್ನು ಗುರುತಿಸಿದ್ದಾರೆ.

1. ಹಿಂದೂ ಜನಾಂಗ ಒಂದು ಸಂಕೀರ್ಣ ರಚನೆಯಾಗಿದ್ದರೂ ಅದರಲ್ಲೊಂದು ಆಳವಾದ ಸಾಂಸ್ಕೃತಿಕ ಏಕತೆಯಿದೆ.
2. ವ್ಯಾಪಕವಾದ ಈ ಸಾಂಸ್ಕೃತಿಕ ಘಟಕದ ಪ್ರತಿಯೊಂದು ಭಾಗವನ್ನು ಜಾತಿಯು ಹೆಣೆದು ಕಟ್ಟಿದೆ.
3. ಪ್ರಾರಂಭದಲ್ಲಿದ್ದುದ್ದು ಒಂದೇ ಜಾತಿ.
4. ಅನುಕರಣೆಯಿಂದಲೂ ಮತ್ತು ಬಹಿಷ್ಕರಣೆಯಿಂದಲೂ ಮುಂದೆ ವರ್ಗಗಳೇ ಜಾತಿಗಳಾಗಿ ಪರಿಣಮಿಸಿದವು. ಇಂದು ಭಾರತದಲ್ಲಿ ಜಾತಿ ಸಮಸ್ಯೆಗೆ ವಿಚಿತ್ರವಾದ ಹಿತಾಸಕ್ತಿಗಳು ತಳುಕು ಹಾಕಿಕೊಂಡು ಕೆಲಸ ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಜಾತಿಪದ್ಧತಿಯ ಸಮರ್ಥನೆಗಾಗಿ ಕೆಲವರು ವಂಶಶುದ್ಧಿಯ ತತ್ವವನ್ನು ಬಳಸಿಕೊಂಡಿದ್ದಾರೆ. ಒಂದು ಜನಾಂಗದ ಅಥವಾ ವಂಶದ ಶುದ್ಧತೆಯನ್ನು ಕಾಪಾಡುವುದೇ ಜಾತಿಯ ಉದ್ದೇಶವೆಂದು ವಾದಿಸಲಾಗುತ್ತದೆ. ವಂಶಶಾಸ್ತ್ರಜ್ಞರ ಪ್ರಕಾರ ಜಗತ್ತಿನಲ್ಲಿ ಈಗ ಎಲ್ಲಿಯೂ ಶುದ್ಧವಂಶವೆಂಬುದು ಉಳಿದಿಲ್ಲ. ಎಲ್ಲ ಕಡೆಯೂ ವಂಶಗಳು ಸಂಕರವಾಗಿ ಹೋಗಿವೆ. ಭಾರತದಲ್ಲಿ ವಿಶೇಷವಾಗಿ ಈ ಸಂಕರ ಹೆಚ್ಚು ನಡೆದುಹೋಗಿದೆ. ಪರಕೀಯ ಅಂಶ ಬೆರೆಯದಂತಹ ಒಂದು ವರ್ಗವಾಗಲಿ, ಜಾತಿಯಾಗಲಿ ಭಾರತದಲ್ಲಿ ಉಳಿದಿಲ್ಲ ಎನ್ನುತ್ತಾರೆ ಡಿ. ಆರ್. ಭಂಡಾರ್‌ಕರ್. ತಾವು ಸಂಪೂರ್ಣ ಶುದ್ಧರೆಂದು ಭ್ರಮಿಸಿಕೊಂಡಿರುವ ಬ್ರಾಹ್ಮಣರಲ್ಲೂ ಕೂಡ ಪರಕೀಯ ರಕ್ತ ಸಂಕರವಾಗಿದೆ. ವಾಸ್ತವವಾಗಿ ಭಾರತದಲ್ಲಿ ವಿವಿಧ ಜನಾಂಗಗಳಲ್ಲಿ ಪರಸ್ಪರ ರಕ್ತ ಸಂಬಂಧ ಹಾಗೂ ಸಂಸ್ಕೃತಿ ಸಮನ್ವಯ ನಡೆದುಹೋಗಿ ಎಷ್ಟೋ ಕಾಲದ ನಂತರ ಜಾತಿಗಳು ಹುಟ್ಟಿಕೊಂಡವು. ಜಾತಿ ಭೇದಗಳನ್ನು ಜನಾಂಗ ಭೇದಗಳೆಂದು ಭ್ರಮಿಸಿ ಹಾಗೆ ನಡೆದುಕೊಳ್ಳುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಪಂಜಾಬ್ ಬ್ರಾಹ್ಮಣ ಮತ್ತು ತಮಿಳು ಬ್ರಾಹ್ಮಣರ ನಡುವೆ ಯಾವ ವಂಶೀಯ ಸಂಬಂಧವೂ ಇಲ್ಲ. ಬಂಗಾಳದ ಅಸ್ಪೃಶ್ಯ ಮತ್ತು ತಮಿಳು ಅಸ್ಪೃಶ್ಯರ ನಡುವೆಯೂ ಯಾವ ವಂಶೀಯ ಸಂಬಂಧವೂ ಇಲ್ಲ. ಆದರೆ ಪಂಜಾಬ್ ಬ್ರಾಹ್ಮಣ ಮತ್ತು ಪಂಜಾಬ್ ಚಮ್ಮಾರ ಇಬ್ಬರೂ ಒಂದೇ ವಂಶದ ಸಂಬಂಧಿಗಳಾಗಿದ್ದಾರೆ. ಹಾಗೆಯೇ ತಮಿಳು ಬ್ರಾಹ್ಮಣ ಮತ್ತು ತಮಿಳು ಚಂಡಾಳನಿಗೂ ಯಾವ ವಂಶ ಭೇದವೂ ಇಲ್ಲ. ಮೂಲವಾಗಿ ಪಂಜಾಬ್ ಬ್ರಾಹ್ಮಣ ಹಾಗೂ ಪಂಜಾಬ್ ಚಮ್ಮಾರ ಇಬ್ಬರೂ ಒಂದೇ ವಂಶಕ್ಕೆ ಸೇರಿದವರು. ಇದೇ ಮಾತು ತಮಿಳುನಾಡಿನವರಿಗೂ ಅನ್ವಯಿಸುತ್ತದೆ. ಜಾತಿಪದ್ಧತಿ ವಂಶಭೇದವನ್ನು ಗುರುತಿಸುವುದಿಲ್ಲ. ಅದು ಒಂದೇ ವಂಶದವರಲ್ಲಿ ಸಾಮಾಜಿಕ ಭೇದಗಳನ್ನು ಮಾತ್ರ (ಜಾತಿಪದ್ಧತಿ) ಉಂಟುಮಾಡಿದೆ.

ಒಂದು ಕಾಲಕ್ಕೆ ವೈದಿಕಶಾಹಿ ಧರ್ಮ ಪ್ರಸಾರಕರು ಇಡೀ ದೇಶವನ್ನೆಲ್ಲಾ ಸುತ್ತಿ ಸಾಮಾಜಿಕ ಜಾತಿ ಭೇದಗಳನ್ನು ಪ್ರಚಾರ ಮಾಡುತ್ತಾ ಗಟ್ಟಿಗೊಳಿಸಿರಬೇಕು. ಹಿಂದೂಗಳಲ್ಲಿ ಜಾತಿಪದ್ಧತಿ ಗಟ್ಟಿಯಾಗಿ ಬೆಳೆದುನಿಂತ ನಂತರ ಹಿಂದೂ ಧರ್ಮದ ಪ್ರಚಾರ ನಿಂತುಹೋಗಿರಬೇಕು. ಇದು ಮೂಲವಾಗಿ ಒಂದು ಕಡೆಯಿಂದ ಪ್ರಾರಂಭವಾದುದಲ್ಲ. ಎಲ್ಲಾ ಕಡೆಗಳಿಂದಲೂ ಏಕಕಾಲಕ್ಕೆ ಹರಡಿ ದೇಶದಾದ್ಯಂತ ಬೆಳೆದು ನಿಂತಿರಬೇಕು.

ಜಾತಿಪದ್ಧತಿ ಉತ್ತಮ ಸಂತಾನ ಶಾಸ್ತ್ರದ ದೃಷ್ಟಿಯಿಂದ ರೂಪಿತವಾಯಿತೆಂದು ಹೇಳುವುದು ಶುದ್ಧ ತಪ್ಪು ಕಲ್ಪನೆಯಾಗಿದೆ. ವಾಸ್ತವವಾಗಿ ಹಿಂದೂಗಳು ಸೈನಿಕ ಬಲದ ದೃಷ್ಟಿಯಿಂದ ದೇಹದಾರ್ಢ್ಯದಲ್ಲಿ ಕೆಳದರ್ಜೆಗೆ ಸೇರಿದವರು. ಮೈಕಟ್ಟಿನಲ್ಲಿ ಕುಂಠಿತರಾದ, ಎದೆ ವಿಸ್ತಾರವಿಲ್ಲದೆ ಕುಬ್ಜ ವರ್ಗದವರಾಗಿದ್ದಾರೆ. ನೂರಕ್ಕೆ ಶೇಕಡ ತೊಂಬತ್ತರಷ್ಟು ಸೈನಿಕ ಸೇವೆಗೆ ಅನರ್ಹರಾದ ಜನರಿರುವ ರಾಷ್ಟ್ರ ನಮ್ಮದು. ಹೀಗಾದರೆ 'ಉತ್ತಮ ಸಂತಾನ' ಎಲ್ಲಿ ಬಂದಿತು?

ಮೂಲವಾಗಿ 'ಹಿಂದೂ' ಎನ್ನುವ ಪದವು ಈ ಧರ್ಮಕ್ಕೆ ಸೇರಿದ್ದಲ್ಲ. ದಕ್ಷಿಣ ಏಷ್ಯಾದ ಉಪಖಂಡದಿಂದ ಬಂದ ಅಸಂಖ್ಯ ಆಕ್ರಮಣಕೋರರು 'ಸಿಂಧು' ನದಿಯ ಬಯಲಲ್ಲಿ

ವಾಸಿಸಲು ಪ್ರಾರಂಭಿಸಿದಾಗ ಸೃಷ್ಟಿಯಾದ ಭೌಗೋಳಿಕತೆಯ ಹಿನ್ನೆಲೆಯುಳ್ಳ ಪದವೇ 'ಹಿಂದೂ' ಎಂಬ ಪದ. ಮಧ್ಯಕಾಲದಲ್ಲಿ ವಿಶ್ವದ ಮುಸಲ್ಮಾನ ಪ್ರಪಂಚವು ಇಲ್ಲಿನವರನ್ನು ಹಿಂದೂಸ್ಥಾನಿಗಳೆಂದೂ, ಈ ಭಾಗವನ್ನು ಹಿಂದೂಸ್ಥಾನವೆಂದೂ ಕರೆಯಿತು. ತೀರ ಇತ್ತೀಚೆಗೆ ಬ್ರಿಟಿಷರ ಕಾಲದಲ್ಲಿ 'ಹಿಂದೂ' ಎಂಬುದು ಒಂದು ಧರ್ಮವನ್ನು ಉಲ್ಲೇಖಿಸುವ ಪದವಾಗಿ ಬೆಳಕಿಗೆ ಬಂದಿತು. ಹಿಂದೂ ಮಹಾಸಾಗರ ಮತ್ತು ಹಿಮಾಲಯ ನಡುವಿನ ಪ್ರದೇಶಕ್ಕೆ ಈ ಹೆಸರು ಬಂದಿದೆ ಎನ್ನುವ ಮಾತು ಇದೆ. ಅತಿ ಪ್ರಾಚೀನ ಸಾಹಿತ್ಯ ಮತ್ತು ಧರ್ಮಶಾಸ್ತ್ರ ಗ್ರಂಥಗಳಲ್ಲೆಲ್ಲೂ 'ಹಿಂದು' ಎಂಬ ಪದವಿಲ್ಲ. ಗೀತೆಯಲ್ಲಿಯೂ ಇಲ್ಲ. ಡೇರಿಯಸ್ಸನ ಒಂದು ಶಾಸನದಲ್ಲಿ 'ಹಿಂದು' ಎಂಬ ಪದವಿದೆ, ಅದು ನಂತರದ 'ಹಿಂದು' ಶಬ್ದದ ಆದಿರೂಪವಿರಬೇಕು.

ಇಂದಿನ ಹಿಂದೂ ಸಮಾಜ ಎನ್ನುವುದು ಅನೇಕ ಜಾತಿಗಳ ಒಂದು ಸಾಮೂಹಿಕ ಗುಂಪು. ಪ್ರತಿಯೊಂದು ಜಾತಿಗೂ ತನ್ನ ಅಸ್ತಿತ್ವದ ಆಳಿವು ಉಳಿವಿನ ಎಚ್ಚರ ಕಾಡತೊಡಗಿದೆ. ತಾನು ಉಳಿಯಬೇಕು, ಅಷ್ಟೇ ಅದರ ಧ್ಯೇಯ. ಈ ಜಾತಿಗಳು ಒಂದು ಸಂಯುಕ್ತ ಪದ್ಧತಿಯ ಸಂಘಟನೆಯನ್ನು ಮಾಡಿಕೊಂಡಿಲ್ಲ. ಪ್ರತಿಯೊಂದು ಜಾತಿ, ಉಪಜಾತಿಯ ವ್ಯಕ್ತಿ ಇನ್ನೊಂದು ಜಾತಿಗೂ ತನಗೂ ಏನೂ ಸಂಬಂಧವಿಲ್ಲದಂತೆ ನಡೆದುಕೊಳ್ಳುತ್ತಾನೆ. ಇತರ ಜಾತಿಗಳಿಗಿಂತ ತಾನು ಬೇರೆಯೆಂದೂ, ವಿಶಿಷ್ಟವೆಂದೂ, ಉಚ್ಚ ಜಾತಿ ಎಂದು ತೋರಿಸಿಕೊಳ್ಳಲು ಪ್ರತಿಯೊಂದು ಜಾತಿಯೂ ಹೆಣಗುತ್ತದೆ. ಸಮಾಜಶಾಸ್ತ್ರಜ್ಞರು ಹೇಳುವಂತೆ ಸ್ವಸಮುದಾಯ ಪ್ರಜ್ಞೆ ಹಿಂದೂಗಳಲ್ಲಿ ಎಳ್ಳಷ್ಟೂ ಇಲ್ಲ. ಪ್ರತಿಯೊಬ್ಬ ಹಿಂದೂವಿನಲ್ಲೂ ಇರುವ ಪ್ರಜ್ಞೆ ಒಂದೇ ಒಂದು; ತನ್ನ ಜಾತಿಯ ಪ್ರಜ್ಞೆ. ಆದುದರಿಂದ ಹಿಂದೂಗಳು ಒಂದು ಪ್ರತ್ಯೇಕ ಸಮಾಜವನ್ನಾಗಲಿ, ರಾಷ್ಟ್ರವನ್ನಾಗಲಿ ಕಟ್ಟಲು ಇಂದಿಗೂ ಸಾಧ್ಯವಾಗಿಲ್ಲ. ಜಾತಿಗಳು ಇರುವವರೆಗೂ ಅದು ಸಾಧ್ಯವಿಲ್ಲ. ಅಸ್ಪೃಶ್ಯತೆಯನ್ನು ತೊಡೆದು ಹಾಕುವವರೆಗೂ ಹಿಂದೂ ಧರ್ಮಕ್ಕೆ ಜಗತ್ತಿನಲ್ಲಿ ಗೌರವ ಇರುವುದಿಲ್ಲ.

'ಹಿಂದೂ ಒಬ್ಬ ಹೇಡಿ' ಎಂದು ಮಹಾತ್ಮಾ ಗಾಂಧಿ ಹೇಳಿದ್ದಾರೆ. ಮಹಮ್ಮದೀಯ ಮತ್ತು ಸಿಖ್ಖರಿಂದ ಹಿಂದೂವು ಭಿನ್ನವಾಗಿರುವುದು ಅವನ ಅಂಜುಗುಳಿತನ ಮತ್ತು ಹೇಡಿತನದಿಂದಲೇ. ಹಿಂದೂವು ತನ್ನ ಆತ್ಮರಕ್ಷಣೆಗಾಗಿ ಠಕ್ಕುತನವನ್ನು ದ್ರೋಹವನ್ನು ಮಾಡುತ್ತಾನೆ; ಮಾಡಬೇಕಾಗುತ್ತದೆ. ಸಿಖ್ಖನಾಗಲಿ, ಮಹಮ್ಮದೀಯನಾಗಲಿ ನಿರ್ಭಯತೆಯನ್ನು ಪ್ರದರ್ಶಿಸುತ್ತಾನೆ. ಆ ಬಲ ಅವನಿಗೆ ತನ್ನ ಸಹಧರ್ಮಿಗಳ ಭ್ರಾತೃತ್ವದಿಂದ ದೊರಕಿರುವುದಾಗಿದೆ. ಒಬ್ಬ ಸಿಖ್ಖನಾಗಲಿ, ಒಬ್ಬ ಮಹಮ್ಮದೀಯನಾಗಲಿ ಅಪಾಯಕ್ಕೆ ಸಿಲುಕಿದರೆ ಎಲ್ಲಾ ಸಿಖ್ಖರು ಅಥವಾ ಎಲ್ಲಾ ಮಹಮ್ಮದೀಯರು ತನ್ನನ್ನು ಪಾರು ಮಾಡಲು ಬರುವರೆಂಬ ವಿಶ್ವಾಸ ಅವನಿಗಿದೆ. ಹಿಂದೂವಿಗೆ ಇಂತಹ ಯಾವ ಬಲವೂ ಇಲ್ಲ. ಹೀಗೆ ಹಿಂದುವು ಶಕ್ತಿಹೀನನಾಗಿ ಅಂಜುಬುರುಕನಾಗುತ್ತಾನೆ. ಇದಕ್ಕೆ ಮುಖ್ಯ ಕಾರಣ ಜಾತಿ; ಜಾತಿಗಳು ಇರುವವರೆಗೆ ಸಂಘಟನೆ ಇಲ್ಲ. ಜಾತಿಯಿಂದ ಹಿಂದೂಗಳ ಪರಿಸ್ಥಿತಿ ಶೋಚನೀಯ ಸ್ಥಿತಿ ತಲುಪಿದೆ. ಜಾತಿ ಸಾರ್ವಜನಿಕ ಭಾವನೆಯನ್ನು ನಾಶಗೊಳಿಸಿದೆ, ಹೃದಯ ವೈಶಾಲ್ಯವನ್ನು ಹಾಳುಮಾಡಿದೆ. ಸದ್ಗುಣಿಯಾದ ಮಹಾಪುರುಷನೊಬ್ಬನು ನೇತಾರನಾಗಿ ಬಂದರೆ ಎಲ್ಲಾ ಜಾತಿಗಳವರು ಅವನನ್ನು ಹಿಂಬಾಲಿಸುವುದಿಲ್ಲ. ಆತನು ಮಹಾತ್ಮನೇ ಆಗಲಿ ಅವನನ್ನು ಮುಂದಾಳೆಂದು

ಒಪ್ಪಿಕೊಳ್ಳಬೇಕಾದರೆ ಅವನು ತಮ್ಮ ಜಾತಿಯವನೇ ಆಗಿರಬೇಕಾಗುತ್ತದೆ. ಮುಂದಾಳು ಬ್ರಾಹ್ಮಣನಾಗಿದ್ದರೆ ಮಾತ್ರ ಬ್ರಾಹ್ಮಣರು ಅವನ ಅನುಯಾಯಿಗಳಾಗುತ್ತಾರೆ. ಕ್ಷತ್ರಿಯನಾಗಿದ್ದರೆ ಕ್ಷತ್ರಿಯರು ಮಾತ್ರ ಅವನನ್ನು ಹಿಂಬಾಲಿಸುತ್ತಾರೆ. ಗೌಡನಾಗಿದ್ದರೆ ಗೌಡರು, ವಾಲ್ಮೀಕಿಯಾಗಿದ್ದರೆ ವಾಲ್ಮೀಕಿಗಳು ಹಿಂಬಾಲಿಸುತ್ತಾರೆ. ಎಲ್ಲಾ ಜಾತಿ ಉಪಜಾತಿಗಳಿಗೂ ಈ ಮಾತು ಅನ್ವಯಿಸುತ್ತದೆ. ಈಗ ಜಾತಿ ಉಪ ಜಾತಿಗೊಬ್ಬರಂತೆ ಸ್ವಾಮಿಗಳು ಹುಟ್ಟಿಕೊಳ್ಳುತ್ತಿದ್ದಾರೆ. ಮೊದಲಿಗೆ ಬ್ರಾಹ್ಮಣರು ಮತ್ತು ಲಿಂಗಾಯತರು ಹುಟ್ಟುಹಾಕಿದ ಈ ಮಠಗಳ ಪದ್ಧತಿಯನ್ನು ಈಗ ಶೂದ್ರರು, ಅತಿ ಶೂದ್ರರು ಪ್ರಾರಂಭಿಸಿದ್ದಾರೆ. ಏಕೆಂದರೆ ಅವರೆಲ್ಲ ಜಾತಿಯ ಹೆಸರಿನಲ್ಲಿ ಒಗ್ಗಟ್ಟಾಗಬೇಕು ಎನ್ನುವುದೇ ಅವರ ವಾದ. ಜಾತಿ ಎನ್ನುವ ಭೂತ ಜನರ ನಡುವಿನ ಸಂಬಂಧಗಳನ್ನು ಛಿದ್ರ ಛಿದ್ರವಾಗಿಸುತ್ತ ದೈತ್ಯ ಹೆಜ್ಜೆಗಳನ್ನಿಡುತ್ತಾ ನಡೆಯುತ್ತಿದೆ. ಅಸ್ಪೃಶ್ಯತೆ ಇದರ ನಡುವಿನ ಇನ್ನೊಂದು ಅತಿ ಮಾರಕರೋಗ.

ಹಿಂದೂಗಳಲ್ಲಿ ಇನ್ನೊಂದು ಸಮಯಸಾಧಕರ ಗುಂಪಿದೆ. ಅವರ ಆದರ್ಶವೇ ಬೇರೆ. ತಾವು ಆರ್ಯ ಸಮಾಜದವರೆಂದು ಹೇಳಿಕೊಳ್ಳುವ ಇವರ ಆದರ್ಶಕ್ಕೆ ಚಾತುರ್ವರ್ಣ್ಯವೇ ಚೌಕಟ್ಟು. ಈಗ ಭಾರತದಲ್ಲಿರುವ ನಾಲ್ಕು ಸಾವಿರ ಜಾತಿಗಳನ್ನು ನಾಲ್ಕೇ ವರ್ಗ ಸಮಾಜಗಳಾಗಿ ವಿಭಾಗಿಸುವುದು ಅವರ ಯೋಜನೆ. ತಮ್ಮ ಈ ಯೋಜನೆಯನ್ನು ಹೆಚ್ಚು ಆಕರ್ಷಕವಾಗಿ ತೋರಿಸಿ, ಆಕ್ಷೇಪಗಳಿಗೆ ಇಲ್ಲಿ ಅವಕಾಶ ವಿರುವುದಿಲ್ಲ ಎನ್ನುವ ಅವರು ಹೀಗೆ ಹೇಳುತ್ತಾರೆ: ಈ ಚಾತುರ್ವರ್ಣ್ಯದ ಆಧಾರ ಜನ್ಮವಲ್ಲ, ಅವನ ಯೋಗ್ಯತೆ. ಈ ಆದರ್ಶವನ್ನು ಹುಟ್ಟುಹಾಕಿರುವ ಅವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ಹಣೆಪಟ್ಟಿಯಿಂದ ಮನುಷ್ಯರನ್ನು ಗುರುತಿಸುತ್ತಾರೆ. ಯೋಗ್ಯತೆಯೇ ಆಧಾರವಾದರೆ ವರ್ಣಗಳಲ್ಲಿ ಬೆರಕೆ ಇರಬಾರದಿತ್ತು. 'ವರ್ಣಸಂಕರ'ವು ಪಾಪವೆಂದು ಗೀತೆಯಲ್ಲಿ ಹೇಳಲಾಗಿದೆ.

ಸಾರ್ವಜನಿಕ ಸಭೆಯೊಂದರಲ್ಲಿ ಕನ್ನಡದ ಪ್ರಖ್ಯಾತ ನಟರೊಬ್ಬರು ಈ ರೀತಿ ಹೇಳಿ ನನ್ನನ್ನು ದಂಗುಬಡಿಸಿದರು. ಸಮಾಜದಲ್ಲಿ ಜಾತಿ, ಅಸ್ಪೃಶ್ಯತೆಯನ್ನು ಹೋಗಲಾಡಿಸ ಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎನ್ನುವುದಕ್ಕೆ ಬೇರೆಯೇ ಅರ್ಥಗಳಿವೆ. ಆದರೆ ಈಗ ಸಮಾಜದಲ್ಲಿ ನಡೆಯುತ್ತಿರುವುದೇ ಬೇರೆ. ಎಲ್ಲಾ ಜನಾಂಗದವರು ಬೆಳಗ್ಗೆ ಎದ್ದು ಪೂಜೆ ಮಾಡಿದಾಗ ಅವರು ಬ್ರಾಹ್ಮಣರಾಗುತ್ತಾರೆ. ತಮ್ಮ ಹೊಟ್ಟೆಪಾಡಿಗೆ ವ್ಯಾಪಾರ ಮಾಡಿದರೆ ವೈಶ್ಯರಾಗುತ್ತಾರೆ. ಯಾರಾದರೂ ಜಗಳಕ್ಕೆ ಬಂದರೆ ಅವರನ್ನು ಎದುರಿಸಲು ನಿಂತರೆ ಕ್ಷತ್ರಿಯರಾಗುತ್ತಾರೆ. ಇನ್ನು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಂಡರೆ ಅವರು ಶೂದ್ರರಾಗುತ್ತಾರೆ. ಇದು ಅವರ ವ್ಯಾಖ್ಯಾನ. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯ ತರ್ಕಗಳನ್ನು ಹುಟ್ಟಿಸಿ ಜನರನ್ನು ತಪ್ಪು ದಾರಿಗಳಿಗೆ ಎಳೆಯುತ್ತಿದ್ದಾರೆ.

ಈ ಚಾತುರ್ವರ್ಣ್ಯ ತೀರ ಪ್ರತಿಗಾಮಿಯಾಗಿದೆ. ಈ ಹೆಸರು ಕೇಳಿದರೆ ನನ್ನ ರಕ್ತ ಕುದಿಯುತ್ತಿದೆ ಎನ್ನುವ ಅಂಬೇಡ್ಕರ್ ಅವರು ಇದನ್ನು ತೀವ್ರವಾಗಿ ವಿರೋಧಿಸುತ್ತಿದ್ದು, ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದಾಗ ಸಾಮಾಜಿಕ ಸಂಘಟನೆಯ ದೃಷ್ಟಿಯಿಂದ ಚಾತುರ್ವರ್ಣ್ಯವು ಅವ್ಯಾವಹಾರಿಕವೂ ಹಾನಿಕಾರಕವೂ ಹಾಗೂ ವ್ಯರ್ಥವೂ ಆಗಿದೆ ಎನ್ನುತ್ತಾರೆ. ಆದರೆ 'ಹಿಂದೂ' ಮೇಲು ವರ್ಗದವರು ವರ್ಣ ತತ್ವ ಬೇರೆ, ಜಾತಿ ತತ್ವ

ಬೇರೆ, ಅವೆರಡೂ ಮೂಲತಃ ಬೇರೆ ಬೇರೆಯೇ ಆಗಿರುವುದೇ ಅಲ್ಲದೆ ಪರಸ್ಪರ ವಿರುದ್ಧವೂ ಆಗಿವೆ ಎನ್ನುತ್ತಾರೆ. ವರ್ಣವು ಯೋಗ್ಯತೆ ಒಂದರಿಂದಲೇ ನಿರ್ಣಯಿಸಲ್ಪಡುತ್ತದೆ ಎನ್ನುವುದಾದರೆ ಜನ್ಮದಿಂದ ಕೀಳು ಜಾತಿಯವರು ಯೋಗ್ಯತೆ ಇದ್ದರೂ ಹಿಂದೂ ಸಮಾಜದಲ್ಲಿ ಮೇಲಿನ ಸ್ಥಾನವನ್ನು ಪಡೆಯುವವರೇ ಎನ್ನುವ ಪ್ರಶ್ನೆ ಏಳುತ್ತದೆ. ಕೆಲವು ಜನರು ಯೋಗ್ಯತೆಯಿಲ್ಲದಿದ್ದರೂ ತಮ್ಮ ಜನ್ಮಬಲದಿಂದ ಮೇಲು ಜಾತಿಗೆ ಸೇರಿದವರಾಗಿರುತ್ತಾರೆ. ವರ್ಣ ಪದ್ಧತಿಯನ್ನು ಜಾರಿ ಮಾಡಬೇಕೆಂದರೆ ಮೊದಲು ಜಾತಿಪದ್ಧತಿಯನ್ನು ನಾಶಮಾಡಬೇಕು. ಪೂರ್ವಕಾಲದಲ್ಲಿ ಮಾಡಿದ ನಾಲ್ಕು ವರ್ಣಗಳು ಇಂದು ನಾಲ್ಕು ಸಾವಿರ ಜಾತಿಗಳಾಗಿ ಪರಿವರ್ತನೆ ಹೊಂದಿರುವುದೇ ಇದಕ್ಕೆ ಪ್ರಬಲವಾದ ಸಾಕ್ಷಿ. ನಾಲ್ಕು ವರ್ಣಗಳನ್ನು ಕಟ್ಟುನಿಟ್ಟಾಗಿ ಪಾಲನೆಗೆ ತರಬೇಕಾದರೆ ಅದರ ನಿಯಮಕ್ಕೆ ತಪ್ಪಿದವರನ್ನು ಶಿಕ್ಷಿಸಬೇಕು. ಇಲ್ಲದಿದ್ದರೆ ವರ್ಣಗಳು ಕಟ್ಟುಪಾಡಿನಲ್ಲಿ ನಿಲ್ಲುವುದಿಲ್ಲ. ರಾಮರಾಜ್ಯವು ಚಾತುರ್ವರ್ಣ್ಯದ ತತ್ವವನ್ನು ಆಧರಿಸಿದ ರಾಜ್ಯವೇ ಆಗಿತ್ತು. ರಾಮನು ರಾಜನಾಗಿ ಆಳುತ್ತಿದ್ದ ಕಾಲದಲ್ಲಿ ಶಂಬೂಕನು ತನ್ನ ಶೂದ್ರವರ್ಣವನ್ನು ತೊರೆದು ಬ್ರಾಹ್ಮಣನಾಗಲು ಹೊರಟಾಗ ರಾಮನು ಅವನನ್ನು ವಧೆ ಮಾಡಿದ.

### ಶ್ರಮಜೀವಿಗಳಲ್ಲಿ ಜಾತಿಭೇದ

ಭಾರತದ ಶ್ರಮಜೀವಿ ವರ್ಗ ಬಡತನದಲ್ಲಿದೆ. ಆದರೆ ಈ ವರ್ಗ ಶ್ರೀಮಂತರು ಮತ್ತು ಬಡವರು ಎಂಬ ಭೇದವನ್ನು ಬಿಟ್ಟು ಬೇರೆ ಯಾವ ಭೇದಗಳೂ ನಮ್ಮಲ್ಲಿ ಇಲ್ಲವೆಂದು ನೈತಿಕ ಸ್ಥೈರ್ಯದಿಂದ ಹೇಳಲಾರದು. ಈ ವರ್ಗ, ಜಾತಿಗಳ ಮಧ್ಯದ ಅಂತರವನ್ನು ಮೇಲುಕೀಳೆಂಬ ಭೇದವನ್ನು ತಾನು ಅನುಸರಿಸುವುದಿಲ್ಲ ಎಂಬುದನ್ನು ದೃಢಪಡಿಸಲಾರದೆ ಹೋಗಿದೆ. ಹೀಗಿರುವಾಗ ಇಂತಹ ಜನರು ಶ್ರೀಮಂತರ ವಿರುದ್ಧವಾದ ಕ್ರಾಂತಿಯಲ್ಲಿ ಒಗ್ಗೂಡುವರೆಂಬ ನಂಬಿಕೆಯಿಲ್ಲ. ಶ್ರಮಜೀವಿಗಳೆಲ್ಲ ಒಗ್ಗೂಡದೆಹೋದ ಪಕ್ಷದಲ್ಲಿ ಕ್ರಾಂತಿ ನಡೆಯುವುದು ಅಸಾಧ್ಯ. ಒಂದು ಪಕ್ಷ ಬಂಡಾಯ ನಡೆದು ಸಮಾಜವಾದಿಗಳಿಗೆ ಅಧಿಕಾರ ದೊರೆಯಿತೆಂದು ಭಾವಿಸಿದರೂ ಭಾರತದಲ್ಲಿರುವ ವಿಶಿಷ್ಟ ಸಾಮಾಜಿಕ ಪರಿಸ್ಥಿತಿ ಅವರನ್ನು ಮುಂದುವರಿಯಲು ಬಿಡುವುದಿಲ್ಲ. ಉಚ್ಚ-ನೀಚ, ಸ್ಪೃಶ್ಯ-ಅಸ್ಪೃಶ್ಯ ಈ ಮೊದಲಾದ ಭೇದಗಳನ್ನು ಪಾಲಿಸುತ್ತ ಬಂದಿರುವುದರಿಂದ ಹುಟ್ಟಿರುವ ಸಮಸ್ಯೆಗಳನ್ನು ಬಗೆಹರಿಸದೆ ಸಮಾಜವಾದ ಭಾರತದಲ್ಲಿ ಒಂದು ದಿನವೂ ಆಡಳಿತ ನಡೆಸಲಾರದು. ಇಂದಿನ ರಾಜಕೀಯವೇ ಇದಕ್ಕೆ ಉದಾಹರಣೆ. ನೀವು ಯಾವ ಹಾದಿಗಾದರೂ ಹೋಗಿ, ಜಾತಿಯೆಂಬ ಭೂತ ನಿಮ್ಮನ್ನು ಅಡ್ಡಗಟ್ಟುತ್ತದೆ. ಈ ಭೂತವನ್ನು ಸಂಹರಿಸದ ಹೊರತು, ಅತಿಶೂದ್ರರಿಗೆ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸಮಾನತೆ ದೊರಕುವುದಿಲ್ಲ. ಶ್ರಮ ವಿಭಜನೆಯು ಪ್ರತಿಯೊಂದು ಸುಧಾರಿತ ಸಮಾಜದ ಅವಶ್ಯ ಲಕ್ಷಣವಾಗಿರುವಾಗ ಜಾತಿಪದ್ಧತಿಯಿದ್ದರೆ ಏನೂ ದೋಷವಿಲ್ಲವೆಂದು ಕೆಲವರು ವಾದಿಸುತ್ತಾರೆ. ಆದರೆ ಜಾತಿಪದ್ಧತಿ ಕೇವಲ ಶ್ರಮ ವಿಭಜನೆಯಾಗದೆ, ಶ್ರಮಜೀವಿಗಳ ವಿಭಜನೆಯೂ ಆಗಿದೆ.

ಭಾರತದಲ್ಲಿ ಕಳೆದ ಮೂರು ದಶಕಗಳಲ್ಲಿ ಐಟಿ/ಬಿಟಿ, ಬಿಪಿಓ ಹೆಸರಿನಲ್ಲಿ ದೇಶದ ಒಳಗೆ ಬಂದ ತಂತ್ರಜ್ಞಾನದಿಂದ ಕೆಲವು ಲಕ್ಷಗಳ ಯುವಕ/ಯುವತಿಯರು

ಉದ್ಯೋಗಗಳನ್ನು ಪಡೆದುಕೊಂಡಿದ್ದಾರೆ. ಇದರ ಜೊತೆ ಜೊತೆಗೆ 'ಲಿವ್ ಇನ್ ಟುಗೆದರ್' ಮತ್ತು ಅಂತರಜಾತಿ, ಅಂತರ ಧರ್ಮಗಳ ಮಧ್ಯೆ ಪ್ರೇಮ ವಿವಾಹಗಳು ನಡೆಯುತ್ತಿವೆ. ಇದರಿಂದ ಜಾತಿ, ಧರ್ಮಗಳ ಮಧ್ಯೆ ಸಹಬಾಳ್ವೆ ನಡೆದು ಹಿಂದೂ ಧರ್ಮದಲ್ಲಿನ ಪುರಾತನ ಪದ್ಧತಿಗಳಾದ ಜಾತಿ, ಅಸ್ಪೃಶ್ಯತೆ ಸ್ವಲ್ಪ ಮಟ್ಟಿಗೆ ಕಡಮೆಯಾಗುವುದೇ ಎನ್ನುವ ಕಿಂಚಿತ್ತು ಆಸೆ ವಿಶ್ವಮಾನವ ಅಥವಾ ಮಾನವ ಧರ್ಮ ಪ್ರೀತಿಸುವವರ ಮಧ್ಯೆ ಸ್ವಲ್ಪ ಮೂಡಿಸಿದೆ. ಆದರೆ ಇಂತಹ ವಿವಾಹಗಳು ಹೆಚ್ಚಾಗಿ ಆಯಾ ಜಾತಿಗಳ/ಉಪಜಾತಿಗಳ ನಡುವೆಯೆ ನಡೆಯುತ್ತಿವೆ. ಉಚ್ಚ ಮತ್ತು ಕಡಿಮೆ ಜಾತಿಯವರ ನಡುವೆ ತೀರಾ ಅಪರೂಪ ಎನ್ನಬಹುದು.

ಇನ್ನೂ ನಿರಾಶಾದಾಯಕವೆಂದರೆ ಇಂದಿನ ಪೀಳಿಗೆಯ ಮಧ್ಯೆ ಹೆಚ್ಚೆಚ್ಚು ವಿಚ್ಛೇದನಗಳು ಬಹು ಬೇಗನೆ ಸಂಭವಿಸುತ್ತಿವೆ. ಇದರ ಜೊತೆಗೆ ಹಗಲು ರಾತ್ರಿಗಳಾಗಿ, ರಾತ್ರಿಗಳು ಹಗಲುಗಳಾಗಿ ಈ ಟೆಕ್ಕಿಗಳ ಇಡೀ ದೇಹದ ವ್ಯವಸ್ಥೆ ಕುಲಗೆಟ್ಟು ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮಗಳು ಬೀರಿ ಯುವ ಜನಾಂಗದಲ್ಲಿ ಸಹನೆ, ತಾಳ್ಮೆ ಹೋಗಿ ಅನೇಕ ರೀತಿಯ ತೊಂದರೆಗಳಿಗೆ ಸಿಲುಕಿಕೊಳ್ಳುತ್ತಿದ್ದಾರೆ. ಜೊತೆಗೆ ಪಿಜ್ಜಾ, ಬರ್ಗರ್ ರೀತಿಯ ತಿಂಡಿಗಳನ್ನು ತಿಂದು ಆರೋಗ್ಯವನ್ನು ಕೆಡಿಸಿಕೊಳ್ಳುತ್ತಿದ್ದಾರೆ. ಮೂವತ್ತು, ನಲವತ್ತು ವಯಸ್ಸು ದಾಟುವ ಮೊದಲೇ ಇವರು ಎಲ್ಲಾ ರೀತಿಯ ಕುತೂಹಲಗಳನ್ನು ಕಳೆದುಕೊಂಡು ಖಾಲಿಯಾಗುತ್ತಿದ್ದಾರೆ. ಹೀಗಾದರೆ ದೇಶದ ಭವಿಷ್ಯ ಮುಂದೆ ಏನಾಗುತ್ತದೆ? ಜಾಗತೀಕರಣ ಪ್ರಾರಂಭಿಸಿದ ಅನೇಕ ದೇಶಗಳು, (ಯುರೋಪ್ ದೇಶಗಳೂ ಸೇರಿ) ಈಗ ಈ ಹಾಳಾದ ಜಾಗತೀಕರಣ ತೊಲಗಬೇಕು ಎಂಬುದಾಗಿ ಮುಷ್ಕರ ನಡೆಸುತ್ತಿದ್ದಾರೆ. ಎಲ್ಲದಕ್ಕೂ ಒಂದು ಮಿತಿ ಇರಬೇಕು ಎನ್ನುವುದನ್ನು ಮರೆತ ಜಗತ್ತು ಈಗ ಅಭಿವೃದ್ಧಿ ಎಂಬ ಟ್ರ್ಯಾನ್ಸ್‌ನಲ್ಲಿ ಸಿಕ್ಕಿಕೊಂಡು ನರಳುತ್ತಿದೆ. ಜನರು ತಮ್ಮ ಮನೆಯ ಕಿಟಿಕಿ ಬಾಗಿಲುಗಳನ್ನು ಮುಚ್ಚಿ ಹೊಗೆಹಾಕಿಕೊಂಡಂತಿದೆ. ಅಭಿವೃದ್ಧಿಯ ಹೆಸರಿನಲ್ಲಿ ಗಾಳಿ, ನೀರು, ನದಿ, ಸಮುದ್ರ, ಭೂಮಿ, ಆಕಾಶ ಎಲ್ಲವೂ ಮಾಲಿನ್ಯಗೊಂಡಿದೆ.

> **ಭಾರತ ಗಾಯಗೊಂಡು ಬಿದ್ದಿದೆ. ಅದರ ಗಾಯ ಅದಕ್ಕೆ ಅನಿಸುತ್ತಿಲ್ಲ.**
> **ಅಸ್ಪೃಶ್ಯತೆ, ಜಾತಿ, ಮತೀಯತೆಯ ಗಾಯ ನಂಜಾಗಿ ಮೆದುಳು ಸೇರಿ**
> **ಭಾರತ ಹುಚ್ಚಾಗಿದೆ. ಈ ಗಾಯವನ್ನೇ, ಈ ಹುಚ್ಚನ್ನೇ ಸಮಾಜದಲ್ಲಿ**
> **'ಸಂಸ್ಕೃತಿ' ಅಂತ, 'ಪರಂಪರೆ' ಅಂತ ಬಿಂಬಿಸಲಾಗಿದೆ.**
>
> **–ದೇವನೂರ ಮಹಾದೇವ**

## ಅಧ್ಯಾಯ–8

ಸೋಲನ್ನು ಸೋಲಿಸಿ, ಸೋತವರನ್ನು ಸೋಲಿಸಬೇಡಿ

–ಅಂಬೇಡ್ಕರ್.

# ಹಿಂದೂ ಧರ್ಮ ಮತ್ತು ಜಾತಿ: ಕೆಲವು ವಿದ್ವಾಂಸರ ಅನಿಸಿಕೆಗಳು

ಹಿಂದೂ ಧರ್ಮ ಎನ್ನುವುದು ಮೊತ್ತಮೊದಲಿಗೆ ವೇದಧರ್ಮವಾಗಿದ್ದು, ಅನಂತರ ಆರ್ಯಧರ್ಮವಾಗಿ ಪರಿಣಮಿಸಿ, ಆ ಬಳಿಕ ಬ್ರಾಹ್ಮಣ ಮತವಾಗಿ ಕೊನೆಯಲ್ಲಿ ಹಿಂದೂ ಧರ್ಮವೆಂಬ ಹೆಸರನ್ನು ಪಡೆದುಕೊಂಡಿತು. ಹಿಂದೂ ಧರ್ಮದ ಜನಸಂಖ್ಯೆ ಪ್ರಪಂಚದಲ್ಲಿರುವ ಕ್ರೈಸ್ತಧರ್ಮದ ಹನ್ನೆರಡನೇ ಒಂದು ಭಾಗದಷ್ಟಿದ್ದು, ಇಸ್ಲಾಂ ಧರ್ಮದ ನಾಲ್ಕನೇ ಒಂದು ಭಾಗದಷ್ಟಿದೆ. ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಹಿಂದೂ ಧರ್ಮಕ್ಕಿಂತ ಬಹಳ ಇತ್ತೀಚಿನ ಧರ್ಮಗಳಾದರೂ ಆ ಧರ್ಮಗಳನ್ನು ಪಾಲಿಸುವವರ ಸಂಖ್ಯೆ ಹಿಂದೂ ಧರ್ಮ ಪಾಲಿಸುವವರ ಸಂಖ್ಯೆಗಿಂತಲೂ ಎಷ್ಟೋ ಪಟ್ಟು ಹೆಚ್ಚಿದೆ. ಹಿಂದೂ ಧರ್ಮ ಅತ್ಯಂತ ಪ್ರಾಚೀನ ಧರ್ಮವಾದರೂ ಅದರ ವರ್ಚಸ್ಸು ಬೇರೆ ಧರ್ಮಗಳಿಗೆ ಹೋಲಿಸಿದಾಗ ತೀರ ಕಡಿಮೆ. ಹಿಂದೂ ಧರ್ಮದಲ್ಲಿನ ಜಾತಿ ಮತ್ತು ಅಸ್ಪೃಶ್ಯತೆಯಂತಹ ಅನಿಷ್ಟಗಳಿಂದ ಇದೇ ಧರ್ಮದಿಂದ ಸಿಡಿದು ಅನೇಕ ಧರ್ಮಗಳು ಹುಟ್ಟಿಕೊಂಡವು. ಹಲವು ಜನಾಂಗಗಳ ಜನರು ಬೇರೆ ಧರ್ಮಗಳನ್ನು ಅಪ್ಪಿಕೊಂಡರು.

ಇನ್ನು ಜಾತಿಯೆಂಬುದು ಹೇಗೆ ಉಂಟಾಯಿತೆಂದರೆ, ಬಿಳಿಯರು ನಮ್ಮ ದೇಶಕ್ಕೆ ಆಗಮಿಸಿ ದೊರೆಗಳಾದ ಹಾಗೆ, ಮುಸಲ್ಮಾನರು ಆಗಮಿಸಿ ಸಾಹೇಬರಾದ ಹಾಗೆ, ಅದೇ ರೀತಿಯಲ್ಲಿ ನಮ್ಮ ದೇಶಕ್ಕೆ ಆರ್ಯರು ಬಂದು ಬ್ರಾಹ್ಮಣರಾದರು. ಇಲ್ಲಿದ್ದ ಮೂಲ ನಿವಾಸಿಗಳು (ದ್ರಾವಿಡರು) ಕೆಲವರು ವೈದಿಕಶಾಹಿ ಸಮಾಜದಿಂದ ಆಕರ್ಷಿತರಾಗಿ ಬ್ರಾಹ್ಮಣರಾದರು. ಅವರು ವೈದಿಕಶಾಹಿ ಸಮಾಜದ ಕಡೆಗೆ ಹೇಗೆ ಆಕರ್ಷಿತರಾದರು ಎನ್ನುವುದನ್ನು ಮುಂದೆ ವಿವರಿಸಲಾಗಿದೆ.

ಬ್ರಾಹ್ಮಣ(ವೈದಿಕ)ನೆಂದರೆ ವೇದಗಳನ್ನು, ನಾಲ್ಕು ಆಗಮ ಪದ್ಧತಿಗಳನ್ನು ಅನುಸರಿಸುವಾತನು. ವೇದ, ಆಗಮಗಳಿಂದ ದ್ರಾವಿಡರಿಗೆ ಅದರಲ್ಲೂ ಅಸ್ಪೃಶ್ಯರಿಗೆ ಯಾವ ರೀತಿಯಲ್ಲೂ ಅನುಕೂಲವಾಗಲಿಲ್ಲ; ಬದಲಿಗೆ ಹಾನಿಯೇ ಆಗಿದೆ. ದ್ರಾವಿಡರೆಂದರೆ ಚಾತುರ್ವರ್ಣ್ಯದಲ್ಲಿ ನಾಲ್ಕನೆ ಜಾತಿಯವರು. ಇನ್ನು ಅಸ್ಪೃಶ್ಯರೆಂದರೆ ಅವರಿಗಿಂತಲೂ ಕೀಳಾದ ಅಂತ್ಯಜರು. ದ್ರಾವಿಡರಲ್ಲಿ ಅಸ್ಪೃಶ್ಯತೆ ಇತ್ತೇ ಎನ್ನುವ ಪ್ರಶ್ನೆಗೆ

ಉತ್ತರ ಎಲ್ಲೂ ದೊರಕುವುದಿಲ್ಲ. ಆದರೆ ಪಣಸಮಾಜ ಇರುವುದಾಗಿ ಉಲ್ಲೇಖಗಳು ಕಂಡುಬಂದಿವೆ.

ದ್ರಾವಿಡರು ವೇದಾದಿಗಳನ್ನು ಓದಬಾರದು ಮತ್ತು ಮುಟ್ಟಬಾರದು, ಓದುತ್ತಿರುವುದನ್ನು ಕೇಳಿಸಿಕೊಂಡರೂ ಕಾಸಿದ ಸೀಸವನ್ನು ಅವರ ಕಿವಿಯೊಳಕ್ಕೆ ಹೊಯ್ಯಲಾಗುವುದು. ವೇದಾಧ್ಯಯನವನ್ನು ನೋಡಿದ ದ್ರಾವಿಡರ ಕಣ್ಣು ಕುರುಡಾಗುತ್ತದೆ. ಈ ರೀತಿಯ ನಿಬಂಧನೆಗಳನ್ನು ಬ್ರಾಹ್ಮಣರು ತಮ್ಮ ಧರ್ಮಶಾಸ್ತ್ರಗಳಲ್ಲಿ ನಿರೂಪಿಸಿಕೊಂಡಿದ್ದಾರೆ. ಇಂತಹ ನಿರೂಪಣೆಗಳೇ ಹಿಂದೂ ಧರ್ಮವಾಗಿಯೂ, ಹಿಂದೂ ಧರ್ಮದ ಸಿದ್ಧಾಂತವಾಗಿಯೂ ಈ ದಿನ ದೇಶದ ಕೋನ ಕೋನಗಳಲ್ಲೂ ಚಾಲ್ತಿಯಲ್ಲಿದೆ. ಹಿಂದೂ ಧರ್ಮ ಅದರ ಧರ್ಮಶಾಸ್ತ್ರಗಳು, ವೇದ ಪುರಾಣಗಳು, ಚಾತುರ್ವರ್ಣ್ಯ ಪದ್ಧತಿಗಳು, ಜಾತಿಗಳು, ಅಸ್ಪೃಶ್ಯತೆ, ದೇವಸ್ಥಾನ-ತೀರ್ಥಕ್ಷೇತ್ರಗಳು, ಅವುಗಳ ಬಗ್ಗೆ ಹೇಳಲಾಗಿರುವ ಕತೆಗಳು ಎಲ್ಲವೂ ದ್ರಾವಿಡರಿಗೆ ವಿರುದ್ಧವಾದವು. ಹಿಂದೂ ಧರ್ಮವು ನಮ್ಮದೇ ಧರ್ಮವಾಗಿದ್ದ ಪಕ್ಷದಲ್ಲಿ ಅದರಲ್ಲಿ ನಾವು ಹೀನ ಜಾತಿಯವರೆನಿಸಿಕೊಂಡು ಅವರ್ಣಸ್ಥರಾಗಿ, ಶೂದ್ರಾತಿ ಶೂದ್ರರಾಗಿ ಬ್ರಾಹ್ಮಣರ ದಾಸೀ ಪುತ್ರರಾಗಿ, ನಮ್ಮ ಮಹಿಳೆಯರೆಲ್ಲ ಅವರ ದಾಸಿಯರಾಗಿಯೇ ಉಳಿದಿರಬೇಕೆಂದು ನಿಬಂಧನೆಗಳನ್ನು ಹಾಕಲಾಗಿದೆ. ಪ್ರಪಂಚದಲ್ಲಿಯೇ ಉನ್ನತ ಆಧ್ಯಾತ್ಮಿಕತೆ ಹೊಂದಿರುವ ಹಿಂದೂ ಧರ್ಮವೆಂದರೆ ಇದೇ ಏನು?

ಭಾರತದಲ್ಲಿರುವ ಬಹುಪಾಲು ಜನಾಂಗಗಳನ್ನು ಶೂದ್ರರೆಂದೇ ಭಾವಿಸಲಾಗುತ್ತಿದೆ. ಶೂದ್ರರು ಎಂಬ ಪದಕ್ಕೆ ನಾಲ್ಕನೇ ವರ್ಣದವರು, ಬ್ರಾಹ್ಮಣರ ದಾಸೀಪುತ್ರರು ಎನ್ನುವ ವಿವರಗಳು ಪುರಾಣಗಳಲ್ಲಿ ದೊರಕುತ್ತವೆ. ತೊತ್ತಿನ ಮಕ್ಕಳು ಎಂಬಂಥ ಅರ್ಥಗಳನ್ನು ಸೃಷ್ಟಿಸಿ ಬಹುಜನರನ್ನು ಅಪಮಾನಕ್ಕೆ ಗುರಿಯಾಗಿಸಲಾಗಿದೆ. ಈ ವಿಷಯಗಳು ಹಿಂದೂ ಮತ ಧರ್ಮಗಳನ್ನೇ ಆಧರಿಸಿವೆ. ಭಾರತದಲ್ಲಿರುವ ಕೋಟ್ಯಂತರ ಜನರಲ್ಲಿ ಎಲ್ಲರೂ ಈಗ ಶೂದ್ರರಾಗಿ ಉಳಿದಿಲ್ಲ. ಕ್ರೈಸ್ತರು, ಮಹಮ್ಮದೀಯರು, ಬೌದ್ಧರು, ಜೈನರು, ಪಾರ್ಸಿಗಳು ಹೀಗೆ ಅನೇಕ ಸಮಾಜಗಳವರು ಇದ್ದಾರೆ. ಹಿಂದೂಗಳಲ್ಲಿ ಬ್ರಾಹ್ಮಣರನ್ನು ಬಿಟ್ಟು ಮಿಕ್ಕ ಬಹುತೇಕ ಜನರನ್ನು ಶೂದ್ರರೆಂದೇ ಭಾವಿಸಲಾಗಿದೆ. ಈ ರೀತಿಯಲ್ಲಿ ಬ್ರಾಹ್ಮಣರನ್ನುಳಿದ ಜನರು ಶೂದ್ರರಾಗಿಯೇ ಉಳಿದಿರುವುದಕ್ಕೆ ಒಂದು ಮುಖ್ಯ ಕಾರಣವಿದೆ. ಅದೇನೆಂದರೆ ಶೂದ್ರರಾದವರು ತಮ್ಮನ್ನು ತಾವೇ ಹಿಂದೂಗಳು ಎಂದು ಭಾವಿಸಿಕೊಂಡಿರುವುದು. ಈ ಆಧುನಿಕ ಯುಗದಲ್ಲೂ ನಾವಿನ್ನೂ 'ಹಿಂದೂ'ಗಳಾಗಿಯೇ ಉಳಿದುಕೊಂಡಿರುವುದರಿಂದ ನಮ್ಮ ಜೊತೆಗೆ ಶೂದ್ರತನವೂ ಕೂಡ ಸುಭದ್ರವಾಗಿ ಉಳಿದುಕೊಂಡಿದೆ ಎನ್ನುತ್ತಾರೆ ಪೆರಿಯಾರ್ ಅವರು. ಆದರೆ ಮತಾಂತರಗೊಂಡ ದಲಿತರು ಬೇರೆ ಬೇರೆ ಧರ್ಮಗಳಲ್ಲೂ ಇದೇ ರೀತಿಯ ಮೇಲು-ಕೀಳೆಂಬ ತಾರತಮ್ಯಗಳನ್ನು ಅನುಭವಿಸುತ್ತಿದ್ದಾರೆ ಎನ್ನುವುದು ಈಗ ಗೋಪ್ಯವಾಗೇನೂ ಉಳಿದಿಲ್ಲ.

ನಮ್ಮ ಜನತೆಯು ಎಚ್ಚೆತ್ತುಕೊಂಡು ನಾವಿನ್ನು ಹಿಂದೂಗಳಲ್ಲ ಎಂದು ಒಕ್ಕೊರಲಿನಿಂದ ಘೋಷಿಸಿ 'ಹಿಂದೂಗಳು' ಎಂಬ ಪಟ್ಟಿಯಿಂದ ಬಿಡಿಸಿಕೊಂಡರೆ ಮಾತ್ರವೇ ಕ್ರೈಸ್ತರು, ಮಹಮ್ಮದೀಯರು, ಜೈನರು ಮತ್ತು ಬೌದ್ಧರು ಹೇಗೆ ಶೂದ್ರತನದಿಂದ ಬಿಡುಗಡೆ ಪಡೆದರೋ ಅವರಂತೆ ನಾವೂ ಶೂದ್ರತನದಿಂದ ಬಿಡುಗಡೆ

ಪಡೆಯುತ್ತೇವೆ. 'ನಿಮ್ಮ ಕಷ್ಟಗಳಿಗೆಲ್ಲ ಮೂಲಕಾರಣ ಶೂದ್ರರು ಎಂಬುದನ್ನು ನಾವೇ ಒಪ್ಪಿಕೊಂಡಿರುವುದು. ಇದಕ್ಕಾಗಿ ಯಾರೂ ಕೂಡ ನಾಚಿಕೆಪಟ್ಟುಕೊಂಡಿಲ್ಲ. ಮನುಷ್ಯರು ಶೂದ್ರರಾಗಿ ಬದುಕುವುದಕ್ಕಿಂತಲೂ ಅಂತಹ ಅನಿಷ್ಟ ಧರ್ಮ ಸಿದ್ಧಾಂತವನ್ನು ನಿರ್ನಾಮಗೊಳಿಸುವುದಕ್ಕಾಗಿ ಸಾಯುವುದೇ ಮೇಲು' ಎಂದಿದ್ದಾರೆ ಪೆರಿಯಾರ್. ಅದನ್ನೇ ಅಂಬೇಡ್ಕರ್ ಬೇರೆ ರೀತಿಯಲ್ಲಿ 'ಯಾವ ಧರ್ಮದಲ್ಲಿ ಮನುಷ್ಯನಿಗೆ ಗೌರವ ದೊರಕುವುದಿಲ್ಲವೋ ಅಂತಹ ಧರ್ಮ ನಾಶವಾಗಬೇಕು' ಎಂದು ಘೋಷಿಸಿದ್ದಾರೆ.

ಅಂಬೇಡ್ಕರ್ ಅವರನ್ನು ಪೆರಿಯಾರ್ ಭೇಟಿಯಾದಾಗ ಅಂಬೇಡ್ಕರ್ ಒಂದು ಪತ್ರ ಕೊಟ್ಟು 'ಇದರಲ್ಲಿ ಸಹಿ ಮಾಡಿ ನಾವಿಬ್ಬರೂ ಬೌದ್ಧ ಧರ್ಮಕ್ಕೆ ಸೇರಿಕೊಳ್ಳೋಣ' ಎಂದರಂತೆ. ಅದಕ್ಕೆ ಪೆರಿಯಾರ್ 'ನೀವು ಬೇಕಾದರೆ ಸೇರಿಕೊಳ್ಳಿ ನಾನು ಇದೇ ಧರ್ಮದಲ್ಲಿ ಇದ್ದರೆ ಮಾತ್ರ ಹಿಂದೂ ಧರ್ಮದ ಬಂಡವಾಳವನ್ನು ಹೊರಕ್ಕೆ ಬಿಚ್ಚಿ ಪ್ರಸಾರ ಮಾಡುವುದಕ್ಕಾಗುತ್ತದೆ. ಅಲ್ಲದೆ ಈಗ ಮಾಡುತ್ತಿರುವ ಕಾರ್ಯಾಚರಣೆಗಳನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ಅನುಕೂಲವಾಗುತ್ತದೆ' ಎಂದರಂತೆ. ಮುಂದುವರಿಯುತ್ತ ಪೆರಿಯಾರ್ ನಾನು ಬೌಧ್ಧ ಧರ್ಮಕ್ಕೆ ಸೇರಿಕೊಂಡ ಪಕ್ಷದಲ್ಲಿ ದೇವರುಗಳು, ದೇವರ ಪ್ರತಿಮೆಗಳನ್ನು ಒಡೆದು ಹಾಕುವ ಮತ್ತು ವೈಚಾರಿಕತೆ ಮೂಡಿಸುವಂತಹ ಚಳುವಳಿಯನ್ನು ನಡೆಸಲಾಗುವುದಿಲ್ಲ ಎಂದರಂತೆ. ಈ ಇಬ್ಬರು ಮಹಾನ್ ವ್ಯಕ್ತಿಗಳು ತಮ್ಮ ವಿಚಾರಗಳಲ್ಲಿ ಯಾರು ಸರಿಯಾದ ನಿಲುವನ್ನು ತೆಗೆದುಕೊಂಡರು, ಯಾರು ತಪ್ಪು ನಿಲುವನ್ನು ತೆಗೆದುಕೊಂಡರು ಎನ್ನುವುದನ್ನು ಹೇಳಲು ನಾನು ಅರ್ಹನಲ್ಲವಾದರೂ ಪೆರಿಯಾರ್ ಅಸ್ಪೃಶ್ಯ ಜನಾಂಗದಲ್ಲಿ ಜನಿಸಿದವರಲ್ಲ ಎನ್ನುವುದು ಸ್ವಲ್ಪಮಟ್ಟಿಗೆ ಕಾರಣವಿರಬೇಕು.

ಧರ್ಮವೆಂದರೆ ಕುರುಡು ನಂಬಿಕೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಚರ್ಚೆಗೆ ನಿಲುಕದ ಕೇವಲ ನಂಬಿಕೆಗಳಿಗೆ ಮಾತ್ರ ಬುನಾದಿಯಾಗಿರುವಂಥದ್ದು. ಈ ನಿಟ್ಟಿನಲ್ಲಿ ಎಲ್ಲಾ ಧರ್ಮಗಳೂ ಒಂದೇ ರೀತಿಯವು. ಕೇವಲ ನಾಲ್ಕೈದು ಸಾವಿರ ವರ್ಷಗಳ ಹಿಂದೆ ಮನುಷ್ಯನು ಮನುಷ್ಯನಾಗಿರದೆ ಗಾಂಪತನದಲ್ಲಿ ಬದುಕಿ ಉಳಿದುಕೊಂಡಿದ್ದ ಕಾಲವದು. ಅನಂತರ ಶಿವ, ಇಂದ್ರ, ಬ್ರಹ್ಮ, ವಿಷ್ಣು ಹುಟ್ಟಿಬಂದರು. ಧರ್ಮಗಳನ್ನು ಪ್ರಸಾರ ಮಾಡಲೆಂದೇ ಹುಟ್ಟಿಕೊಂಡ ಧರ್ಮಾಧಿಕಾರಿಗಳು, ಧರ್ಮಪ್ರವರ್ತಕರು ಹಲವು ಕಟ್ಟುಕಥೆಗಳನ್ನು ಸೃಷ್ಟಿಸಿ ಕುರುಡು ನಂಬಿಕೆಗಳನ್ನು ಜನರಲ್ಲಿ ತುಂಬಿ ಅವರು ಸ್ವಂತವಾಗಿ ಯೋಚಿಸದಂತೆ, ಪ್ರಶ್ನಿಸದಂತೆ ನೋಡಿಕೊಂಡರು. ಇದರಿಂದ ಒಂದು ಗುಂಪು ಎಲ್ಲಾ ಧರ್ಮಗಳಲ್ಲೂ ಕುಳಿತು ತಿಂದುಂಡುವಂತಾಯಿತು. ಅವರು ಪೂಜಾರಿಗಳು/ಧರ್ಮಾಧಿಕಾರಿಗಳು, ಪಾದ್ರಿಗಳು, ಮುಲ್ಲಾಗಳು ಹೀಗೆ. ದೇವರು, ಧರ್ಮ ಜಾತಿಪದ್ಧತಿ ಎಂಬಂತಹವು ಮನುಷ್ಯರಿಗೆ ಪರರಿಂದ ಉಪದೇಶ ಮಾಡಲ್ಪಟ್ಟಂತಹ ವಿಷಯಗಳೇ ಹೊರತು ಸ್ವಾಭಾವಿಕವಾಗಿ ಅಥವಾ ತಂತಾನೇ ತಿಳಿದುಬಂದಂತಹ ವಿಚಾರಗಳಲ್ಲ ಎನ್ನುತ್ತಾರೆ ಪೆರಿಯಾರ್.

'ಭಾರತ ಮೂಢನಂಬಿಕೆಗಳೇ ತುಂಬಿರುವ ಒಂದು ಕತ್ತಲ ಖಂಡ' ಎನ್ನುತ್ತಾರೆ ವಿ. ಎಸ್. ನೈಪಾಲ್. ಕ್ಯಾಥರಿನ್ ಮೇಯೊ ಎಂಬಾಕೆ ಕ್ರಿ. ಶ. 1927ರಲ್ಲಿ ಬರೆದ 'ಮದರ್ ಇಂಡಿಯಾ' ಪುಸ್ತಕದಲ್ಲಿ 'ಭಾರತದ ತೀರ್ಥಯಾತ್ರಾ ಕ್ಷೇತ್ರಗಳಷ್ಟು ಗಲೀಜು

ಸ್ಥಳಗಳು ಪ್ರಪಂಚದಲ್ಲಿ ಬೇರೆ ಎಲ್ಲೂ ನೋಡಲು ದೊರಕುವುದಿಲ್ಲ. ಆದರೆ ಭಕ್ತರಿಗೆ ಗಲೀಜು ಕಾಣಿಸುವುದಿಲ್ಲ. ದೇವರು ಮಾತ್ರ ಕಾಣಿಸುತ್ತಾರೆ' ಎನ್ನುತ್ತಾರೆ. ಮನುಷ್ಯರಿಗಿಂತ ಕೀಳು ಎಂಬ ಅಧ್ಯಾಯದಲ್ಲಿ ಅಸ್ಪೃಶ್ಯರ ಸ್ಥಿತಿಗತಿಗಳನ್ನು ವಿವರಿಸುತ್ತ ಅವರ ಉದ್ಧಾರ ಬಿಳಿಯರ ರಾಜ್ಯಭಾರದಿಂದ ಮಾತ್ರ ಸಾಧ್ಯ. ಕಾಶಿಯನ್ನು ವೀಕ್ಷಿಸಿದ ಆಕೆ ಕಾಶಿಯನ್ನು ನರಕ ಎಂಬಂತೆ ವರ್ಣಿಸಿ ಹಿಂದೂಗಳ ಪವಿತ್ರ ಸ್ಥಳ ಕಾಶಿಯ ಗಂಗಾ ದಡಗಳು ಕೊಳಕಿನ ಕೂಪಗಳು ಎಂದು, ಅಲ್ಲಿಯ ದೇವಾಲಯಗಳು ಇನ್ನೂ ಕೊಳಕಿನ ಕೂಪಗಳು ಎಂದಿದ್ದಾರೆ. ತೊಂಬತ್ತು ವರ್ಷಗಳ ಹಿಂದಿನ ಆಕೆಯ ವರ್ಣನೆ ಇಂದಿಗೂ ಓದುಗರಿಗೆ ವಾಕರಿಕೆ ತರಿಸುತ್ತದೆ. 71 ವರ್ಷಗಳ ಹಿಂದೆ ಸ್ವಾತಂತ್ರ್ಯ ಪಡೆದ ನಾವು ಈ ವಿಷಯದಲ್ಲಿ ಏನಾದರೂ ಸುಧಾರಣೆ ಕಂಡಿದ್ದೇವೆಯೇ ಎಂದರೆ ಇಲ್ಲ ಎಂದೇ ಹೇಳಬೇಕು. ಈಗಲೂ ನಮ್ಮ ತೀರ್ಥಸ್ಥಳಗಳ ಗತಿ ಹಾಗೆಯೇ ಇದೆ.

ಈ ಅಸಹಕಾರ ತತ್ವ, ಈ ಸತ್ಯಾಗ್ರಹ ವಿಧಾನ, ಆಧ್ಯಾತ್ಮಿಕ ಅನುಭಾವೀತತ್ವ ಏನು? ಜನ ತಮ್ಮ ಸ್ವಾರ್ಥವನ್ನು ಬಲಿಕೊಟ್ಟು ಸಾಮೂಹಿಕ ಹಿತಕ್ಕಾಗಿ ನಿಜವಾಗಿಯೂ ನಿಲ್ಲಬಲ್ಲರೇನು? ಇದು ನಿಜವಾಗಿಯೂ ಹಿಂದೂ ಧರ್ಮದ ಆತ್ಮವನ್ನು ಅಲುಗಾಡಿಸುವ ಪ್ರಶ್ನೆ. ನಾವು ಎಷ್ಟು ಮೂಢರೆಂದರೆ ಬೇವಿನ ಮರ ಹಾಲು ಕೊಡುತ್ತದೆಂದು, ಗಣಪತಿ ವಿಗ್ರಹ ಹಾಲು ಕುಡಿಯುತ್ತದೆ ಎಂದು, ಹೂವು, ಊದುಕಡ್ಡಿ, ತೆಂಗಿನಕಾಯಿಗಳನ್ನು ಹಿಡಿದುಕೊಂಡು ಕಿಲೋಮೀಟರುಗಟ್ಟಲೆ ಸಾಲುಗಟ್ಟಿ ನಿಲ್ಲುತ್ತೇವೆ. ಇದು ನಡೆಯುವುದು ಹಳ್ಳಿಗಳಲ್ಲಲ್ಲ, ವಿದ್ಯಾವಂತರೇ ತುಂಬಿರುವ ಮಹಾನಗರಗಳಲ್ಲಿ. ಆಧ್ಯಾತ್ಮಿಕತೆ ತುಂಬಿ ತುಳುಕಾಡುತ್ತಿರುವ ಹಿಂದೂ ಕಾಲೋನಿಗಳಲ್ಲಿ. ನಾವು, ನಮ್ಮ ನಿಜವಾದ ಆಧ್ಯಾತ್ಮಿಕತೆಯನ್ನು ಮರೆತು ಇಂತಹ ಕ್ಷುಲ್ಲಕ ಕೆಲಸಗಳನ್ನು ಮಾಡುತ್ತ ಅಪಮಾನಕ್ಕೆ ಒಳಗಾಗಿದ್ದೇವೆ.

ಬ್ರಾಹ್ಮಣರ ನಿಯಮಗಳು ಒಂದು ಕಾಲದಲ್ಲಿ ಹಿಂದೂ ಸಮಾಜವನ್ನು ಹೆಚ್ಚು ಹಿಡಿತದಲ್ಲಿ ಇಟ್ಟುಕೊಂಡಿದ್ದವು. ಸಮಾಜದ ಅಭಿಪ್ರಾಯದಲ್ಲಿ ಬ್ರಾಹ್ಮಣ ಪೂಜನೀಯ ವ್ಯಕ್ತಿ, ಪ್ರಾಚೀನ ಕಾಲದಲ್ಲಿ ಈ ಜಾತಿಯ ವ್ಯಕ್ತಿ ಎಂತಹ ಘೋರ ಅಪರಾಧ ಮಾಡಿದರೂ ಆತನಿಗೆ ಮರಣದಂಡನೆಯ ಶಿಕ್ಷೆ ಇರಲಿಲ್ಲ. ಆತನಿಗೆ ಸಮಾಜದಲ್ಲಿ ಅನೇಕ ಸೌಲಭ್ಯಗಳ ಜೊತೆಗೆ ವಿಶೇಷ ಅಧಿಕಾರವೂ ಇತ್ತು. ಹಿಂದಿನ ಕಾಲದಲ್ಲಿ ಕೆಳವರ್ಗದ ಜನಸಾಮಾನ್ಯರು ಬ್ರಾಹ್ಮಣರ ಪಾದ ತೊಳೆದು ನೀರು ಕುಡಿಯದೆ ಗಂಜಿ ಕುಡಿಯುತ್ತಿರಲಿಲ್ಲ. ಕೆಳಜಾತಿಗೆ ಸೇರಿದ ಮಕ್ಕಳು ನಸುಕಿನಲ್ಲಿಯೇ ನೀರು ತುಂಬಿದ ಬಟ್ಟಲುಗಳನ್ನು ಹಿಡಿದುಕೊಂಡು ಹಿಂಡುಹಿಂಡಾಗಿ ಕೊಲಕತ್ತಾದ ರಸ್ತೆಗಳಲ್ಲಿ ನಿಂತು ಹಾದುಹೋಗುವ ಬ್ರಾಹ್ಮಣರ ಕಾಲು ತೊಳೆದು, ಅದೇ ನೀರನ್ನು ತಿರುಗಿ ಬಟ್ಟಲುಗಳಲ್ಲಿ ಸಂಗ್ರಹಿಸಿಕೊಂಡು ತಮ್ಮ ತಂದೆ ತಾಯಿಯರಿಗೆ ತಲುಪಿಸುತ್ತಿದ್ದುದಾಗಿ ಮತ್ತು ಆ ನೀರನ್ನು ಕುಡಿದ ನಂತರವೇ ಅವರು ಗಂಜಿ ಕುಡಿಯುತ್ತಿದ್ದರು ಎಂಬುದಾಗಿ ಸರ್. ಪಿ. ಸಿ. ರಾಯ್ ಒಂದು ಕಡೆ ವಿವರಿಸಿದ್ದಾರೆ.

ಅಲಹಾಬಾದ್ ಹೈಕೋರ್ಟ್‌ನಲ್ಲಿದ್ದ ಅಸ್ಪೃಶ್ಯ ನ್ಯಾಯಾಧೀಶರೊಬ್ಬರು ನಿವೃತ್ತರಾಗಿ ಆ ಸ್ಥಳಕ್ಕೆ ಬ್ರಾಹ್ಮಣ ನ್ಯಾಯಾಧೀಶರು ಬರಬೇಕಾಯಿತು. ಅವರು ಇಡೀ ಕೊಠಡಿಯನ್ನು ಗಂಗಾಜಲದಿಂದ ಶುದ್ಧೀಕರಿಸಿ ಸ್ಥಾನಗ್ರಹಣ ಮಾಡಿದರು. ಈ ವಿಷಯ ಲೋಕಸಭೆಯಲ್ಲಿ ಗದ್ದಲ ಹುಟ್ಟಿಸಿ ಅನಂತರ ಎಲ್ಲ ವಿಷಯಗಳಂತೆ ಅದೂ ಉಪಶಮನಗೊಂಡಿತು. ತೀರಾ

ಇತ್ತೀಚೆಗೆ, 2015ರಲ್ಲಿ ಮಹಾರಾಷ್ಟ್ರದ ಅಹ್ಮದ್‌ನಗರ ಜಿಲ್ಲೆಯಲ್ಲಿರುವ ಶನಿ ಸಿಂಗಾನೆಲ್ಲೂರು ಗುಡಿಗೆ ಮಹಿಳೆ ಪ್ರವೇಶಿಸಿ ಕಲ್ಲು ದೇವರಿಗೆ ಪೂಜೆ ಮಾಡಿದಳೆಂದು ಅಲ್ಲಿನ ಅರ್ಚಕರು ಗಂಗಾಜಲ ಹಾಕಿ ಶುದ್ಧೀಕರಿಸಿದರು. ಇದಕ್ಕೆ ಮಹಾರಾಷ್ಟ್ರದ ಮಹಿಳಾ ಮಂತ್ರಿಯೊಬ್ಬರು ಬೆಂಬಲಿಸಿದರು ಕೂಡ. ಆದರೆ ಯಾವುದೇ ಸಾಮಾಜಿಕ ಸಂಸ್ಥೆಗಳು, ಪ್ರಗತಿಪರ ಮಹಿಳಾ ಸಂಘಟನೆಗಳು ಇದರ ವಿರುದ್ಧ ಪ್ರತಿಭಟಿಸಲಿಲ್ಲ.

ಹೆಣ್ಣಿನ ಬಗ್ಗೆ ಹಿಂದೂ ಧರ್ಮವೇ ಅಲ್ಲ, ಎಲ್ಲಾ ಧರ್ಮಗಳೂ ಒಂದಲ್ಲಾ ಒಂದು ರೀತಿಯಲ್ಲಿ ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ ಎನ್ನುವ ವಿಧಾನವನ್ನೇ ಅನುಸರಿಸಿವೆ. ಮುಸಲ್ಮಾನರು ಪ್ರಾರ್ಥನೆಗೂ ಸಹ ಹೆಣ್ಣನ್ನು ಮಸೀದಿಗೆ ಸೇರಿಸುವುದಿಲ್ಲ. 'ಲಜ್ಜಾ' ಕಾದಂಬರಿ ಬರೆದ ಬಾಂಗ್ಲಾದೇಶದ ಲೇಖಕಿ ತಸ್ಲೀಮ, ಇಸ್ಲಾಂ ಧರ್ಮಗುರುಗಳ ಆಕ್ರೋಶಕ್ಕೀಡಾಗಿ ಭಾರತಕ್ಕೆ ವಲಸೆ ಬರಬೇಕಾಯಿತು. ಭಗವಾನ್ ಬುದ್ಧನನ್ನು ಅವನ ಕುಟುಂಬದ ಮಹಿಳೆಯರು ನಾವೂ ಬೌದ್ಧ ಧರ್ಮವನ್ನು ಸೇರಿಕೊಳ್ಳುತ್ತೇವೆ ಎಂದು ಕೇಳಿದಾಗ ಬುದ್ಧನು ಮೊದಲಿಗೆ ಉತ್ತರ ನೀಡಲಿಲ್ಲ. ಮೂರನೇ ಸಲ ಕೇಳಿದಾಗ ಬುದ್ಧನು ಆನಂದನಿಗೆ ಈ ರೀತಿ ಹೇಳುತ್ತಾನೆ: 'ಬುದ್ಧ ಧರ್ಮ ಐದು ಸಾವಿರ ವರ್ಷಗಳ ಕಾಲ ಉಳಿದಿರುತ್ತದೆ ಎಂದುಕೊಂಡಿದ್ದೆ. ಆದರೆ ಅದಕ್ಕೆ ಈಗ ಎರಡು ಸಾವಿರದ ಐನೂರು ವರ್ಷ ವಯಸ್ಸು ಕಡಿಮೆಯಾಯಿತು' ಎನ್ನುತ್ತಾನೆ. ಜೈನರ 24 ತೀರ್ಥಂಕರರಲ್ಲಿ ಒಬ್ಬಳೂ ಹೆಣ್ಣಿಲ್ಲ.

## ದ್ರಾವಿಡ ದೇವತೆಗಳು ಮತ್ತು ವೈದಿಕ ದೇವರುಗಳು

ವೈದಿಕಶಾಹಿಗಳು ದ್ರಾವಿಡ ಸಮಾಜದ ಮೇಲೆ ವರ್ಣ ವ್ಯವಸ್ಥೆಯನ್ನು ಹೇರುವಾಗ ಮಾತೃ ದೇವತೆಗಳೇ ಅವರ ಮನದಲ್ಲಿ ಬೇರೂರಿದ್ದವು. ಬೌದ್ಧ ಧರ್ಮವನ್ನು ಮೂಲೋತ್ಪಾಟನೆ ಮಾಡಿ ವೈದಿಕ ಧರ್ಮವನ್ನು ಪುನರುತ್ಥಾನಗೊಳಿಸಲು ಶ್ರಮಿಸಿದ ಶಂಕರಾಚಾರ್ಯ ಸ್ವತಃ ದೇವೀ ಮಹಾತ್ಮೆ ಸಾರುವ 'ಸೌಂದರ್ಯ ಲಹರಿ' ಬರೆದು ಶೃಂಗೇರಿಯಲ್ಲಿ ಶಾರದಾ ಪೀಠವನ್ನು ಸ್ಥಾಪಿಸಿದ್ದು ಇದೇ ಹಿನ್ನೆಲೆಯಲ್ಲೇ. ಮನುಸ್ಮೃತಿಯ ಪ್ರಕಾರ ಬ್ರಾಹ್ಮಣರ ಸ್ತ್ರೀಯರು ಮತ್ತು ಶೂದ್ರರು ಸಮಾನರು.

ಪ್ರಸ್ತುತ ಮಾತೃ ದೇವತೆಗಳ ಜೊತೆಗೆ ಸಂಬಂಧವಿರುವ ಎಲ್ಲಾ ಪುರಾಣ ಕಥೆಗಳು ಆರ್ಯರ ಪಿತೃಪ್ರಧಾನ ಮತ್ತು ವೈದಿಕಶಾಹಿ ಪ್ರಭಾವಗಳಿಂದ ಕಲುಷಿತಗೊಂಡಿವೆ. ಎಷ್ಟೋ ಮಾತೃ ದೇವತೆಗಳನ್ನು ಪುರುಷ ದೇವತೆಗಳಿಗೆ ಅಧೀನಗೊಳಿಸಿ, ಅಶಕ್ತಗೊಳಿಸಿ, ಕ್ಷುದ್ರಗೊಳಿಸಲಾಗಿದೆ. ಮಹಾಮಾರಿಗಳನ್ನೆಲ್ಲ ವೈದಿಕೀಕರಣಗೊಳಿಸಿ ಬ್ರಾಹ್ಮಣ ಸ್ತ್ರೀಯರಾಗಿದ್ದರೆಂದು ಚಿತ್ರಿಸಲ್ಪಟ್ಟಿದೆ. ತಿರುಪತಿ ತಿಮ್ಮಪ್ಪ, ಗುಡ್ಡಗಾಡುಗಳ ಅಲೆಮಾರಿ ಬೇಟೆಗಾರರ ದ್ರಾವಿಡ ದೇವರಾಗಿದ್ದು ಆ ಪ್ರದೇಶದ ಜನರ ಮೇಲೆ ಅಪಾರ ಪ್ರಭಾವ ಹೊಂದಿದ್ದನ್ನು ಗಮನಿಸಿದ ವೈದಿಕರು ತಿಮ್ಮಪ್ಪನನ್ನು ತಮ್ಮ ವಶಕ್ಕೆ ತೆಗೆದುಕೊಂಡು ಬಿಟ್ಟರು. ಇಂದಿಗೂ ತಿಮ್ಮಪ್ಪ ಮತ್ತು ಕುರುಬರಿಗೆ ವಿಚಿತ್ರ ಪೌರಾಣಿಕ ಸಂಬಂಧಗಳಿರುವುದನ್ನು ನೋಡಬಹುದಾಗಿದೆ. ಗ್ರಾಮದೇವತೆಗಳ ಕಲ್ಪನೆಗೂ ಮುಂಚಿನಿಂದ ಶಕ್ತಿಯ ಆರಾಧನೆ ಈ ದೇಶದಲ್ಲಿ ಮುಂದುವರಿದುಕೊಂಡು ಬಂದಿದೆ. ಆರ್ಯರು ಇಲ್ಲಿಗೆ ಬರುವುದಕ್ಕಿಂತ ಸಾವಿರಾರು ವರ್ಷಗಳ ಮುಂಚೆಯೇ ಅಸ್ತಿತ್ವದಲ್ಲಿದ್ದ ದೇವತೆಗಳಿಗೆ ಬ್ರಾಹ್ಮಣ ವೇಷ

ತೊಡಿಸಲಾಯಿತು. ವೈದಿಕರು ಸೃಷ್ಟಿಸಿದ ಪುರಾಣಗಳು ಈ ನೆಲದ ಮೂಲ ಜನಪದರ ಐತಿಹ್ಯಗಳ ಮೇಲೆ ದಾಳಿ ನಡೆಸಿರುವುದಕ್ಕೆ ಮಾರಮ್ಮನ ಪುರಾಣ ಒಂದು ಒಳ್ಳೆಯ ಉದಾಹರಣೆಯಾಗಿದೆ. ಮಾತೃದೇವತಾಕಲ್ಪನೆಯ ಮೂಲದಲ್ಲಿಯೇ ಗ್ರಾಮ ದೇವತೆಗಳ ಮೂಲ ಅಡಗಿದೆ.

ಕೃಷಿಯನ್ನು ಶೋಧಿಸಿದ ಮಹಿಳೆಯೇ ಅದಕ್ಕೆ ಬೇಕಾಗಿದ್ದ ಕೊಳ್ಳಗಳನ್ನು ಶೋಧಿಸಿದಳು. ಅದಕ್ಕಾಗಿಯೇ ಎಲ್ಲಮ್ಮಳನ್ನು 'ಏಳುಕೊಳ್ಳದವ್ವ' ಎನ್ನುವುದು. ಹೊಳೆ, ಹಳ್ಳ, ಕೆರೆ, ಮಡುವುಗಳಿರುವಲ್ಲಿ ಮಾತೃ ದೇವತೆಗಳ ಗುಡಿಗಳಿರುವುದು ಕಾಕತಾಳೀಯವೇನೂ ಅಲ್ಲ. ಕೃಷಿ ದೇವತೆ, ಭೂದೇವತೆಯಾಗಿದ್ದ ಎಲ್ಲಮ್ಮಳ ಜನಪದ ಪುರಾಣದಲ್ಲಿ ಕಾಮಧೇನು ಹೊಂದಿದ್ದ ಪಶುಸಂಗೋಪನ ಸಂಬಂಧ, ಜಮದಗ್ನಿ ಮುನಿಯ ಆಜ್ಞೆಯಂತೆ ತಾಯಿ ಎಲ್ಲವ್ವಳ ರುಂಡ ಕತ್ತರಿಸಿದ ಪರಶುರಾಮನ ಕಥೆ ನಮ್ಮನ್ನು ಯೋಚನೆಗೆ ಒಳಗಾಗಿಸುತ್ತದೆ. ಅದೇ ಪಶುಸಂಗೋಪನವು ಮಾತೃ-ಪ್ರಧಾನ ಕೃಷಿ ವ್ಯವಸ್ಥೆಯ ಮೇಲೆ ದಾಳಿ ನಡೆಸಿದ್ದು, ಕೊಳ್ಳ ಹೊಂಡ ಕೆರೆಗಳನ್ನು ನಿರ್ಮಿಸಿದ್ದ ಮೂಲ ಜನರನ್ನು ಅವುಗಳಿಂದ ದೂರ ಮಾಡಿ ವರ್ಣಾಶ್ರಮದ ಕಟ್ಟಳೆಗಳಿಂದ ಸಮಾಜವನ್ನು ವಿಭಜಿಸಿ ಜಾತಿ, ಅಸ್ಪೃಶ್ಯತೆಯನ್ನು ಸೃಷ್ಟಿಸಿ ಮೂಲ ಕೃಷಿಕರ ಭೂಮಿಯನ್ನು ಕಬಳಿಸಿಕೊಂಡು ಅವರನ್ನು ದಲಿತರಾಗಿಸಿದರು. ಹೀಗೆ ಈ ನೆಲದಲ್ಲಿ ಈಗ ದಲಿತರೆಂದು ಕರೆಯಲ್ಪಡುವವರನ್ನು ಮಾನವ ಮೂಲಭೂತ ಸೌಲಭ್ಯಗಳಿಂದ ವಂಚಿಸಿದ್ದು ವೈದಕಶಾಹಿ ಸಮಾಜವೇ.

## ಹಿಂದೂ ದೇವರುಗಳ ಲೋಕಕಲ್ಯಾಣ ಕಥೆಗಳು

ಮೂಲವಾಗಿ ಇಂದಿನ ಹಿಂದೂ ದೇವರುಗಳೆಲ್ಲ ಹಿಂದಿನ ಕಾಲದಲ್ಲಿ ಒಂದಲ್ಲ ಒಂದು ಪ್ರದೇಶದ ಖ್ಯಾತ ಯೋಧ ಅಥವಾ ಹಿಂದೂಗಳ ನಾಯಕರುಗಳಾಗಿದ್ದವರು. ಅನಂತರ ಅವರೇ ಮುಂದೆ ದೇವರುಗಳ ಸ್ವರೂಪ ಪಡೆದುಕೊಂಡರು. ಕಳೆದ ಐದಾರು ಶತಮಾನಗಳಿಂದಲೇ ಹಲವು ಮಾನವರು ದೇವತಾ ರೂಪಗಳನ್ನು ಪಡೆದುಕೊಂಡ ಉದಾಹರಣೆಗಳು ನಮ್ಮ ಕಣ್ಣುಗಳ ಮುಂದೆಯೇ ಇವೆ.

ಹಿಂದೂಗಳಿಗೆ ಇರುವೆಗಳಿಂದ ಆನೆಗಳವರೆಗೆ ಎಲ್ಲವೂ ದೇವರ ರೂಪಗಳೇ. ಕಾಗೆ, ಗೂಬೆಗಳು ಕೂಡ. ಆದರೆ ಪ್ರತಿಯೊಂದು ಪ್ರಾಣಿಯೂ ದೇವರ ಸ್ವರೂಪ ಎನ್ನುವ ಮಾತಿದ್ದು, ಅದರ ಅರ್ಥವೇ ಬೇರೆಯಾಗಿದ್ದು, ಅದನ್ನು ವಿಶ್ಲೇಷಿಸಬೇಕಾದರೆ ಇನ್ನೊಂದು ಪುಸ್ತಕವನ್ನೇ ಬರೆಯಬೇಕಾಗುತ್ತದೆ. ಅದು ಪ್ರಕೃತಿಯ ಆರಾಧನೆ. ಮನುಷ್ಯ ಪ್ರಕೃತಿಯ ಒಂದು ಅಂಗ ಮಾತ್ರ. ಆದರೆ ಈಗ ಮನುಷ್ಯ ಪ್ರಕೃತಿಯ ಎಲ್ಲಾ ಅಂಗಗಳನ್ನು ನಾಶ ಮಾಡುತ್ತ ತಾನೇ ಸರ್ವೋಚ್ಚ ಎಂದುಕೊಂಡಿದ್ದಾನೆ. ಅದರ ಫಲವೇ ಈಗ ಅನುಭವಿಸುತ್ತಿರುವ ನೆರೆ - ಬರ, ಸುನಾಮಿ, ಚಂಡಮಾರುತ ಮತ್ತು ಪರಿಸರ ಮಾಲಿನ್ಯ. ಮನುಷ್ಯ ನಿಸರ್ಗದ ವಿರುದ್ಧ ಏನೇ ಮಾಡಿದರು, ನಿಸರ್ಗ ಒಂದು ದಿನ ಮನುಷ್ಯನ ವಿರುದ್ಧ ತಿರುಗಿ ಬೀಳುತ್ತದೆ. ಇದು ಬೇರೆಯೆ ವಿಷಯವಾಗಿದ್ದು ಈಗ ಅಸಲಿ ವಿಷಯಕ್ಕೆ ಬರೋಣ. ಮುಸ್ಲಿಮರಿಗೆ ಅಲ್ಲಾ ಒಬ್ಬನೇ ದೇವರಾದರೆ, ಕ್ರೈಸ್ತರಿಗೆ ಜೀಸಸ್ ಒಬ್ಬನೇ. ನಾವೆಲ್ಲಾ ಒಂದು ಎನ್ನುವ ಹಿಂದೂಗಳಿಗೆ ಮಾತ್ರ ಜಾತಿಗೊಂದರಂತೆ

ಮೂವತ್ತ ಮೂರು ಕೋಟಿ ದೇವರುಗಳು. ಇನ್ನು ಈ ದೇವರುಗಳ ರಾಸಲೀಲೆ, ಲೋಕಕಲ್ಯಾಣ ಮನೋಭಾವ, ಕೇಳಿದೊಡನೆ ಓಡಿಬಂದು ವರ ನೀಡುವ ಅದ್ಭುತ ಶಕ್ತಿ, ಸಾಹಸ ಶೌರ್ಯದ ಕಥೆಗಳನ್ನು ಕೇಳುವುದೇ ಒಂದು ಆನಂದ. ಈ ಕಥೆಗಳನ್ನು ತಿಂಗಳುಗಟ್ಟಲೆ, ವರ್ಷಗಟ್ಟಲೆ ಕೇಳಿದರೂ ಮುಗಿಯುವುದಿಲ್ಲ. ಅಂತಹ ಅಪರೂಪದ ಕಥೆಗಳ ಕೆಲವು ತುಣುಕುಗಳು ಇಲ್ಲಿವೆ.

ನಮ್ಮಂತಹ ಸಣ್ಣವರು, ಇಂದ್ರ ಅಹಲ್ಯೆಯರ ಕಥೆಯನ್ನು ಎತ್ತಿ ಆಡುವುದು ಸಣ್ಣತನ. ಬ್ರಹ್ಮ ತನ್ನ ಮಗಳನ್ನೇ ಮದುವೆಯಾದವನು. ವಿಷ್ಣುವಿನ ಅವತಾರವಾದ ಕೃಷ್ಣನಿಗೆ ಎಂಟು ಜನ ಹೆಂಡತಿಯರು ಮತ್ತು ಹದಿನಾರು ಸಾವಿರ ಗೋಪಿಕಾ ಸ್ತ್ರೀಯರು. ಲೋಕ ಕಲ್ಯಾಣಕ್ಕೆ ಇಂಥವರು ಮಾಡಿದ ಕಲ್ಯಾಣ ಕೆಲಸಗಳು ಯಾವ ರೀತಿಯಲ್ಲಿ ಲೋಕಕಲ್ಯಾಣವೋ ಅರ್ಥವಾಗುವುದಿಲ್ಲ. ಬೃಂದೆಯ ಗಂಡ ಜಲಂಧರ ಕೇಡಿಗ. ಅವನು ಪಾರ್ವತಿಯ ಮೇಲೆ ಕಣ್ಣು ಹಾಕಿದ. ಲೋಕದ ಹಿತದೃಷ್ಟಿಯಿಂದ ಅವನನ್ನು ಕೊಲ್ಲಲೇಬೇಕಾಯಿತು. ಆದರೆ ಬೃಂದೆಯ ಪಾತಿವ್ರತ್ಯ ಅವನಿಗೆ ರಕ್ಷೆಯಾಗಿ ನಿಂತಿದ್ದರಿಂದ ವಿಷ್ಣು ತಾನೇ ಜಲಂಧರನ ರೂಪವನ್ನು ತಾಳಿ ಅವಳನ್ನು ಕೆಡಿಸಿದ. ಆಮೇಲೆ ಜಲಂಧರನ ಸಂಹಾರವಾಯಿತು. ವಿಷ್ಣು ಮಾಡಿದ ಈ ಘನಕಾರ್ಯದಿಂದ ಲೋಕಕ್ಕೆ ಯಾವ ರೀತಿಯಿಂದ ಲಾಭವಾಯಿತೋ! ಆದರೂ ವಿಷ್ಣುವಿಗೆ ಬೃಂದೆಯ ವಿಷಯದಲ್ಲಿ ಅಪಾರ ಕನಿಕರ ಮತ್ತು ಗೌರವವೂ ಇತ್ತು. ಆದ್ದರಿಂದ ಅವಳು ತುಳಸಿಯ ರೂಪದಲ್ಲಿ ಅಮರಳಾಗಲೆಂದು ಹಾಗೂ ಭೂಲೋಕದಲ್ಲಿ ಅವಳಿಗೆ ಸತತ ಪೂಜೆ ನಡೆಯಲೆಂದು ವರ ಕೊಟ್ಟನಂತೆ. ಭೂಲೋಕದಲ್ಲಿ ತುಳಸಿ ಪೂಜೆ ಇಂದಿಗೂ ನಡೆಯುತ್ತಿದೆ.

ವಿಷ್ಣು ಅವತಾರವಾದ ಕೃಷ್ಣನ ಕುರಿತ ಕಥೆಗಳು ಲೆಕ್ಕವಿಲ್ಲದಷ್ಟಿವೆ. ಗೋಪಿಯರ ವಸ್ತ್ರಾಪಹರಣ, ರಾಸಕ್ರೀಡೆ, ವಯಸ್ಸಿನಲ್ಲಿ ದೊಡ್ಡವಳೂ, ಮದುವೆಯಾದವಳೂ ಆದ ರಾಧೆಯ ಜೊತೆ ಪ್ರಣಯ ಇತ್ಯಾದಿ. ಒಂದು ಸಾರಿ ಕೃಷ್ಣ ತನ್ನನ್ನು ಮೋಹಿಸಿ ಬಂದ ತರುಣಿಯರಿಗೆ ಬುದ್ಧಿ ಹೇಳಿ ಹಿಂದಕ್ಕೆ ಕಳುಹಿಸಿದನಂತೆ. ಆದರೆ ಅವರು ಅವನನ್ನು ಪದೇಪದೇ ಪೀಡಿಸಲು ಪ್ರಾರಂಭಿಸಿದ್ದರಿಂದ ಅವರಿಗೆ ಬುದ್ಧಿ ಕಲಿಸಬೇಕಾದರೆ ಅವರ ಕಾಮವನ್ನು ಪೂರೈಸುವುದೇ ಸರಿ ಎಂದು ಅವರನ್ನು ಮೋಹಿಸಲು ಪ್ರಾರಂಭಿಸಿಬಿಟ್ಟನಂತೆ.

ದೇವಾಸುರರು ಸೇರಿ ಸಮುದ್ರವನ್ನು ಕಡೆದರಷ್ಟೆ. ಅದರ ಫಲವಾಗಿ ಉಕ್ಕಿಬಂದ ಅಮೃತವನ್ನು ಅಸುರರಿಗೆ ಸಿಕ್ಕದಂತೆ ಮಾಡಿ, ದೇವತೆಗಳಿಗೆ ಮಾತ್ರ ಅದನ್ನು ಹಂಚುವ ಉದ್ದೇಶದಿಂದ ವಿಷ್ಣು, ಮೋಹಿನಿಯ ರೂಪವನ್ನು ತಾಳಬೇಕಾಯಿತು. ಆಗ ಶಿವ ಮೋಹಿನಿಯ ರೂಪಕ್ಕೆ ಮನಸೋತು ಅವಳನ್ನು ರೋಡ್ ರೋಮಿಯೊ ತರಹ ಅಟ್ಟಿಸಿಕೊಂಡು ಹೋಗಿ ಕೂಡಿದ. ಆ ಪ್ರಣಯದ ಸಲುವಾಗಿ ಹುಟ್ಟಿದವನೇ ಅಯ್ಯಪ್ಪ ಉರುಫ್ ಶಾಸ್ತಾ ಉರುಫ್ ಮಣಿಕಂಠ. ಇವನು ಕೇರಳದ ಶಬರಿಮಲೈಯಲ್ಲಿ ನೆಲೆಸಿ ಲಕ್ಷೋಪಲಕ್ಷ ಭಕ್ತರ ಭಕ್ತಿಗೆ ಪಾತ್ರನಾಗಿದ್ದಾನೆ. ಇವನ ಜನ್ಮಕಥೆ ನಗೆಪಾಟಲು ಎನ್ನುವ ವಿಷಯ ಭಕ್ತರಿಗೆ ತೋರಿದಂತಿಲ್ಲ. ಮನ್ಮಥನನ್ನು ಸುಟ್ಟು ಬೂದಿ ಮಾಡಿದ ಶಿವ ಪಾರ್ವತಿಯ ದಿವ್ಯ ಸೌಂದರ್ಯಕ್ಕೆ ಸೋಲದ ಶಿವ ಬೀದಿ ರೋಮಿಯೊನಂತೆ ಮೋಹಿನಿಯನ್ನು ಅಟ್ಟಿಸಿಕೊಂಡು ಹೋದನೇ? ಮೋಹಿನಿ ನಿಜವಾಗಿ ಹೆಣ್ಣಲ್ಲ,

ಆ ರೂಪವನ್ನು ತಾಳಿದ್ದು ವಿಷ್ಣು ಎಂಬುದು ಅವನಿಗೆ ಯಾಕಾದರೂ ಗೊತ್ತಾಗಲಿಲ್ಲ? ಹೋಗಲಿ ವಿಷ್ಣು ಕ್ಷಣಮಾತ್ರದಲ್ಲಿ ತನ್ನ ನಿಜರೂಪವನ್ನು ಯಾಕಾದರೂ ತಾಳಲಿಲ್ಲ? ಇವೆಲ್ಲ ನಮ್ಮಂತಹ ಶುದ್ಧ ತಲೆಹರಟೆಗಳ ಪ್ರಶ್ನೆಗಳು ಎನ್ನುತ್ತಾರೆ ತಿಳಿದವರು ಮತ್ತು ದೈವಭಕ್ತರು. (ಎಸ್. ಮೂರ್ತಿರಾವ್: ದೇವರು)

ವಿಷ್ಣುವಿನ ಇನ್ನೊಂದು ರೂಪ ಸತ್ಯನಾರಾಯಣ. ಸತ್ಯನಾರಾಯಣ ವ್ರತ ಬಹಳ ಇತ್ತೀಚಿನದು. ಅದರ ಉಲ್ಲೇಖ ಸ್ಕಾಂದ ಪುರಾಣದಲ್ಲಿದೆಯಾದರೂ ಹುಚ್ಚು ಆಚರಣೆಗೆ ಕೇವಲ ಒಂದು ಶತಮಾನದ ಇತಿಹಾಸವಿದೆ, ಅಷ್ಟೆ. ಅದನ್ನು ಸಾವಿರಾರು ಭಕ್ತರು ಭಯಭಕ್ತಿಯಿಂದ ಆಚರಿಸುತ್ತಾರೆ. ಸತ್ಯನಾರಾಯಣ ಬಹಳ ಸತ್ಯದ ದೇವರಂತೆ. ವ್ರತ ಮಾಡಿದವರಿಗೆ ಅವರ ಇಷ್ಟಾರ್ಥಗಳನ್ನು ಪೂರೈಸುತ್ತಾನೆ. ಅದು ಅವನ ಸತ್ಯದಲ್ಲಿ ಅರ್ಧಭಾಗ. ಉಳಿದ ಅರ್ಧದ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು. ಪೂಜೆಗೆ ಹೋದವರು ಪೂಜೆ ಮುಗಿಯುವವರೆಗೂ ಅಲ್ಲಿಂದ ಕದಲಬಾರದು. ಪ್ರಸಾದವನ್ನು ತೆಗೆದುಕೊಳ್ಳದೆ ಹೊರಟುಹೋದರೆ ಅದು ಅಕ್ಷಮ್ಯ ಅಪರಾಧ.

ಸಂತಾನವಿಲ್ಲದ ವರ್ತಕನೊಬ್ಬ ಮಕ್ಕಳಾದರೆ ವ್ರತ ಮಾಡುತ್ತೇನೆಂದು ಹರಕೆ ಹೊತ್ತುಕೊಂಡ. ಮಗಳೊಬ್ಬಳು ಹುಟ್ಟಿ ಬೆಳೆದಳು. ಅವಳಿಗೆ ಮದುವೆಯೂ ಆಯಿತು. ಆದರೂ ವರ್ತಕ ಶೆಟ್ಟಿ ವ್ರತ ಮಾಡಲಿಲ್ಲ. ಸತ್ಯನಾರಾಯಣ ಅವನಿಗೆ ಶಾಪ ಕೊಟ್ಟ. ಪ್ರವಾಸದಲ್ಲಿದ್ದ ಶೆಟ್ಟಿ ಮತ್ತು ಅವನ ಅಳಿಯನ ಮೇಲೆ ಕಳ್ಳತನದ ಆಪಾದನೆ ಬಂತು. ರಾಜ ಅವರನ್ನು ಸೆರೆಯಲ್ಲಿಟ್ಟು ಅವರ ಆಸ್ತಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡ. ಒಂದು ದಿನ ಶೆಟ್ಟಿಯ ಮಗಳು ಯಾರೋ ಕೊಟ್ಟ ಸತ್ಯನಾರಾಯಣ ಪ್ರಸಾದವನ್ನು ತಿಂದು, ಅವಳು ಮತ್ತು ಅವಳ ಗಂಡ ವ್ರತ ಮಾಡಬೇಕೆಂದು ತೀರ್ಮಾನಿಸಿದರು. ಆ ಹೊತ್ತೇ ದೇವರು ರಾಜನ ಕನಸಿನಲ್ಲಿ ಬಂದು ಆ ವರ್ತಕನನ್ನು ಅವನ ಅಳಿಯನನ್ನು ಬಿಟ್ಟುಬಿಡುವಂತೆ ಅಪ್ಪಣೆ ಮಾಡಿದ. ಅವರು ಬಿಡುಗಡೆ ಪಡೆದು ಹಡಗಿನಲ್ಲಿ ಊರಿಗೆ ಹೊರಟರು. ಅವರು ಬರುವ ವಿಷಯ ತಿಳಿದಾಗ ಶೆಟ್ಟಿಯ ಮಗಳು ವ್ರತ ಮಾಡುತ್ತಿದ್ದಳು. ತನ್ನ ಗಂಡ ಬಂದನೆಂಬ ಸಂತೋಷದಲ್ಲಿ ಅವಳು ಪ್ರಸಾದ ತೆಗೆದುಕೊಳ್ಳುವುದನ್ನು ಮರೆತು ಗಂಡನನ್ನು ಸ್ವಾಗತಿಸಲು ಓಡಿದಳು. ಕೂಡಲೇ ಗಂಡನಿದ್ದ ಹಡಗು ಮುಳುಗಿಹೋಯಿತು. ಅವಳು ಪ್ರಸಾದವನ್ನು ಕಡೆಗಣಿಸಿದ್ದರಿಂದ ಹೀಗಾಯಿತು. ಪ್ರಸಾದವನ್ನು ತೆಗೆದುಕೊಂಡರೆ ಎಲ್ಲಾ ಸರಿಹೋಗುತ್ತದೆ ಎಂದು ಅಶರೀರವಾಣಿ ನುಡಿಯಿತು. ಅವಳು ಪ್ರಸಾದ ತೆಗೆದುಕೊಂಡಳು. ಹಡಗು ಮೇಲಕ್ಕೆ ಬಂದಿತು. ಆ ಸಂಸಾರ ನೂರುಕಾಲ ಸುಖವಾಗಿ ಬಾಳಿತು. ಈ ಕಥೆಯನ್ನು ಶ್ರೀಮನ್ನಾರಾಯಣನೇ ನಾರದನಿಗೆ ಹೇಳಿದನಂತೆ.

ವಿಷ್ಣುವಿನ ಒಂದು ರೂಪವಾದ ತಿರುಪತಿಯ ವೆಂಕಟರಮಣನನ್ನು ಕುರಿತ ನಂಬಿಕೆಗಳು ಅವನಿಗೆ ಕೀರ್ತಿ ತರುವಂತಹವಲ್ಲ. ವೆಂಟಕರಮಣ ಲೋಕವನ್ನು ಸಲಹುವಂತೆ ಎಲ್ಲರನ್ನೂ ಸಲಹುತ್ತಾನೆ. ಹಾಗೆಂದು ತೆಪ್ಪಗಿರಬೇಡಿ. ಅವನಿಂದ ವಿಶೇಷ ಅನುಗ್ರಹವನ್ನು ಬಯಸಿದರೆ ಅವನಿಗೆ ಕಪ್ಪ ಕಾಣಿಕೆ ನೀಡುತ್ತೇನೆಂದು ಹರಕೆ ಹೊತ್ತುಕೊಳ್ಳಬೇಡಿ. ನೀವು ಕೇಳಿದ ವರ ಸಿಕ್ಕರೆ ಅದು ಅವನು ಕೊಟ್ಟ ವರ; ಸಿಕ್ಕದಿದ್ದರೆ ಅದು ನಿಮ್ಮ ಕರ್ಮ. ಸಿಕ್ಕದ ಮೇಲೆ ಹರಕೆ ತೀರಿಸದಿದ್ದರೆ ನಿಮ್ಮ ಪಾಡು ನಾಯಿ

ಪಾಡಾದರೂ ಆಗಬಹುದು. ಅವನ ಗುಡಿಯಲ್ಲಿರುವ ಚಿನ್ನ, ವಜ್ರ, ವೈಢೂರ್ಯಗಳನ್ನೇ ಕಾಪಾಡಿಕೊಳ್ಳದ ಅವನನ್ನು, ಅವನ ಒಡವೆಗಳನ್ನು ಪೊಲೀಸರು ಕಾಯುತ್ತಿದ್ದಾರೆ.

ಈ ಹಿಂದೂ ದೇವರುಗಳ ನಗೆಪಾಟಲಿನ ಕಥೆಗಳನ್ನು ಲೋಕಕಲ್ಯಾಣದ ಕಥೆಗಳೆಂದು ಹೇಗೆ ನಂಬುವುದು? ಆದರೆ ಈ ದೇವರುಗಳು ಸಮಸ್ತ ಸೃಷ್ಟಿಗೆ, ಪ್ರಪಂಚದಲ್ಲಿ ನಡೆಯುವ ಎಲ್ಲಾ ಘಟನೆಗಳಿಗೆ ಕಾರಣಕರ್ತರೆಂದು ಹಿಂದೂಗಳು ನಂಬಿದ್ದಾರೆ. ಈ ದೇವರುಗಳ ಸೃಷ್ಟಿಯಲ್ಲಿ ಹಲವು ರೀತಿಯ ತಾರತಮ್ಯಗಳಿವೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಮೂಲದಲ್ಲಿ ದ್ರಾವಿಡರ ನಾಯಕನಾದ ಶಿವನನ್ನು ಆರ್ಯರು ತಮ್ಮ ನಾಯಕರ ಜೊತೆಗೆ ಸೇರಿಸಿಕೊಂಡು ಅವನಿಗೆ ತ್ರಿಮೂರ್ತಿಗಳ ಕಲ್ಪನೆಯಲ್ಲಿ (ಬ್ರಹ್ಮ, ವಿಷ್ಣು, ಮಹೇಶ್ವರ) ಲಯಕಾರ ಎಂದು ಹೆಸರಿಸಿದರು. ಆರ್ಯ ದೇವರುಗಳಾದ ಬ್ರಹ್ಮ ಸೃಷ್ಟಿಕರ್ತನಾದರೆ, ವಿಷ್ಣು (ಸ್ಥಿತಿಕರ್ತ) ಸಂರಕ್ಷಕನಾಗುತ್ತಾನೆ. ಮಹೇಶ್ವರ ಮಾತ್ರ ಲಯಕರ್ತನಾಗುತ್ತಾನೆ. ಇಲ್ಲಿಯೂ ಆರ್ಯರು, ದ್ರಾವಿಡ ದೇವ ಶಿವನನ್ನು ಕೀಳು ಮನೋಭಾವದಿಂದ ವೇದಗಳಲ್ಲಿ ಬರುವ ರುದ್ರನೊಂದಿಗೆ ಸಮೀಕರಿಸಿಬಿಟ್ಟಿದ್ದಾರೆ (ಎ. ಎನ್. ಮೂರ್ತಿರಾವ್: ದೇವರು).

## ಪಣ ಸಮಾಜ

ಒಂದು ಕಾಲದಲ್ಲಿ ಇಡೀ ದಕ್ಷಿಣ ಭಾರತದ ಎಲ್ಲಾ ಕಡೆಗಳಲ್ಲೂ ಪಣಕಟ್ಟು ಸಮಾಜವೆ ಅಸ್ತಿತ್ವದಲ್ಲಿತ್ತೆಂದು ಭಾವಿಸಲಾಗಿದೆ. ಈ ದೃಷ್ಟಿಯಿಂದ ಪಣಕಟ್ಟು ಸಮಾಜ ತೀರಾ ಪ್ರಾಚೀನ ವ್ಯವಸ್ಥೆ ಆಗಿದ್ದಿರಬಹುದು. ಒಂದು ನಂಬಿಕೆಯ ಪ್ರಕಾರ ಕಂಚಿಯ ಕಾಳಿ ತನ್ನ ಬಲಗೈಯಲ್ಲಿ ಕೆಲವು ಜಾತಿಗಳನ್ನು ಎಡಗೈಯಲ್ಲಿ ಕೆಲವು ಜಾತಿಗಳನ್ನು ಇಟ್ಟುಕೊಂಡಿದ್ದರಿಂದ ಎಡಗೈ ಮತ್ತು ಬಲಗೈ ಜಾತಿಗಳಾದವೆಂದು ಹೇಳಲಾಗಿದೆ. ಪಣಕಟ್ಟಿನ ಸಮಾಜ ಪ್ರಾಚೀನವಾಗಿರುವಂತೆಯೇ ಕಾಮಾಕ್ಷಿ ದೇವತೆ ಪ್ರಾಚೀನ ಕಾಳಿಯಾಗಿದ್ದಳು.

ಪಣಕಟ್ಟಿನ ಸಮಾಜದಲ್ಲಿ ಬಹುತೇಕ ಕೃಷಿಕ, ಕುಶಲಕರ್ಮಿಗಳು ಮತ್ತು ವ್ಯಾಪಾರಿ ಜಾತಿಗಳೇ ಇದ್ದವೆಂಬುದಂತೂ ನಿಜ. ಕರ್ನಾಟಕದ ಪಣ ವ್ಯವಸ್ಥೆಯನ್ನು ಸಿ. ಹಯವದನರಾವ್ ಹೀಗೆ ಪಟ್ಟಿ ಮಾಡಿದ್ದಾರೆ:

**ಬಲಗೈ ಪಟ್ಟಿ**

1. ಬಣಜಿಗ
2. ಒಕ್ಕಲಿಗ
3. ಗಾಣಿಗ (ಒಂಟೆತ್ತು)
4. ರಂಗಾರೆ (ಬಣ್ಣ ಹಾಕುವವರು)
5. ಲಾಡ (ಮರಾಠಿ ವ್ಯಾಪಾರಸ್ಥರು)
6. ಗುಜರಾತಿ (ಗುಜರಾತಿ ವ್ಯಾಪಾರಸ್ಥರು)
7. ಕಮಾಟಿ (ಕೂಲಿಗಾರರು)

**ಎಡಗೈ ಪಟ್ಟಿ**

1. ಪಂಚಾಲರು
   ಅ. ಬಡಿಗ
   ಆ. ಕುಂಚಗಾರ
   ಇ. ಕಮ್ಮಾರ
   ಈ. ಕಲ್ಕುಟಿಗ (ಶಿಲ್ಪಿ)
   ಉ. ಅಕ್ಕಸಾಲಿಗ
   (ವಿಶ್ವಕರ್ಮದ ಪಂಚಕುಲಗಳು)
2. ಭೇರಿ (ನಗರ್ತಕರು)

8. ಜೈನ ಅಥವಾ ಕೋಮಟಿ
9. ಕುರುಬ
10. ಕುಂಬಾರ
11. ಅಗಸ
12. ಬೆಸ್ತ
13. ಪದ್ಮಸಾಲೆ
14. ನಾಯಿಂದ
15. ಉಪ್ಪಾರ
16. ಚಿತ್ರಗಾರ
17. ಗೊಲ್ಲ
18. ಹೊಲೆಯ

3. ದೇವಾಂಗ
4. ಹೆಗ್ಗಾಣಿಗ
5. ಗೊಲ್ಲ
6. ಬೇಡ
7. ಯಾಕುಲ ಅಥವಾ ತೊರೆಯ
8. ಪಳ್ಳಿ ಅಥವಾ ತಿಗಳ
9. ಮಾದಿಗ

ಬಲಗೈ ಪಟ್ಟಿಯಲ್ಲಿರುವವರು ತಮ್ಮನ್ನು ಹದಿನೆಂಟು ಪಣಕಟ್ಟಿನವರೆಂದು. ಎಡಗೈ ಪಟ್ಟಿಯಲ್ಲಿರುವವರು ತಮ್ಮನ್ನು ಒಂಭತ್ತು ಪಣದವರೆಂದು ಇಂದಿಗೂ ಮದುವೆ ಮತ್ತಿತರ ಕಾರ್ಯಗಳಲ್ಲಿ ಗುರುತಿಸಿಕೊಳ್ಳುತ್ತಾರೆ. ಹದಿನೆಂಟು ಪಣದ ಪ್ರಾಚೀನತೆಗೆ ಪೂರಕವಾಗಬಲ್ಲಂತಹ ಆಶ್ಚರ್ಯಕರ ಪುರಾವೆಯೊಂದು ತಮಿಳು ಮೂಲದ ಅಗಸ್ತ್ಯ ಪರಂಪರೆಯಲ್ಲಿ ದೊರಕುತ್ತದೆ. ಅದರ ಪ್ರಕಾರ ಅಗಸ್ತ್ಯ, ಕೃಷ್ಣನನ್ನು ಕಂಡು ಹದಿನೆಂಟು ಜನ ನಾಯಕರನ್ನು ಮತ್ತು ಹದಿನೆಂಟು ಸಾವಿರ ಕೃಷಿಕರನ್ನು ತನ್ನೊಟ್ಟಿಗೆ ಕರೆದುಕೊಂಡು ಬಂದು ದಕ್ಷಿಣ ಭಾರತದಲ್ಲಿ ನೆಲೆಸಿದಂತೆ ಉಲ್ಲೇಖವಾಗಿದೆ. ಈ ಪುರಾವೆಯಿಂದ ಪಣಕಟ್ಟು ಸಮಾಜ ಮುಂದಿನ ದಿನಗಳಲ್ಲಿ ಜಾತಿಪದ್ಧತಿಯ ಸಮಾಜವಾಗಿ ಟಿಸಿಲೊಡೆದಿರಬೇಕು. ಅಂದರೆ ಆ ಕಾಲಕ್ಕೆ ವೈದಿಕೀಕರಣಗೊಂಡ ಸಮಾಜ, ಬಹುಜನ ಸಮಾಜದೊಳಕ್ಕೆ ನುಸುಳಿಕೊಂಡಿರಬೇಕು. ಕೃಷ್ಣನು ಮೂಲವಾಗಿ ದ್ರಾವಿಡ ರಾಜನೆನ್ನುವುದು ಇಲ್ಲಿ ಗಮನದಲ್ಲಿ ಇಡಬೇಕಾದ ವಿಷಯ.

ಕೃಷ್ಣನ ಮೂಲಸ್ಥರಿಗೂ ಮತ್ತು ಇಂದ್ರನ ಮೂಲಸ್ಥರಿಗೂ ಹಲವು ನೂರು ವರ್ಷಗಳ ಕಾಲ ಸಿಂಧೂ ಬಯಲುಗಳಲ್ಲಿ ಯುದ್ಧಗಳಾಗಿರುವ ವಿಷಯ ಉಲ್ಲೇಖವಾಗಿದ್ದು ಕೊನೆಗೆ ಆರ್ಯರು ಕೃಷ್ಣನನ್ನು (ದ್ರಾವಿಡರನ್ನು) ಗೆದ್ದು ಬಹುಜನ ಸಮಾಜವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಕಾಲದಲ್ಲಿ ರಾಮಾಯಣ ಮತ್ತು ಮಹಾಭಾರತವನ್ನು ಸೃಷ್ಟಿಸಿದರು. ಮಹಾಭಾರತ ಮತ್ತು ರಾಮಾಯಣವನ್ನು ಸೃಷ್ಟಿಸಿದವರು ಮೂಲವಾಗಿ ಬಹುಜನ ಸಮಾಜದವರಾದರೂ ಅದರಲ್ಲಿ ವೈದಿಕೀಕರಣದ ಅಂಶಗಳನ್ನು ಚಾಕಚಕ್ಯತೆಯಿಂದ ತುಂಬಿಸಲಾಯಿತು. ಕೃಷ್ಣನ ಬಾಯಿಂದಲೆ ಭಗವದ್ಗೀತೆಯನ್ನು ಹೇಳಿಸಿ ಬಹುಜನ ಸಮಾಜದಲ್ಲಿ ವರ್ಣಾಶ್ರಮ ಪದ್ಧತಿಯನ್ನು ಅಳವಡಿಸಿ ಅದು ಜಾತಿಗಳಾಗಿ ಟಿಸಿಲೊಡೆಯಲು ಕಾರಣವಾಯಿತು. ಅವರವರ ಕರ್ಮಗಳಿಗನುಸಾರವಾಗಿ ಮರುಜನ್ಮ ತಾಳುವುದಾಗಿ ನಂಬಿಸಲಾಯಿತು.

ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯ ವಿಶೇಷವೆನ್ನುವಂತಿರುವ ಪಣಕಟ್ಟಿನ ಸಮಾಜಕ್ಕೂ ಮತ್ತು ಶ್ರೇಣೀಕೃತ ಜಾತಿಪದ್ಧತಿಗೂ ನಡುವಿನ ಸಂಬಂಧಗಳು ಯಾವ ರೀತಿಯವು ಎನ್ನುವುದನ್ನು ವಿಶೇಷವಾಗಿ ವಿಶ್ಲೇಷಿಸಬೇಕಾಗಿದೆ. ಈ ಜಾತಿಗಳು

ನಾಶವಾದರೆ ಹಿಂದೂ ಧರ್ಮವೇ ನಾಶವಾಗುತ್ತದೆ ಎನ್ನುತ್ತಾರೆ ಪ್ರಸಿದ್ಧ ಸಮಾಜ ವಿಜ್ಞಾನಿ ಎಂ. ಎನ್. ಶ್ರೀನಿವಾಸ್ ಅವರು. ಈ ಜಾತಿಪದ್ಧತಿ, ದಕ್ಷಿಣ ಭಾರತದ ಆದಿಮೂಲ ಸಂಸ್ಕೃತಿಯಲ್ಲಿ (ಪಣಸಮಾಜ) ಹೇಗೆ ಬೇರುಬಿಟ್ಟಿತು ಎನ್ನುವ ವಿಷಯದ ಮೇಲೆ ವಿಶೇಷ ಅಧ್ಯಯನ ನಡೆಯಬೇಕಾಗಿರುವುದು ಅಗತ್ಯವಾದ ಕೆಲಸವಾಗಿದೆ. ವೈದಿಕಶಾಹಿ ಸಮಾಜದ ಆಗಮನದಿಂದ ವೃತ್ತಿ ಮೂಲ ಮತ್ತು ಪ್ರದೇಶ ಮೂಲವನ್ನು ಆಧರಿಸಿದ ಜಾತಿಪದ್ಧತಿ ಕ್ರಮೇಣ ಎಲ್ಲರನ್ನೂ ಆವರಿಸಿಕೊಂಡಿರಬೇಕು.

ಸರ್. ಎಡ್ವರ್ಡ್ ಗೈಟ್ ಹೇಳಿರುವಂತೆ ಪಣಕಟ್ಟು ಸಮಾಜ ಜಾತಿಪದ್ಧತಿಗಿಂತಲೂ ಪ್ರಾಚೀನ. ಪಣಕಟ್ಟುಗಳ ಪಟ್ಟಿಯಲ್ಲಿ ಆರ್ಯ ಸಮಾಜಕ್ಕೆ ಸೇರಿದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಾರೂ ಕಂಡುಬರುವುದಿಲ್ಲ ಎಂಬುದು ಆತನ ನಿಲುವನ್ನು ಸಮರ್ಥಿಸುವಂತಿದೆ. ಎಲ್ಲಾ ಪಣದವರು ದ್ರಾವಿಡ ಸಂಸ್ಕೃತಿಗೆ ಸೇರಿದ ಶೂದ್ರ ವರ್ಗಗಳವರು. ಕಂಚಿ ಕಾಳಿಯ ಎಡಗೈ ಬಲಗೈಗಳೇ ಪಣಕಟ್ಟು ಸಮಾಜದ ಮೂಲವೆಂಬ ನಂಬಿಕೆಯ ಮಾತನ್ನು ಐತಿಹ್ಯದ ತೆಕ್ಕೆಯಿಂದ ಬಿಡಿಸಿ ನೋಡಿದಾಗ ಏನಿಲ್ಲವೆಂದರೂ ಎಡಗೈ, ಬಲಗೈಗಳ ಪಣಸಮಾಜದ ಹುಟ್ಟಿಗೆ ಕಾಳಿದೇವಿಯ ಶಕ್ತಿ ಆರಾಧನಾ ವಿಧಾನಗಳೇ ಕಾರಣವಾಗಿರ ಬಹುದೆಂಬ ಅಂಶ ಸ್ಪಷ್ಟವಾಗುತ್ತದೆ. ಬಲಗೈನ (ಹೊಲೆಯರು) ಉಪಾಸಕರು ಕೇವಲ ಮಾಂತ್ರಿಕ ವಿದ್ಯೆಯ ಆಚರಣೆಗಳಿಗೆ ಸೀಮಿತರಾಗಿ ಶ್ರೇಷ್ಠರಾದರೆ ಎಡಗೈನ (ಮಾದಿಗರು) ಉಪಾಸಕರು ರಕ್ತಬಲಿ, ಆವೇಶ ಕುಣಿತ ಮತ್ತು ಮೈಥುನಗಳ ಕ್ರೂರ ಹಾಗೂ ಅಸಭ್ಯ ಆಚರಣೆಗಳಿಂದ ಕನಿಷ್ಠರಾಗಿ ಪರಿಗಣಿಸಲ್ಪಟ್ಟಿರುವುದಾಗಿ ತಿಳಿದುಬರುತ್ತದೆ.

ಈ ಎಡಗೈ ಮತ್ತು ಬಲಗೈ ಪಟ್ಟಿಯ ಕೊನೆಯಲ್ಲಿರುವ ಮಾದಿಗ ಮತ್ತು ಹೊಲೆಯ ಸಮಾಜಗಳು ಮಾತ್ರ ಅಸ್ಪೃಶ್ಯತೆಯ ಹೊರೆಯನ್ನು ಯಾವ ಕಾಲದಿಂದ ತಮ್ಮ ಮೇಲೆ ಹೇರಿಕೊಂಡವು ಎನ್ನುವುದನ್ನು ನಾವು ಬಿಡಿಸಬೇಕಿದೆ. ಆರ್ಯಸಮಾಜ, ದ್ರಾವಿಡ ಸಂಸ್ಕೃತಿಯ ಮೇಲೆ ವರ್ಣಾಶ್ರಮ, ಜಾತಿಗಳನ್ನು ಹೇರಿದ ಕಾರಣದಿಂದ ಅಂತಿಮವಾಗಿ ಅಸ್ಪೃಶ್ಯ ಸಮಾಜಗಳು ಹುಟ್ಟಿಕೊಂಡಿವೆ ಎನ್ನುವುದು ಚಾರಿತ್ರಿಕ ಸತ್ಯವಾಗಿದೆ. ಈ ವಿಷಯಗಳನ್ನು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ.

## ಹೆಸರುಗಳ ಹಿನ್ನೆಲೆ

ಜನರು ಒಬ್ಬರನ್ನೊಬ್ಬರು ಸಂಧಿಸಿದಾಗ ನಮ್ಮ ಹೆಸರುಗಳನ್ನು ಹೇಳಿಕೊಳ್ಳುವುದು ರೂಢಿ. ಹೆಸರುಗಳ ಹಿನ್ನೆಲೆ ಏನೇ ಇರಲಿ ಆ ಹೆಸರುಗಳಿಂದಲೇ ಅವರ ಜಾತಿಗಳನ್ನು ತಿಳಿದುಕೊಳ್ಳುವ ಉಪಾಯವೂ ಅಡಗಿದೆ. ಭಾರತದಲ್ಲಿ ಮನೆಗೊಂದು ಹೆಸರಿದ್ದು ಆ ಹೆಸರಿನಲ್ಲೇ ಅವನ ಜಾತಿಯೂ ಅಡಕವಾಗಿರುತ್ತದೆ. ವೈದಿಕಶಾಹಿ ಪದ್ಧತಿಗಳನ್ನು ಅಪ್ಪಿಕೊಂಡು ಜಾತಿಗಳು ಟಿಸಿಲೊಡೆಯುತ್ತಾ ಹೋದಂತೆ ಮನೆಗೊಂದು ಹೆಸರು ಹುಟ್ಟಿಕೊಂಡಿರಬೇಕು.

ಅದು ಏನೇ ಇರಲಿ ಕೀಳು ಜಾತಿಯವರು ತಮಗೆ ತಗುಲಿಕೊಂಡಿರುವ ಈ ಉಪನಾಮಗಳಿಂದ ನಾಚಿಕೊಳ್ಳುವಂತಹ ಪರಿಸ್ಥಿತಿ ಉಂಟಾಗಿದೆ. ಹಿಂದೂಗಳು ಈ ದೇಶದ ಮೂಲಸ್ಥರಿಗೆ ಕೊಟ್ಟ ಹೊಲೆಯ, ಮಾದಿಗ, ಚಂಡಾಳ, ಕೊರಚ, ಕೊರಮ

ಮುಂತಾದ ಕೊಳಕು ಹೆಸರುಗಳಿಗೆ ಬದಲಾಗಿ ಆದಿ-ದ್ರಾವಿಡ, ಆದಿ-ಆಂಧ್ರ, ಆದಿ-ಕರ್ನಾಟಕ ಮುಂತಾದ ತುಸು ಸೌಮ್ಯ ಹೆಸರುಗಳು ಬರಲು ಈ ದೇಶಕ್ಕೆ ಕ್ರಿಶ್ಚಿಯನ್ ಮಿಷನರಿಗಳು ಬರಬೇಕಾಯಿತು. ಈ ಅಸ್ಪೃಶ್ಯ ಜನಾಂಗದವರು ಮೂಲವಾಗಿ ಅಸ್ಪೃಶ್ಯರಾಗಿರಲಿಲ್ಲ. ಅವರು ಈ ನೆಲದ ಮೂಲ ನಾಗರಿಕರಾಗಿದ್ದರು. ಕೆಲವು ಪ್ರದೇಶಗಳಲ್ಲಿ ನೆಲದ ಒಡೆಯರಾಗಿದ್ದು, ರಾಜರಾಗಿದ್ದ ಉದಾಹರಣೆಗಳೂ ಇವೆ.

**ಬೈರರು:** ಪೂರ್ವಕಾಲದಲ್ಲಿ ಕರ್ನಾಟಕದ ಪರಾಕ್ರಮಶಾಲಿ ಅರಸರಾದ ಬೈರರು ಪಾಳೆಗಾರರಾಗಿದ್ದ ಕಾರಣದಿಂದಲೆ ಇವರಿಗೆ ಬೈರರು ಎಂದು ಹೆಸರು ಬಂದಿರುವುದಾಗಿ ತಿಳಿಯುತ್ತದೆ. ಇವರನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದಿಗೂ ಕಾಣಬಹುದು. ಇನ್ನೊಂದು ಅಭಿಪ್ರಾಯದಂತೆ ಶಿವನ ರೂಪವಾದ ಕಾಲ ಭೈರವನನ್ನು ಆರಾಧನೆ ಮಾಡುತ್ತಿದ್ದ ಕಾರಣದಿಂದ ಇವರನ್ನು ಭೈರರು ಎಂದು ಕರೆಯಲಾಯಿತು ಎನ್ನಲಾಗಿದೆ.

**ಚಮ್ಮಾರ:** ಚಮ್ಮಾರ ಎಂಬ ಪಂಗಡದವರು ಮೂಲತಃ ಬಂಗಾಳ ದೇಶದವರು ಎಂದು ತಿಳಿದುಬರುತ್ತದೆ. ಬಂಗಾಳದಿಂದ ಹಿಂದೆ ಸುಮಾರು ಮುನ್ನೂರು ಕುಟುಂಬಗಳು ಚರ್ಮದ ಕೆಲಸ ಮಾಡಲು ಭಾರತದ ಬೇರೆಬೇರೆ ಪ್ರಾಂತಗಳಿಗೆ ವಲಸೆ ಹೋದರು ಎಂಬುದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಮಧ್ಯಪ್ರದೇಶ ಮತ್ತು ಪಂಜಾಬಿನಲ್ಲಿ ಇವರ ಸಂಖ್ಯೆ ಹೆಚ್ಚಾಗಿದ್ದು, ಇವರ ಮೂಲ ಕಸುಬಾದ ಚರ್ಮ ತಯಾರಿಕೆ ಕೆಲಸದಿಂದ ಇವರನ್ನು ಚಮ್ಮಾರರು ಎಂದು ಕರೆಯಲಾಯಿತು ಎಂದು ತಿಳಿದುಬರುತ್ತದೆ.

**ಗೊಡ್ಡರು:** ಪೂರ್ವದಲ್ಲಿ ಗದ್ದೆಯನ್ನು ಉಳಲು ತನ್ನ ಕೋಣದ ಜೋಡಿಯ ಒಂದು ಕೋಣವು ಸತ್ತಿದ್ದ ಕಾರಣ ನೊಗಕ್ಕೆ ಒಂದು ಗೊಡ್ಡು (ಕರುಹಾಕದ) ಎಮ್ಮೆಯನ್ನು ಕಟ್ಟಿ ಉಳುತ್ತಿದ್ದಾಗ. ಆ ಅಪೂರ್ವ ದೃಶ್ಯ ಕಂಡ ಸವರ್ಣೀಯ ಹಿಂದೂಗಳು ಈತನ ಅವಿವೇಕವನ್ನು ಹೀಯಾಳಿಸಿ ಈತನನ್ನು ಬರಿ ಗೊಡ್ಡನು (ಬುದ್ಧಿಹೀನನು) ಎಂದು ಕರೆದು ಅದೇ ಹೆಸರು ಖಾಯಂ ಆಯಿತು ಎಂಬುದಾಗಿ ತಿಳಿದುಬರುತ್ತದೆ.

**ಹೊಲೆಯ:** ಪೂರ್ವದಲ್ಲಿ ಅನಾಗರಿಕರಾದ ಹಾಗೂ ಅಸ್ವಚ್ಛರಾದ ಜನಾಂಗವನ್ನು ಹೊಲೆಯ ಎಂಬುದಾಗಿ ಸವರ್ಣೀಯರು ಕರೆಯಲಾರಂಭಿಸಿರಬೇಕು. ಇನ್ನೊಂದು ಅಭಿಪ್ರಾಯದಂತೆ ಪೂರ್ವದಲ್ಲಿ ಮುಖ್ಯವಾಗಿ ಬೇಸಾಯ ವೃತ್ತಿಯನ್ನೇ ಕಸುಬಾಗಿ ಕಟ್ಟಿಕೊಂಡು ಹಗಲು ರಾತ್ರಿ ದುಡಿಯುತ್ತಿದ್ದ ಈ ಹೊಲದ ಕೆಲಸಗಾರರನ್ನು ಹೊಲದ ಆಳುಗಳು ಹಾಗೂ ಮುಂದೆ 'ಹೊಲೆಯರು' ಎಂಬುದಾಗಿ ಕರೆಯಲಾಯಿತೆಂದು ಹೇಳಲಾಗಿದೆ. ಹೊಲ್-ಯಾ=ಹೊಲ, ನೆಲ ಯಾ ಭೂಮಿ. ಆದಿಯಲ್ಲಿ ಹೊಲೆಯರು ಭೂಮಿಯ ಒಡೆಯರಾಗಿದ್ದರು ಎಂಬುದಾಗಿ ಕೆಲವು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಈ ಮೂಲ ಪಂಗಡದಿಂದ ಮುಂದೆ ಹಲವು ಉಪಪಂಗಡಗಳು ಹುಟ್ಟಿಕೊಂಡಿರಬೇಕು. ಇಂದಿಗೂ ಯಾವುದೇ ಹಳ್ಳಿಯಲ್ಲಿ ಮೂಲವಾಗಿದ್ದ ಅವರಿಗೆ ಸೇರಿದ ಹೊಲಗದ್ದೆಗಳು ಜಮೀನು ಇರುವುದನ್ನು ನೋಡಬಹುದು.

ಆದಿಗ್ರಂಥದಲ್ಲಿ 'ಹುಬಶಿಕ' ಎಂಬ ಹೆಸರಿನ ರಾಜನ ಬಗ್ಗೆ ವಿವರಗಳು ದೊರಕುತ್ತವೆ. ಹೊಲೆಯರ ಉಪಜಾತಿಯಾದ ಕೊರಗ ಜಾತಿಗೆ ಸೇರಿದ ಈ ರಾಜನು ರಾಜ ಮಯೂರವರ್ಮನ ಮಗನಾದ ಲೋಕಾದಿತ್ಯನಿಂದ (ಗೋಕರ್ಣ) ಕ್ರಿ. ಶ. 179ರಲ್ಲಿ

ಸೋತ ಕಾರಣ ಕೊರಗ ಜಾತಿಯವರನ್ನೆಲ್ಲ ಗುಡ್ಡಗಾಡುಗಳ ಕಡೆಗೆ ಓಡಿಸಲಾಯಿತು. ಇದೇ ಜಿಲ್ಲೆಯ ಹೊಲೆಯರಿಗೆ ಒಂದಿನ ಕಾಲದಲ್ಲಿ ಓರ್ವ ರಾಜನಿದ್ದುದಾಗಿ ತಿಳಿದುಬರುತ್ತದೆ. ಈ ರಾಜನ ಹೆಸರು 'ನಂದ' (ಉತ್ತಾಂಗನ ಮಗ) ಎಂದು ಹೇಳಲಾಗಿದೆ. ಈ ಹೊಲೆಯರ ಅರಸನಾದ ನಂದನು ಬ್ರಾಹ್ಮಣರನ್ನು ಜಿಲ್ಲೆಯಿಂದ ಓಡಿಸಿದ. ಆದರೆ ಮುಂದೆ ನಂದನ ಮಗನಾದ ಚಂದ್ರಶಯನು ತನ್ನ ತಾಯಿಯ (ದೇವಸ್ಥಾನ ನರ್ತಕಿ) ರಾಜನೀತಿ, ಧರ್ಮನೀತಿಯ ಉಪದೇಶದಿಂದ ಓಡಿಸಲ್ಪಟ್ಟಿದ್ದ ಬ್ರಾಹ್ಮಣರನ್ನು ಮರಳಿ ಕರೆತಂದು ಜಿಲ್ಲೆಯ ಮೂವತ್ತೆರಡು ಗ್ರಾಮಗಳಲ್ಲಿ ಅವರಿಗೆ ಜೀವನ ಮಾಡಲು ಅನುಕೂಲ ಮಾಡಿಕೊಟ್ಟ. ಜೊತೆಗೆ ಸಮಾಜದಲ್ಲಿ ಬ್ರಾಹ್ಮಣರಿಗೆ ದೊರಕುವ ಶ್ರೇಷ್ಠ ಸ್ಥಾನವನ್ನು ಕೊಡಿಸಿ ತನ್ನವರನ್ನು ಬ್ರಾಹ್ಮಣರ ಸೇವಕರನ್ನಾಗಿಸಿ, ಅವರ ಹೊಲಗಳಲ್ಲಿ ಕೃಷಿಕರಾಗಿ ದುಡಿಯಲು ಪ್ರೇರೇಪಿಸಿದ. ಮುಂದೆ ಅದೇ ಜನರು ಅಸ್ಪೃಶ್ಯರಾಗಿ ಜೀವನ ಮಾಡುವ ಪರಿಸ್ಥಿತಿ ಉಂಟಾಯಿತು.

**ಮಾದಿಗ:** ಇವರು ಮೂಲವಾಗಿ ಆಂಧ್ರ ಮತ್ತು ತಮಿಳುನಾಡಿನವರು. ಮಾದಿಗ ಪಂಗಡದವರು ಕೆಲವು ಕಡೆ ಆದಿಜಾಂಬವರು ಎಂದು ಕರೆಸಿಕೊಳ್ಳುವರು. ಅಂದಿನ ಗುಡ್ಡಗಾಡು ಜನರ ನಾಯಕನು ಮತ್ತು ಮಹಾಭಾರತದ ಜಾಂಬವ ಎಂಬ ಮಹಾಮುನಿ ಸಂತತಿಯವರು ತಾವು ಎಂಬುದಾಗಿ ಇವರ ನಂಬಿಕೆ. ಭಾರತದ ಕ್ರಿ. ಶ. 1891ರ ಜನಗಣತಿಯ ವರದಿಯಲ್ಲಿ ಮಾದಿಗರನ್ನು 'ಮಾತಂಗ ಬ್ರಾಹ್ಮಿನ್ಸ್' ಎಂದು ಹೆಸರಿಸಲಾಗಿದೆ. ಆಂಧ್ರ ಮತ್ತು ಕರ್ನಾಟಕದಲ್ಲಿ ಇವರನ್ನು ಮಾದಿಗರೆಂದು ಕರೆದರೆ ತಮಿಳುನಾಡಿನಲ್ಲಿ 'ಚಕ್ಕಲಿಯಾನ್' ಎನ್ನುತ್ತಾರೆ. ಮೂಲವಾಗಿ ಇವರು ಶಕ್ತಿ ದೇವತೆಯ ಆರಾಧಕರು.

ಮಾರಿಯಮ್ಮ, ದುರ್ಗಾದೇವಿ, ಮಹಾಕಾಳಿ ಎಂಬ ಪಾರ್ವತೀದೇವಿಯ ಅವತಾರ ಹಾಗೂ ಅವಳಿಂದ ಉದ್ಭವವಾದ ದೇವತೆಗಳನ್ನು ಆರಾಧಿಸುವುದರಿಂದ ಮಾತಂಗಿ ಮಕ್ಕಳೆಂದು ಇವರನ್ನು ಕರೆಯಲಾಯಿತು ಎಂಬುದಾಗಿ ಇತಿಹಾಸಕಾರರ ಅಭಿಪ್ರಾಯವಿದೆ. ಪೂರ್ವದಲ್ಲಿ ಮಾದಿಗರು ಕೆಲವು ಕಡೆ ರಾಜ್ಯವಾಳುತ್ತಿದ್ದರು ಎಂಬ ಉಲ್ಲೇಖಗಳಿವೆ. ಕರ್ನಾಟಕದ ಕೆಲವು ಕಡೆ ಇವರಲ್ಲಿ ಹೆಸರಾಂತ ವೀರ ಪರಾಕ್ರಮಿಗಳು ಇದ್ದು ಅನೇಕ ಪ್ರದೇಶಗಳನ್ನು ಗೆದ್ದು ಅರಸರಾಗಿ ರಾಜ್ಯಭಾರ ಮಾಡುತ್ತಿದ್ದರೆಂದು ಇತಿಹಾಸ ಸಂಶೋಧಕರು ಹೇಳುತ್ತಾರೆ.

ಭಾಗವತ ಪುರಾಣದಲ್ಲಿ ಮಾತಂಗಿಯ ಬಗ್ಗೆ ಈ ರೀತಿಯಾಗಿ ವಿವರಿಸಲಾಗಿದೆ. ಆದಿಪುರಾಣ ಕಾಲದಲ್ಲಿ ಜಮದಗ್ನಿ ಎಂಬ ಮಹಾಋಷಿಗೆ ರೇಣುಕಾ ದೇವಿ ಎಂಬ ಮಹಾಪತಿವ್ರತಾ ಪತ್ನಿ ಇದ್ದಳು. ಅವಳು ದಿನವೂ ತನ್ನ ಪತಿಯ ಪೂಜೆಗೆ ನೀರು ತರಲು ಸಮೀಪದ ನರ್ಮದಾ ನದಿಗೆ ಹೋಗಿ ಬರುತ್ತಿದ್ದಳು. ದಿನವೂ ಸ್ನಾನ ಮಾಡಿ ನದಿಯ ದಡದ ಮರಳಿನಿಂದ ಗಡಿಗೆಯನ್ನು ಮಾಡಿ ಪೂಜೆಗೆ ನೀರು ತರುತ್ತಿದ್ದಳು. ಒಂದು ದಿನ ಎಂದಿನಂತೆ ನೀರು ತರಲು ತನ್ನ ಸಂಗಾತಿಯಾದ (ರಕ್ಷಕಿ) ಮಾದಿಗರ ಹೆಣ್ಣಿನ ಜತೆ ನದಿಯಲ್ಲಿ ಸ್ನಾನ ಮಾಡುತ್ತಿರುವಾಗ ಆಕಾಶ ಮಾರ್ಗದಲ್ಲಿ ಚಿತ್ರಾಂಗದನೆಂಬ ಗಂಧರ್ವನು ಹೋಗುವುದನ್ನು ನೋಡಿ ಆತನ ರೂಪಕ್ಕೆ ಮಾರುಹೋಗಿ ಅರೆಕ್ಷಣ ಚಂಚಲಗೊಂಡಳು. ಇದರಿಂದಾಗಿ ತನ್ನ ಪತಿವ್ರತಾ ಶಕ್ತಿಯಿಂದ ಮಾಡುತ್ತಿದ್ದ ಮರಳಿನ ಗಡಿಗೆಯನ್ನು ಆ ದಿನ ಮಾಡಲು ಸಾಧ್ಯವಾಗದೇ ಹೋಯಿತು. ರೇಣುಕಾದೇವಿ

ದುಃಖಿತಳಾಗಿ ಮಾದಿಗರ ಹೆಣ್ಣಿನ ಜೊತೆಗೆ ಆಶ್ರಮಕ್ಕೆ ಬಂದು ಪತಿಯ ಮುಂದೆ ಕೈಜೋಡಿಸಿ ನಿಂತಳು. ಜಮದಗ್ನಿ ಋಷಿಯು, ತನ್ನ ಪತ್ನಿ ಬರೀ ಕೈಯಲ್ಲಿ ಬಂದುದನ್ನು ನೋಡಿ ಕುಪಿತನಾಗಿ ತನ್ನ ಮಗನಾದ ಪರಶುರಾಮನನ್ನು ಕರೆದು ನಡೆದ ವೃತ್ತಾಂತವನ್ನು ತಿಳಿಯಲು ನದಿಯ ಹತ್ತಿರಕ್ಕೆ ಕಳುಹಿಸಿದನು.

ಪರಶುರಾಮನು ನದಿಯ ಹತ್ತಿರಕ್ಕೆ ಹೋಗಿ ಬಂದು ನಡೆದ ವೃತ್ತಾಂತವನ್ನು ತನ್ನ ತಂದೆಗೆ ನಿವೇದಿಸಿದನು. ಋಷಿಯು ಕೋಪಗೊಂಡು, ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವಾಗಬೇಕೆಂದು ರೇಣುಕಾದೇವಿಯ ತಲೆ ಕಡಿಯಲು ಆಜ್ಞಾಪಿಸಿದನು. ಪರಶುರಾಮನು ತನ್ನ ತಂದೆಯ ಆಜ್ಞೆಯಂತೆ ನದಿಯ ಹತ್ತಿರಕ್ಕೆ ತಾಯಿಯನ್ನು ಕರೆದುಕೊಂಡು ಹೋಗಿ ಅವಳ ಶಿರಚ್ಛೇದ ಮಾಡಿ, ತಾಯಿಯ ಜೊತೆಗೆ ಬಂದಿದ್ದ ಮಾದಿಗರ ಹೆಣ್ಣಿನ ತಲೆಯನ್ನೂ ಕಡಿದು ಬಂದನು. ಮಗನ ಕರ್ತವ್ಯ ಪಾಲನೆಗೆ ಮೆಚ್ಚಿ ಮಗನನ್ನು ಬೇಕಾದ ವರ ಕೇಳಿಕೊಳ್ಳುವಂತೆ ಜಮದಗ್ನಿ ಋಷಿ ಹೇಳಿದನು. ಕೂಡಲೆ ಪರಶುರಾಮನು ತನ್ನ ತಾಯಿಯನ್ನು ಬದುಕಿಸಿಕೊಡಬೇಕೆಂದು ವರ ಕೇಳಿದ. ಋಷಿಯು ತನ್ನ ಪವಿತ್ರ ಕಮಂಡಲದ ಜಲವನ್ನು ಕೊಟ್ಟು ಅವಳ ದೇಹದ ಮೇಲೆ ಚಿಮುಕಿಸುವಂತೆ ತಿಳಿಸಿದ. ಪರಶುರಾಮನು ಬೆಳಗಿನ ಜಾವದ ಅರೆಕತ್ತಲೆಯಲ್ಲಿ ತನ್ನ ತಾಯಿಯ ದೇಹವನ್ನು ಸರಿಯಾಗಿ ಗುರುತಿಸಲಾಗದೆ ಮಾದಿಗರ ಹೆಣ್ಣಿನ ತಲೆಯನ್ನು ತನ್ನ ತಾಯಿಯ ದೇಹಕ್ಕೆ ಜೋಡಿಸಿ ಪವಿತ್ರ ನೀರನ್ನು ದೇಹದ ಮೇಲೆ ಚಿಮುಕಿಸಿದ. ಕೂಡಲೇ ಜೀವ ಬಂದಿತು. ಆದರೆ ತಾಯಿಯ ದೇಹದಲ್ಲಿ ಆದ ವ್ಯತ್ಯಾಸವನ್ನು ಕಂಡು ಅವನು ಚಿಂತಿತನಾದ. ಆನಂತರ ತನ್ನ ತಾಯಿಯ ತಲೆಯನ್ನು ಮಾದಿಗರ ಹೆಣ್ಣಿನ ದೇಹಕ್ಕೆ ಜೋಡಿಸಿ ನೀರನ್ನು ಚಿಮುಕಿಸಿ ಅವಳಿಗೂ ಜೀವದಾನ ನೀಡಿ ಇಬ್ಬರನ್ನೂ ಋಷಿಯ ಬಳಿಗೆ ಕರೆದು ತಂದು ಪ್ರಮಾದವಶಾತ್ ನಡೆದ ತಪ್ಪಿಗೆ ತಂದೆಯಲ್ಲಿ ಕ್ಷಮೆ ಯಾಚಿಸಿದನು.

ಋಷಿಯು ಅವರಿಬ್ಬರನ್ನೂ ಸ್ವೀಕರಿಸಿ ಕಡೆಗೆ ಮಾದಿಗರ ಹೆಣ್ಣಿನ ಪ್ರಾರ್ಥನೆಯಂತೆ ಅವಳನ್ನು ದೇವತೆಯಾಗುವಂತೆ ಅವಳಲ್ಲಿ ದೈವಿಕ ಶಕ್ತಿ ಉಂಟಾಗಲು ವರ ನೀಡಲಾಯಿತು. ಅವಳು ಮುಂದೆ ಮಾತಂಗಿ ಎಂಬ ಹೆಸರಿನಿಂದ ಮಾದಿಗರ ಆರಾಧ್ಯ ದೇವತೆಯಾದಳು.

**ಪರಯ:** ಇವರು ಮೂಲವಾಗಿ ತಮಿಳುನಾಡು ಮತ್ತು ಕೇರಳದವರು. ಮದುವೆ, ಹಬ್ಬ, ಉತ್ಸವ ಸಮಾರಂಭಗಳಲ್ಲಿ ಒಂದು ತರಹದ ಚರ್ಮದ ಡೋಲನ್ನು ಬಾರಿಸುವುದು ಇವರ ಕುಲಕಸುಬು. ಆ ಡೋಲಿಗೆ ತಮಿಳಿನಲ್ಲಿ ಪರೆಯ (Parai) ಎಂದು ಕರೆಯುತ್ತಿದ್ದು, ಇದನ್ನು ಹೆಚ್ಚಾಗಿ ಬಾರಿಸುತ್ತಿದ್ದುದರಿಂದ ಇವರನ್ನು 'ಪರಯನ್' ಎಂದು ಕರೆಯಲಾಯಿತೆಂದು ಹೇಳಲಾಗಿದೆ. ವಿ. ಸಿ. ಕ್ಲೇಟನ್ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಕೇರಳದಲ್ಲಿ ಇವರನ್ನು ಪುಲಿಯನ್ ಎಂದು ಕರೆಯುತ್ತಿದ್ದರು. 'ಪೆರಿಯ ಪುರಾಣ' ಎಂಬ ತಮಿಳು ಗ್ರಂಥದಲ್ಲಿ ಪುಲಿಯನ್ ಎಂಬ ಪಂಗಡದವರು ತಮಿಳು ದೇಶದಲ್ಲಿ ರಾಜರಾಗಿದ್ದರು ಎಂದು ಹೇಳಲಾಗಿದೆ.

ಎಂ. ಜೆ. ವಾಲ್‌ಹೌಸ್‌ನ ಸಂಶೋಧನೆಯಂತೆ ತಂಜಾವೂರ್ ಜಿಲ್ಲೆಯ ತಿರುವಲ್ಲೂರ್‌ನ ಶಿವ ದೇವಸ್ಥಾನದಲ್ಲಿ ಪರಯನ್ ಪಂಗಡದ ಮುಖ್ಯಸ್ಥನು ಉತ್ಸವದ

ಸಮಯದಲ್ಲಿ ದೇವರು ಸವಾರಿ ಮಾಡುವ ಆನೆಯ ಮೇಲೆ ಕುಳಿತುಕೊಂಡು ದೇವರಿಗೆ ಚಾಮರ ಬೀಸುತ್ತಿದ್ದನು ಎಂದು ವಿವರಿಸಿದ್ದಾನೆ. ಕರ್ನಾಟಕದ ಮೇಲುಕೋಟೆಯ ಬ್ರಹ್ಮದೇವಸ್ಥಾನದ ಉತ್ಸವ ಕಾಲದಲ್ಲಿ ಮುಖ್ಯಗೌರವ ಈ ಪರೆಯ ಪಂಗಡದವರಿಗೆ ಸಲ್ಲುತ್ತಿದ್ದುದಾಗಿ ತಿಳಿದುಬಂದಿದೆ. ಪೂರ್ವದಲ್ಲಿ ತಮಿಳುನಾಡಿನ ತಿರುಚಿನಾಪಲ್ಲಿಯ ಕೆಲವು ದೇವಸ್ಥಾನಗಳಲ್ಲಿ ನಡೆಯುವ ದೈವಾರಾಧನೆಗಳಲ್ಲಿ ದೈವ, ಭೂತಗಳ ಪಾತ್ರಧಾರಿಗಳಾಗಿ ಮುಖಕ್ಕೆ ಮೈಕೈಗಳಿಗೆ ಅಲಂಕಾರಯುತವಾಗಿ ಬಣ್ಣವನ್ನು ಬಳಿದುಕೊಂಡು ಕುಣಿಯುತ್ತಿದ್ದ ಪಂಗಡವೆಂದು ವಿವರಿಸಿದ್ದಾರೆ. ಆಂಧ್ರದಲ್ಲಿ ಇವರಿಗೊಬ್ಬ ರಾಜನಿದ್ದುದಾಗಿಯೂ ತಿಳಿದುಬಂದಿದೆ. ಅವನ ಊರು ರಾಜನಾಡು. ಹೆಸರು ಆದಿರಾಯ ಸೇನ. (ಪಿ. ಕಮಲಾಕ್ಷಿ: ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಇತಿಹಾಸ).

ಕೆಲವು ವೃತ್ತಿಗಳು ಅನುವಂಶಿಕವಾಗಿ ಬಂದಿರುವ ಸಾಧ್ಯತೆಗಳಿವೆ. ಕೌಲಾಲ (ಕುಂಭಾರಿಕೆ), ದೈವಾರಾ/ಪೌಂಜಿಶಥಾ (ಮೀನುಗಾರ) ಮತ್ತು ವನಿಜ್ (ವ್ಯಾಪಾರಿ). ವೈದಿಕ ಸಾಹಿತ್ಯದಲ್ಲಿ 4 ಜಾತಿಗಳು ಎಲ್ಲೆಲ್ಲೂ ಕಾಣಿಸುತ್ತವೆ. ಅಯೋಗವ, ಚಂಡಾಲ, ನಿಷಾದ ಮತ್ತು ಪುಲ್‌ಕಾಸಾ. ಚಂಡಾಲರು ಆರ್ಯನ್ ಮಹಿಳೆಯರು ಮತ್ತು ಶೂದ್ರರಿಗೆ ಹುಟ್ಟಿದವರು ಎನ್ನುವ ಮಾತಿದೆ. ಆದರೆ ಇಷ್ಟು ಸಂಖ್ಯೆಯ ಚಂಡಾಲರು ಹಾಗೇ ಹುಟ್ಟಲು ಹೇಗೆ ಸಾಧ್ಯ ಎನ್ನುವ ಪ್ರಶ್ನೆ ಏಳುತ್ತದೆ, ಅದೂ ಅಂಥ ಕಟ್ಟುನಿಟ್ಟುಗಳಿದ್ದ ಕಾಲದಲ್ಲಿ. ಪುಲ್‌ಕಾಸಾಗಳು ಮತ್ತು ಚಂಡಾಲರನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ ತಿರಸ್ಕರಿಸಿದ ಮನುಷ್ಯರ ಕೀಳಿಗೆ ಎನ್ನಲಾಗಿದೆ. ಇಂಥ ಪದಗಳು ಅನೇಕ ಕಡೆ ಕಂಡುಬರುತ್ತವೆ. ಕ್ಷತ್ರಿಯ ಮಹಿಳೆಯರು ಮತ್ತು ಶೂದ್ರ ಗಂಡಸರ ಮಧ್ಯೆ ಹುಟ್ಟಿದ ಮಕ್ಕಳನ್ನು ನಿಷಾದ ಎಂದು ಕರೆಯಲಾಗಿದೆ (G. S. Ghurye : Caste and Race in India, p-53).

## ಅಧ್ಯಾಯ–9

**ತಾವು ಇರುವ ಕತ್ತಲನ್ನು ಅರಿಯದವರು, ಬೆಳಕಿಗಾಗಿ ಎಂದೂ ಹುಡುಕುವುದಿಲ್ಲ**

**–ಅಂಬೇಡ್ಕರ್.**

# ಅಸ್ಪೃಶ್ಯತೆಯ ಮೂಲ

ಅಸ್ಪೃಶ್ಯತೆಗೆ ಮೂಲ ಜಾತಿಪದ್ಧತಿ, ಜಾತಿಪದ್ಧತಿಗೆ ಮೂಲ ವರ್ಣಾಶ್ರಮ, ವರ್ಣಾಶ್ರಮ ಪದ್ಧತಿಗೆ ಮೂಲ ಮನು ಮತ್ತು ಅವನ ಪೂರ್ವಜರಾದ ಆರ್ಯರು. ಎಲ್ಲಾ ವೇದ ಉಪನಿಷತ್ತು ಪುರಾಣಗಳಲ್ಲಿರುವ ವಿಧಿ ವಿಧಾನ, ಸಾಮಾಜಿಕ ನಿಯಮಗಳೇ ಇದಕ್ಕೆ ಆಧಾರ. ಅಸ್ಪೃಶ್ಯತೆ, ಮೇಲು ಕೀಳು, ಜಾತಿ ಮತ್ತು ಧರ್ಮಗಳೆಂಬ ಅನಿಷ್ಟ ಶನಿಗಳು ನಾಶವಾಗಬೇಕಾದರೆ ಮೂಢನಂಬಿಕೆಗಳ ಜೊತೆಗೆ ದೇವರುಗಳು ಕೂಡ ನಾಶವಾಗಬೇಕು. ಆದರೆ ಇಂದು ಅವುಗಳನ್ನು ನಾಶಮಾಡಬೇಕಾಗಿರುವವರೇ ಅವನ್ನು ಬೆಳೆಸುತ್ತಿರುವುದು ವಿಷಾದದ ಸಂಗತಿಯಾಗಿದೆ. ಸಣ್ಣ ಪುಟ್ಟ ಹಳ್ಳಿಗಳಲ್ಲಿ ದಲಿತರ ಮನೆಗಳು ಪ್ರತ್ಯೇಕವಾಗಿರುವುದರಿಂದ ಅವರು ಏನೇ ನಾಟಕವಾಡಿದರೂ ಅಸ್ಪೃಶ್ಯರೆಂದು ಗೊತ್ತಾಗಿಬಿಡುತ್ತದೆ. ಆದುದರಿಂದ ಅವರು ಜಾತಿಯ ಬಗ್ಗೆ ಸುಳ್ಳು ಹೇಳುವುದೋ, ಸತ್ಯನಾರಾಯಣ ಪೂಜೆ ಮಾಡುವುದೋ, ಬ್ರಾಹ್ಮಣರನ್ನು ಕರೆಸಿ ಅಡಿಗೆ ಮಾಡಿಸುವುದೋ ಸಾಧ್ಯವಿಲ್ಲದ ವಿಷಯವಾಗಿದೆ.

ಆದರೆ ನಮ್ಮ ದಲಿತ ವಿದ್ಯಾವಂತ ಪಟ್ಟಣ, ನಗರವಾಸಿಗಳು, ಸರ್ಕಾರಿ ನೌಕರರು ಮತ್ತು ಕಾರ್ಮಿಕರ ಡಾಂಭಿಕತೆ ವಾಕರಿಕೆ ಹುಟ್ಟಿಸುತ್ತದೆ. ನನ್ನ ಸಹೋದ್ಯೋಗಿಗಳು ಮತ್ತು ಗೆಳೆಯರು ಎಷ್ಟೋ ಸಲ ತಮ್ಮ ಮನೆಗಳಲ್ಲಿ ನಡೆಯುವ ಪೂಜೆ ಪುನಸ್ಕಾರಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವುದರ ಜೊತೆಗೆ ಬ್ರಾಹ್ಮಣರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋದಂತೆ ನಡೆದುಕೊಳ್ಳುತ್ತಿರುವುದು ಹೇಯವೆನಿಸುತ್ತದೆ. ಹುಟ್ಟುಹಬ್ಬಗಳಿಂದ ಹಿಡಿದು ತಿಥಿಗಳವರೆಗೂ ಬ್ರಾಹ್ಮಣರನ್ನೇ ನೆಚ್ಚಿಕೊಂಡು ದಿನನಿತ್ಯ ದೇವರ ಪಟಗಳು ಮತ್ತು ಮಣ್ಣು ಗೊಂಬೆಗಳ ಮುಂದೆ ಕುಳಿತುಕೊಂಡು ಪೂಜೆಗಳನ್ನು ಮಾಡಿದ್ದೂ ಮಾಡಿದ್ದೆ. ವರಗಳನ್ನು ಬೇಡಿದ್ದೂ ಬೇಡಿದ್ದೇ. ಈ ನಾಟಕಗಳೆಲ್ಲ ತಮ್ಮ ನಿಜವಾದ ಜಾತಿಗಳನ್ನು ಮುಚ್ಚಿಡುವುದಕ್ಕಾಗಿಯೇ ಎಂದರೂ ತಪ್ಪಾಗಲಾರದು. ಇದರ ಜೊತೆಗೆ ಹುಲಿ ನೋಡಿ ನರಿ ವಾತ ಇಟ್ಟುಕೊಂಡಂತೆ ನೆರೆಹೊರೆಯವರಲ್ಲಿ ಸಾಲಕ್ಕೆ ಗೋಗರೆಯುತ್ತ ನೆಲ್ಲಿಕಾಯಿ, ಬಿಲ್ವಪತ್ರ, ಮಾವಿನ ಎಲೆ, ಮೋಲ್ಡ್ ಗಣಪತಿಗಳನ್ನು ಕೊಂಡುಕೊಳ್ಳುತ್ತಾ ಸಾಲಗಾರರಾಗುತ್ತಾರೆ. ಮೈಗೆ ಬೂದಿ ಬಳಿದುಕೊಳ್ಳುವುದು, ಹಣೆಗೆ

ತ್ರಿಶೂಲ ಸಿಕ್ಕಿಸಿಕೊಳ್ಳುವುದು, ಜನಿವಾರ ಧರಿಸುವುದು, ಗಂಟೆ, ಜಾಗಟೆ ಬಡಿಯುವುದನ್ನು ಸಹ ಎಷ್ಟೋ ದಲಿತರು ಈಗಾಗಲೇ ರೂಢಿಸಿಕೊಂಡುಬಿಟ್ಟಿದ್ದಾರೆ. ಇವರು ತಮ್ಮ ಮೂಲ ದೇವರುಗಳನ್ನೆಲ್ಲ ಮೂಲೆಗೆ ಇಟ್ಟು ಆರ್ಯ ದೇವರುಗಳ ಭಕ್ತರಾಗಿಬಿಟ್ಟಿದ್ದಾರೆ.

ಒಟ್ಟಿನಲ್ಲಿ ಯಾವುದೋ ಒಂದು ಸಮೂಹ ಸನ್ನಿಗೆ ಒಳಗಾದಂತೆ ನರಳುವ ಈ ವಿದ್ಯಾವಂತ ಸಮೂಹ ಇನ್ನಾದರೂ ಎಚ್ಚೆತ್ತುಕೊಳ್ಳಬೇಕಿದೆ. ಈ ದೇಶದಲ್ಲಿ ತಾವೆಷ್ಟೇ ಸುಸಂಸ್ಕೃತರಾದರೂ, ಎಷ್ಟೋ ದೊಡ್ಡ ಸ್ಥಾನದಲ್ಲಿದ್ದರೂ, ಈ ಸಮಾಜ ಸೃಷ್ಟಿಸಿದ ಅವಮಾನಿತ ಅಸ್ಪೃಶ್ಯ, ಅಂತ್ಯಜ, ಶೂದ್ರಾತಿಶೂದ್ರರು ತಾವು ಎನ್ನುವುದನ್ನು ದಲಿತರು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕಿದೆ.

ಬಡತನ, ರೋಗರುಜಿನ ಮತ್ತು ಮೂಢನಂಬಿಕೆಗಳೇ ತಾಂಡವವಾಡುತ್ತಿರುವ ಹಳ್ಳಿಕೊಂಪೆಗಳಲ್ಲಿ ಅಸ್ಪೃಶ್ಯ ಜನ ಒಂದು ಹೊತ್ತಿನ ಕೂಳಿಗಾಗಿ ಮೈಕೈ ಪರಚಿಕೊಂಡು ಪರದಾಡುತ್ತಿದ್ದು, ಮಕ್ಕಳನ್ನು ಶಾಲೆಗೆ ಕಳುಹಿಸುವುದು ದೂರದ ಕನಸಾಗಿದೆ. ಒಟ್ಟಿನಲ್ಲಿ ಅದು ಹೇಗೋ ಸ್ವಾತಂತ್ರ್ಯದ ನಂತರ ಅಸ್ಪೃಶ್ಯರಲ್ಲೂ ಬೆರಳೆಣಿಕೆಯಷ್ಟು ಜನರು ವಿದ್ಯಾಭ್ಯಾಸವನ್ನು ಪಡೆದುಕೊಂಡಿರುವುದು ಸುಳ್ಳಲ್ಲ. ಸರ್ಕಾರ ನಡೆಸುವ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ಬೋಧನೆಯ ಬಗ್ಗೆಯಾಗಲೀ, ಅಲ್ಲಿ ದೊರಕುವ ಸವಲತ್ತುಗಳ ಬಗ್ಗೆಯಾಗಲೀ ಇಲ್ಲಿ ಚರ್ಚಿಸುವ ಅಗತ್ಯವಿಲ್ಲ, ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಆದಿಕಾಲದಲ್ಲಿ ಮನುಷ್ಯರು ಕೆಲವು ವಸ್ತುಗಳನ್ನು ಮತ್ತು ಮನುಷ್ಯರನ್ನು ಮುಟ್ಟಿದರೆ ಮೈಲಿಗೆ ಆಗುತ್ತದೆ ಎಂದು ನಂಬಿದ್ದರು. ಸಭೆ, ಸಮಾರಂಭಗಳಲ್ಲಿ ಜನರು ಒಟ್ಟಾಗಿ ಕುಡಿಯುವಾಗ ಮತ್ತು ಭೋಜನ ಮಾಡುವಾಗ ಕ್ಷುದ್ರ ಶಕ್ತಿಗಳು ಒಬ್ಬರಿಂದ ಇನ್ನೊಬ್ಬರಿಗೆ ವರ್ಗಗೊಳ್ಳುವುದಾಗಿಯೂ ನಂಬಿದ್ದರು. ಕೆಟ್ಟ ಘಳಿಗೆಯಲ್ಲಿ ಅವು ಹೆಚ್ಚು ತೊಂದರೆಯನ್ನು ಉಂಟುಮಾಡುವುದಾಗಿಯೂ ನಂಬಲಾಗಿತ್ತು. ಮಕ್ಕಳು ಹುಟ್ಟಿದಾಗ, ಹೆಣ್ಣು ಪುಷ್ಪವತಿಯಾದಾಗ, ಹೆಣ್ಣು-ಗಂಡು ಕೂಡಿ ವಾಸಿಸುವಾಗ, ಮರಣದ ಸಂದರ್ಭಗಳಲ್ಲಿ ಮಲಿನ ಉಂಟಾಗುತ್ತದೆ ಎಂದು ನಂಬಲಾಗಿತ್ತು. ಮುಖ್ಯವಾಗಿ ಮನುಷ್ಯನು ಸತ್ತಾಗ ಅವನು ಉಪಯೋಗಿಸುತ್ತಿದ್ದ ಹಾಸಿಗೆ, ಬಟ್ಟೆ ಮತ್ತು ಇತರ ವಸ್ತುಗಳು ಹೆಚ್ಚು ಮಲಿನವಾಗಿದ್ದು ಅವುಗಳನ್ನು ಬೇರೆಯವರು ಉಪಯೋಗಿಸಿದರೆ ತೊಂದರೆ ತಪ್ಪಿದ್ದಲ್ಲ ಎನ್ನುವ ನಂಬಿಕೆಯೂ ಇತ್ತು. ಅನ್ಯ ಜನಾಂಗದ ಜನರನ್ನು ಸಂಪರ್ಕಿಸುವುದು ಎಂದರೆ ತೊಂದರೆಗೆ ಸಿಲುಕಿದಂತೆಯೇ. ದಕ್ಷಿಣ ಆಫ್ರಿಕಾದ ಬತೊಂಗ ಎಂಬ ಜನಾಂಗದವರು ಅನ್ಯ ಜನರಿರುವ ಪ್ರದೇಶಗಳಲ್ಲಿ ತಾವು ಓಡಾಡುವುದು ಮತ್ತು ತಮ್ಮ ಪ್ರದೇಶಗಳಿಗೆ ಬೇರೆಯವರು ಪ್ರವೇಶಿಸುವುದು ಎಂದರೆ ತೊಂದರೆಗೆ ಸಿಲುಕಿಕೊಂಡಂತೆಯೆ ಎಂದು ನಂಬಿದ್ದರು.

ಆಸ್ಟ್ರೇಲಿಯಾದ ಒಂದು ಗಿರಿಜನ ಪಂಗಡ ಇನ್ನೊಂದು ಗಿರಿಜನ ಪಂಗಡವನ್ನು ಸಂಧಿಸುವಾಗ ಗಾಳಿಯನ್ನು ಶುದ್ಧಗೊಳಿಸಲು ಉರಿಯುವ ಬೆಂಕಿ ಕೊಳ್ಳಿಗಳನ್ನು ಕೊಂಡೊಯ್ಯುತ್ತಿದ್ದುದಾಗಿ ತಿಳಿದುಬರುತ್ತದೆ. ಅನ್ಯಜನರು ಮನೆ ಪ್ರವೇಶಿಸುವಾಗ ಅಥವಾ ಮನೆಯವರು ದೂರದ ಪ್ರದೇಶಗಳಿಗೆ ಹೋಗಿ ಬಂದಾಗ ಕೈಕಾಲು, ಮುಖವನ್ನು ತೊಳೆದುಕೊಂಡು ಚಪ್ಪಲಿಗಳನ್ನು ಮನೆ ಹೊರಗಡೆ ಬಿಟ್ಟು ಒಳಕ್ಕೆ ಪ್ರವೇಶಿಸುವುದುಂಟು. ಇದರಿಂದ ಅವರೊಳಗಿರುವ ಅಥವಾ ಅವರ ಮೂಲಕ ಬರುವ

ಕ್ಷುದ್ರ ಶಕ್ತಿಗಳು ಮನೆಯ ಒಳಕ್ಕೆ ಪ್ರವೇಶಿಸದೆ ಹೊರಗಡೆಯೇ ಉಳಿದುಕೊಳ್ಳುತ್ತವೆ ಎನ್ನುವ ನಂಬಿಕೆಯೇ ಇದಕ್ಕೆ ಕಾರಣ. ಕ್ಷುದ್ರ ಶಕ್ತಿಗಳು ಮನೆಯ ಒಳಕ್ಕೆ ಪ್ರವೇಶಿಸದಂತೆ ತಡೆಯಲು ನೀರು ಮತ್ತು ರಕ್ತವನ್ನು ಬಾಗಿಲ ಮುಂದೆ ಚಿಮುಕಿಸುವ ಪರಿಪಾಟವೂ ಉಂಟು. ಕೆಲವೊಮ್ಮೆ ಕುದುರೆ ಲಾಳಗಳನ್ನು ಬಾಗಿಲು ಅಥವಾ ಬಾಗಿಲ ಚೌಕಟ್ಟಿನ ಮೇಲೆ ಹೊಡೆಯುವುದು ಕೂಡ ದುಷ್ಟ ಶಕ್ತಿಗಳನ್ನು ಮನೆಯ ಒಳಗೆ ಬರದಂತೆ ತಡೆಯುವ ಸಲುವಾಗಿಯೇ. ಯಾರಾದರೂ ಸತ್ತರೆ ಸತ್ತ ಹೆಣವನ್ನು ಮತ್ತು ಅವನ ಸಂಬಂಧಿಗಳನ್ನು ಬೇರೆಯವರು ಸ್ಪರ್ಶಿಸುವಂತಿಲ್ಲ. ಇದನ್ನು ಸಾರ್ವಜನಿಕವಾಗಿ ತೋರಿಸಿಕೊಳ್ಳಲು ಕೂದಲು ಮತ್ತು ಉಗುರುಗಳನ್ನು ಕತ್ತರಿಸದೇ ಬೆಳೆಸಿಕೊಳ್ಳುವ ಪರಿಪಾಟವೂ ಉಂಟು. ಹೆಂಡತಿ ಬಸುರಿಯಾದರೆ ಗಂಡಸರು ಕ್ಷೌರ ಮಾಡಿಕೊಳ್ಳದೆ ಕೂದಲನ್ನು ಬೆಳೆಸಿಕೊಳ್ಳುವರು. ಆದಿಕಾಲದ ಈ ಆಚಾರಗಳೆಲ್ಲ ಮೂಲವಾಗಿ ಮಲಿನದ ಹೆಸರಿನಲ್ಲಿ ಪ್ರಾರಂಭವಾದವು. ಮೇಲಿನ ವಿಷಯಗಳನ್ನು ವಿಶ್ಲೇಷಿಸಿದಾಗ ಹಿಂದೂಗಳು ಮತ್ತು ಬೇರೆ ಜನಾಂಗಗಳ ನಡುವೆ ಮೈಲಿಗೆ ವಿಷಯದಲ್ಲಿ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಮನುಸ್ಮೃತಿಯಲ್ಲಿ ದೈಹಿಕ ಮತ್ತು ಭಾವನಾತ್ಮಕ ಬಹಿಷ್ಕೃತೆಯನ್ನು ವಿವರಿಸಲಾಗಿದೆ.

ಮನುವಿನ ನಿಯಮಗಳ ಪ್ರಕಾರ ಹುಟ್ಟು, ಸಾವು ಮತ್ತು ಋತುಮತಿಯಾದ ಹೆಣ್ಣು ಮಲಿನದ ಮೂಲಗಳು. ಸಾವು ಸಂಭವಿಸಿದಾಗ ಅವರ ಸಂಬಂಧಿಗಳಿಗೆ ಬಹಿಷ್ಕೃತೆಯನ್ನು ಹೇರುತ್ತಿದ್ದು ಅವರನ್ನು ಸಪಿಂಡರು ಮತ್ತು ರಕ್ತದಾಯಾದಿಗಳು ಎನ್ನುತ್ತಿದ್ದರು. ಸಂಬಂಧಿಗಳಲ್ಲದೆ ಅವರ ಆಚಾರ್ಯ, ಕುಟುಂಬ, ಸ್ನೇಹಿತರು, ಆ ದೇಶದ ರಾಜ ಮತ್ತು ಶವವನ್ನು ಹೊತ್ತೊಯ್ಯುವವರು ಸಹ ಬಹಿಷ್ಕೃತರಾಗುತ್ತಿದ್ದರು. ಆದರೆ ಯಜ್ಞಗಳನ್ನು ನಡೆಸುವ ರಾಜರು ಮತ್ತು ಬ್ರಾಹ್ಮಣರಿಗೆ ಇದು ಅನ್ವಯಿಸುತ್ತಿರಲಿಲ್ಲ. ರಾಜನು ಹಲವು ದೇವರುಗಳ ಆಶೀರ್ವಾದ ಪಡೆದವನಾಗಿದ್ದರೆ ಬ್ರಾಹ್ಮಣ ಎಂದೆಂದೂ ಶ್ರೇಷ್ಠ ಎನ್ನುವುದನ್ನು ಮನುಸ್ಮೃತಿಯಲ್ಲಿ ವಿವರಿಸಲಾಗಿದೆ. ಹುಟ್ಟು, ಸಾವು, ಋತುಮತಿ ಯಾಗುವ ವಿಷಯ ಎಲ್ಲರಲ್ಲೂ ಸಾಮಾನ್ಯವಾದರೂ ಮಲಿನ ಎನ್ನುವ ವಿಷಯ ಮನುವಿನ ಪ್ರಕಾರ ಬ್ರಾಹ್ಮಣರನ್ನು ಬಿಟ್ಟು ಮಿಕ್ಕವರಿಗೆ ಅನ್ವಯಿಸುತ್ತದೆ. ಮನುಸ್ಮೃತಿಯ ಪ್ರಕಾರ ಋತುಮತಿಯಾದ ಬ್ರಾಹ್ಮಣರ ಹೆಣ್ಣು ಮಕ್ಕಳೂ ಸಹ ಶೂದ್ರರಿಗೆ ಸಮಾನರು.

ಈ ಮಲಿನವನ್ನು ಹೋಗಲಾಡಿಸುವ ವಸ್ತುಗಳು ನೀರು, ಮಣ್ಣು, ಗೋಮೂತ್ರ, ಹುಲ್ಲು ಮತ್ತು ಬೂದಿ. ಇವುಗಳಲ್ಲಿ ಮುಖ್ಯವಾದುದು ನೀರು. ನೀರಿನಿಂದ ಕೈಕಾಲು ಮತ್ತು ಮುಖವನ್ನು ತೊಳೆದುಕೊಳ್ಳುವುದರಿಂದ ಅಥವಾ ಸ್ನಾನ ಮಾಡುವುದರಿಂದ ಮಲಿನತೆ ನಾಶವಾಗುತ್ತದೆ. ಗೋವನ್ನು ಸ್ಪರ್ಶಿಸುವುದರಿಂದ ಮತ್ತು ನೀರು ಕುಡಿದು ಸೂರ್ಯನನ್ನು ವೀಕ್ಷಿಸುವುದರಿಂದಲೂ ಮಲಿನತೆ ಹೋಗುವುದಾಗಿ ಮನು ಹೇಳುತ್ತಾನೆ. ಇನ್ನು ಸಾಮೂಹಿಕ ಮಲಿನವನ್ನು ದೂರ ಮಾಡಲು ಪುರಾಣಕಾಲದ ರೋಮನರಂತೆ ಹಿಂದೂಗಳು ಪ್ರತಿ ಹಳ್ಳಿಯಲ್ಲೂ ವಾರ್ಷಿಕ ಜಾತ್ರೆಗಳನ್ನು ನಡೆಸುತ್ತಾರೆ. ಈಗಲೂ ಎಷ್ಟೋ ಹಳ್ಳಿಗಳಲ್ಲಿ ಕೋಣಗಳನ್ನು ಕಡಿದು ರಕ್ತವನ್ನು ಹಳ್ಳಿಯ ಸುತ್ತಲೂ, ಮನೆಯ ಬಾಗಿಲುಗಳ ಮುಂದೆ, ಸಾಕು ಪ್ರಾಣಿಗಳ ಮೇಲೆ ಮತ್ತು ಹೊಲಗದ್ದೆ ಬೆಳೆಗಳ ಮೇಲೆ ಚಿಮುಕಿಸುತ್ತಾರೆ. ಅದರ ಕಾಲಿನ ಭಾಗದ ಮಾಂಸವನ್ನು ಎಲ್ಲರಿಗೂ ಹಂಚುವ

ಪರಿಪಾಟ ಎಷ್ಟೋ ಕಡೆಗಳಲ್ಲಿ ಇರುವುದಾಗಿ ತಿಳಿದುಬರುತ್ತದೆ. ಗೋಮಾಂಸ ತಿನ್ನದವರು ಸಹ ಅದರ ಪಾಲನ್ನು ಕಡ್ಡಾಯವಾಗಿ ಪಡೆಯಬೇಕು. ಈ ಆಚಾರವನ್ನು ಹಿಂದೂಗಳು ತಲೆತಲಾಂತರದಿಂದ ನಂಜಿಕೊಂಡು, ನಡೆದುಕೊಳ್ಳುತ್ತಾ ಬಂದಿದ್ದಾರೆ.

ಮೊದಲೇ ಹೇಳಿದಂತೆ ಮೇಲಿನ ಆಚಾರ ವಿಚಾರಗಳನ್ನು ಅನಾದಿಕಾಲದ ಹಲವು ಸಮಾಜಗಳು ನಡೆಸಿಕೊಂಡು ಬಂದಿದ್ದರೂ, ಹಿಂದೂಗಳು ಮಾತ್ರ ಆನುವಂಶಿಕವಾಗಿ ಹುಟ್ಟಿನ ಆಧಾರದಿಂದ ಅಸ್ಪೃಶ್ಯತೆಯನ್ನು ಆಚರಣೆಗೆ ತಂದಿರುವುದು ನಮಗೆ ಗೋಚರವಾಗುತ್ತದೆ. ಅಂತಹವರ ಪಟ್ಟಿಯನ್ನು 1935ರಲ್ಲಿ ಭಾರತ ಸರಕಾರ ಪ್ರಕಟಿಸಿತು. ಆ ಪಟ್ಟಿಯ ಪ್ರಕಾರ ದೇಶದಲ್ಲಿ ಒಟ್ಟು 429 ಅಸ್ಪೃಶ್ಯರ ಪಂಗಡಗಳಿವೆ.

ಕಾಲಾಂತರದಲ್ಲಿ ಪ್ರಪಂಚದ ಮೂಲೆ ಮೂಲೆಗಳಲ್ಲಿದ್ದ ಮಲಿನತೆಯ ಭಾವನೆಗಳು ದೂರವಾದರೂ ಹಿಂದೂಗಳ ಮಧ್ಯದಲ್ಲಿ ಮೂಡಿದ ಮಲಿನತೆಯ ಭಾವವು ಮುಂದೆ ಅಸ್ಪೃಶ್ಯತೆಯಾಗಿ ರಾಕ್ಷಸನಂತೆ ಬೆಳೆದುನಿಂತಿತು. ಆನುವಂಶಿಕ ಅಸ್ಪೃಶ್ಯತೆ ಹಿಂದೂಗಳ ನಡುವೆ ಬೆಳೆಯುತ್ತಾ ಹೋಗಿ ಇಂದು ಭಾರತದ ಜನಸಂಖ್ಯೆಯಲ್ಲಿ ಕಡಿಮೆಯೆಂದರೂ ಪ್ರಸ್ತುತ ಹದಿನೈದು ಕೋಟಿ ಅಸ್ಪೃಶ್ಯರಿದ್ದಾರೆ. ಇವರು ತಮ್ಮ ಸುತ್ತಮುತ್ತಲಿರುವ ಕಲ್ಲು, ಮರಗಿಡಗಳು, ಯಾವುದೇ ವಸ್ತುಗಳನ್ನು ಮುಟ್ಟಿದರೂ ಅವು ಮೈಲಿಗೆಯಾಗಿಬಿಡುತ್ತವೆ. ಇದಕ್ಕೆ ಸರಿಸಮಾನವಾಗುವಂತಹ ಉದಾಹರಣೆಗಳು ಪ್ರಪಂಚದ ಯಾವ ಸಮಾಜ ಗಳಲ್ಲಿಯೂ ಕಾಣಸಿಗುವುದಿಲ್ಲ. ಆದಿಕಾಲದ ಹಲವು ಸಮಾಜಗಳಲ್ಲಿ ಸಾಮಾಜಿಕ ಬಹಿಷ್ಕಾರವನ್ನು ತಾತ್ಕಾಲಿಕವಾಗಿ ಕುಡಿಯುವಾಗ, ತಿನ್ನುವಾಗ ಕೆಲವೊಮ್ಮೆ ಹುಟ್ಟು, ಸಾವು ಮುಂತಾದ ಸಂದರ್ಭಗಳಲ್ಲಿ ಆಚರಣೆಗೆ ತಂದಿದ್ದರು. ಈ ಸಂದರ್ಭಗಳು ಮುಗಿದ ನಂತರ ಎಲ್ಲರೂ ಮತ್ತೆ ಒಂದಾಗಿ ಸಾಮೂಹಿಕ ಜೀವನ ಎಂದಿನಂತೆ ಮುಂದುವರಿಯುತ್ತಿತ್ತು. ಆದರೆ ಹಿಂದೂ ಸಮಾಜದಲ್ಲಿ ಅದಾಗಲಿಲ್ಲ. ಹುಟ್ಟಿನಿಂದ ಸಾಯುವವರೆಗೆ ಅಸ್ಪೃಶ್ಯರಾಗಿಯೇ ಉಳಿದುಕೊಂಡ ಇವರು ಅಸ್ಪೃಶ್ಯ ಮಕ್ಕಳನ್ನು ಮಾತ್ರ ಹುಟ್ಟಿಸುವಂತಾದರು. ಹಿಂದೂಗಳು ಅಸ್ಪೃಶ್ಯರನ್ನು ಬಹಿಷ್ಕರಿಸಿ ಪ್ರತ್ಯೇಕ ಸ್ಥಳಗಳಲ್ಲಿ ವಾಸಿಸಲು ಒತ್ತಾಯ ಮಾಡಿದರು. ಅಸ್ಪೃಶ್ಯತೆ ಹಿಂದೂ ಸಮಾಜದ ಒಂದು ಮೂಲಭೂತ ಬೆಳವಣಿಗೆಯಾಗಿ ಪರಿವರ್ತನೆಯಾಯಿತು. ಹಿಂದೂಗಳು ಹಳ್ಳಿಯ ಒಳಗೆ ವಾಸಿಸ ತೊಡಗಿದರೆ, ಅಸ್ಪೃಶ್ಯರು ಹಳ್ಳಿಯ ಹೊರಗೆ ವಾಸಿಸತೊಡಗಿದರು. ಇಡೀ ದೇಶದಲ್ಲಿ ಕರ್ನಾಟಕ ಪ್ರಗತಿ ಹೊಂದಿದ ರಾಜ್ಯ ಎಂದು ಬಿಂಬಿಸಲಾಗಿದೆ. ವಿಪರ್ಯಾಸ ವೆಂದರೆ ಕರ್ನಾಟಕದಲ್ಲಿ ಇಂದಿಗೂ ನೂರಕ್ಕೆ 94 ಗ್ರಾಮೀಣ ದೇವಾಲಯಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ಇಲ್ಲ ಎನ್ನುವ ಸ್ಫೋಟಕಾರಕ ವಿಷಯ ಗೊತ್ತಾಗಿದೆ. ಅಷ್ಟೇ ಅಲ್ಲ ಕೆರೆ, ಕುಂಟೆಗಳಲ್ಲೂ ಅವರು ನೀರು ತೆಗೆದುಕೊಳ್ಳುವಂತಿಲ್ಲ. ಇನ್ನು ಬೇರೆ ರಾಜ್ಯಗಳ ವ್ಯವಸ್ಥೆ ಹೇಗಿರಬೇಕು? ನಮ್ಮ ಮಾನಸಿಕ ಸಾಮಾಜಿಕ ಅಭಿವೃದ್ಧಿ ಎಲ್ಲಿಗೆ ತಲುಪಿದೆ ನೋಡಿ.

## ಅಸ್ಪೃಶ್ಯರು ಹಳ್ಳಿಯ ಹೊರಗೆ

ಹಿಂದೂಗಳಿರುವ ಯಾವುದೇ ಭಾರತದ ಹಳ್ಳಿಯಲ್ಲಿ ಇಂದಿಗೂ ಅಸ್ಪೃಶ್ಯರು ಹಳ್ಳಿಯ ಹೊರಗೆ ಜೀವಿಸುತ್ತಿರುವುದು ಸತ್ಯ. ಇದೊಂದು ಸಾಮಾಜಿಕ ದುರ್ವರ್ತನೆಯ ಅತ್ಯಂತ ಕೆಟ್ಟ ವಿಚಾರವಾದರೂ ಇಂದಿಗೂ ಇದರ ಬಗ್ಗೆ ಸಮಾಜದಲ್ಲಿ ಪ್ರಶ್ನೆ ಏಳದೇ ಇರುವುದು

ಖೇದದ ವಿಷಯವಾಗಿದೆ. ಅಸ್ಪೃಶ್ಯರು ಯಾಕಾದರೂ ಹಳ್ಳಿಯ ಹೊರವಲಯದಲ್ಲಿ ಜೀವಿಸುತ್ತಾರೆ? ಇವರನ್ನು ಅಸ್ಪೃಶ್ಯರೆಂದು ಗುರುತಿಸಿ ಹಳ್ಳಿಯ ಹೊರಕ್ಕೆ ಕಳುಹಿಸಿದವರು ಯಾರು? ಪ್ರಾಚೀನ ಕಾಲದಿಂದಲೂ ಇವರು ಹಳ್ಳಿಯ ಹೊರಗೆ ಜೀವಿಸುತ್ತಿದ್ದರೆ?

ಇದರ ಬಗ್ಗೆ ಹಿಂದೂ ಧರ್ಮಗಳಲ್ಲಿ ದೊರಕುವ ಕೆಲವು ವಿಚಾರಗಳು ಹೀಗಿವೆ. ಕೆಲವು ಶಾಸ್ತ್ರಗಳಲ್ಲಿ ತಿಳಿಸಿರುವಂತೆ ಅಂತ್ಯಜರು ಹಳ್ಳಿಯ ಹೊರವಲಯದಲ್ಲಿ ಜೀವಿಸಬೇಕು. ಮನುಸ್ಮೃತಿಯ ಅ. 10 ಶ್ಲೋಕ 51ರಲ್ಲಿ ಚಂಡಾಲ ಮತ್ತು ಶ್ವಪಚರು ಅಪಪಾತ್ರರಾಗಿದ್ದು ಅವರು ಹಳ್ಳಿಯ ಹೊರವಲಯದಲ್ಲಿ ಜೀವಿಸಬೇಕು ಮತ್ತು ಅವರ ಐಶ್ವರ್ಯ ನಾಯಿಗಳು ಮತ್ತು ಕತ್ತೆಗಳು ಮಾತ್ರ ಆಗಿರಬೇಕು. ಅ. 10 ಶ್ಲೋಕ 52ರಲ್ಲಿ ಚಂಡಾಲರು ಸತ್ತವರ ವಸ್ತ್ರಗಳನ್ನು ಮಾತ್ರ ಧರಿಸಬೇಕು; ಆಹಾರವನ್ನು ಅವರು ಮುರಿದ ಮಡಿಕೆಯ ಓಡುಗಳಲ್ಲಿ ತಿನ್ನಬೇಕು ಮತ್ತು ಅವರ ಒಡವೆಗಳು ಕಪ್ಪು ಬಣ್ಣದ ಕಬ್ಬಿಣದವು ಮಾತ್ರ ಆಗಿರಬೇಕು. ಅ. 10 ಶ್ಲೋಕ 54ರಲ್ಲಿ ಬೇರೆಯವರು (ಅನಾರ್ಯರು) ಮುರಿದ ಮಡಕೆ ಓಡುಗಳಲ್ಲಿ ರಾತ್ರಿ ಹೊತ್ತು ಮಾತ್ರ ಆಹಾರವನ್ನು ಇವರಿಗೆ ನೀಡಬೇಕೆಂದು ತಿಳಿಸಲಾಗಿದೆ. ಅ. 10 ಶ್ಲೋಕ 55ರಲ್ಲಿ ಅವರು ನಿಗದಿಪಡಿಸಿದ ಕೆಲಸಕ್ಕೆ ಹೋಗಬೇಕಾದರೆ ರಾಜನ ಆಜ್ಞೆಯಂತೆ ಕೆಲವು ಚಿಹ್ನೆಗಳನ್ನು ಧರಿಸಿ ಹೊರಗೆ ಹೋಗಬೇಕು ಮತ್ತು ಸಂಬಂಧಿಗಳಿಲ್ಲದ ಹೆಣಗಳನ್ನು ಹೂಳುವುದು ಅವರ ಕರ್ತವ್ಯ. ಅ. 10 ಶ್ಲೋಕ 56ರಲ್ಲಿ ರಾಜನ ಆಜ್ಞೆಯಂತೆ ಅಸ್ಪೃಶ್ಯರು ಸಮಾಜ ಘಾತುಕರನ್ನು ಕಡಿದು ಅವರ ವಸ್ತ್ರ, ಹಾಸಿಗೆ ಮತ್ತಿತರ ವಸ್ತುಗಳನ್ನು ತೆಗೆದುಕೊಂಡು ಉಪಯೋಗಿಸಿಕೊಳ್ಳಬಹುದು.

ಮನುಸ್ಮೃತಿಯಲ್ಲಿ ಕಾಣಬರುವ ಮೇಲಿನ ಉಲ್ಲೇಖಗಳಿಂದ ಎರಡು ರೀತಿಯ ಅರ್ಥಗಳನ್ನು ನಾವು ಊಹಿಸಿಕೊಳ್ಳಬಹುದು. ಒಂದು, ಅಸ್ಪೃಶ್ಯರು ಹಳ್ಳಿಯ ಹೊರವಲಯದಲ್ಲಿ ಜೀವಿಸಬೇಕು. ಎರಡು, ಸಮಾಜ ಯಾರನ್ನು ಅಸ್ಪೃಶ್ಯರೆಂದು ಗುರುತಿಸಿದೆಯೋ ಅವರು ಹಳ್ಳಿಯ ಒಳಗೆ ಇರಬಾರದು ಎನ್ನುವುದು. ಈ ಎರಡು ರೀತಿಯ ವಿವರಗಳ ಸಾರಾಂಶ ಎರಡು ರೀತಿಯ ಅರ್ಥಗಳನ್ನು ನಮಗೆ ನೀಡುತ್ತದೆ. ಒಂದು ಹಳ್ಳಿಯ ಹೊರಗೆ ಜೀವಿಸುವ ಅಸ್ಪೃಶ್ಯರಿಗೆ ಯಾವ ರೀತಿಯಲ್ಲೂ ಅಸ್ಪೃಶ್ಯತೆ ತಟ್ಟಿರಲಿಕ್ಕಿಲ್ಲ. ಏಕೆಂದರೆ ಮೂಲದಿಂದಲೂ ಅವರು ಹಳ್ಳಿಯ ಹೊರಗೆಯೇ ಜೀವಿಸುತ್ತಿದ್ದು, ಹಿಂದೂಗಳ ಜೊತೆ ಅವರಿಗೆ ಯಾವ ರೀತಿಯ ಸಂಪರ್ಕವೂ ಇರುತ್ತಿರಲಿಲ್ಲ. ಇನ್ನೊಂದು ಅರ್ಥವೆಂದರೆ, ಅಸ್ಪೃಶ್ಯರು ಮೂಲವಾಗಿ ಹಳ್ಳಿಯ ಒಳಗೆ ಜೀವಿಸುತ್ತಿದ್ದು, ಅಸ್ಪೃಶ್ಯತೆಯ ಅಪವಾದ ಅವರ ಮೇಲೆ ಬಿದ್ದಾಗ ಅವರನ್ನು ಹಳ್ಳಿಯಿಂದ ಹೊರಕ್ಕೆ ಕಳುಹಿಸಲಾಯಿತು. ಈ ಎರಡು ವಿವರಣೆಗಳಲ್ಲಿ ಯಾವುದು ಹೆಚ್ಚು ಅರ್ಥಪೂರ್ಣ ಎನ್ನುವುದನ್ನು ಸ್ವಲ್ಪಮಟ್ಟಿಗೆ ವಿಶ್ಲೇಷಿಸಬೇಕಾಗಿದೆ. ಎರಡನೇ ವಿವರಣೆಯನ್ನು ಶುದ್ಧ ಸುಳ್ಳು ಎನ್ನುತ್ತಾರೆ ಅಂಬೇಡ್ಕರ್ ಅವರು.

ಏಕೆಂದರೆ ಈ ಪ್ರಕ್ರಿಯೆ ದೇಶದ ಎಲ್ಲಾ ಹಳ್ಳಿಗಳಲ್ಲೂ ಕಾಣಿಸುವುದರಿಂದ ಅದು ಸಾಧ್ಯವಿಲ್ಲದ ಮಾತು. ಅಸ್ಪೃಶ್ಯರು ಒಮ್ಮೆ ಹಳ್ಳಿಯ ಒಳಗಡೆಯೇ ಜೀವಿಸುತ್ತಿದ್ದು, ಅವರನ್ನೆಲ್ಲ ಒಂದು ಕಾಲದಲ್ಲಿ ಎಲ್ಲಾ ಹಳ್ಳಿಗಳಿಂದಲೂ ಹೊರಕ್ಕೆ ಹಾಕಿದರು ಎನ್ನುವುದಾದರೆ ಅದು ಸಾಧ್ಯವಿಲ್ಲದ ಕೆಲಸ. ಈ ಅಗಾಧ ಕೆಲಸವನ್ನು ಯಾರು ತಾನೇ

ಮಾಡಲು ಸಾಧ್ಯ? ಇಡೀ ಭರತ ಖಂಡವನ್ನು ಆಳಿದ ರಾಜನ ಆಜ್ಞೆ ಮಾತ್ರ ಅದನ್ನು ಮಾಡಲು ಸಾಧ್ಯವಾಗಿರಬೇಕು. ಅವನಿಂದಲೂ ಅಸಾಧ್ಯವಾದ ಕೆಲಸವಿದು, ಅಂತಹ ಹಿಂದೂ ರಾಜರಾರೂ ಈ ಖಂಡವನ್ನು ಆಳಲಿಲ್ಲ.

ಬಹುಶಃ ಮೂಲದಿಂದಲೂ ಅಂದರೆ ಅಸ್ಪೃಶ್ಯರಾಗುವುದಕ್ಕಿಂತ ಮುಂಚಿನಿಂದಲೂ ಹಳ್ಳಿಯ ಹೊರಗೆ ಜೀವಿಸಲು ಪ್ರಾರಂಭಿಸಿದ ಮೇಲೆ ಮಲಿನತೆ ಅಥವಾ ಅಸ್ಪೃಶ್ಯತೆ ಎನ್ನುವ ಅಪವಾದ ಛಿದ್ರಗೊಂಡ ಬಿಡಿಜನಾಂಗಗಳ ಮೇಲೆ ಬಿದ್ದಿರಬೇಕು. ಅನಂತರ ಅವರು ಖಾಯಂ ಆಗಿ ಹಳ್ಳಿಯ ಹೊರಗೆ ಅಸ್ಪೃಶ್ಯರಾಗಿಯೇ ಉಳಿದುಕೊಂಡಿರಬೇಕು. ಈ ವಿವರಣೆ ಕೂಡ ನಮಗೆ ಸಮಂಜಸವಾಗಿ ತೋರುವುದಿಲ್ಲ. ಮೂಲವಾಗಿ ಯಾಕಾದರೂ ಅವರು ಹಳ್ಳಿಯ ಹೊರಗೆ ಜೀವಿಸಲು ಪ್ರಾರಂಭಿಸಿರಬೇಕು, ಯಾವ ಕಾರಣಕ್ಕಾಗಿ ಅವರು ಹಾಗೆ ಮಾಡಬೇಕಾಯಿತು ಎನ್ನುವ ಪ್ರಶ್ನೆಗಳು ಉದ್ಭವಿಸುತ್ತವೆ.

ಮೂಲದಲ್ಲಿ ಎಲ್ಲಾ ಜನಾಂಗಗಳೂ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆದಾಡುವ ಜನಾಂಗಗಳಾಗಿದ್ದವು. ಮೂಲ ರೂಪದ ಸಮಾಜದಲ್ಲಿದ್ದ ಪಂಗಡಗಳು ತಮ್ಮ ಸ್ವಂತ ರಕ್ತ ಸಂಬಂಧದಿಂದ ಕೂಡಿದ ಸಮಾಜಗಳಾಗಿದ್ದವು. ಅವು ಕಾಲಾಂತರದಲ್ಲಿ ಸ್ಥಳೀಯ ಪಂಗಡಗಳಾಗಿ ಒಂದು ಕಡೆ ನೆಲೆಯೂರಿ ಆಧುನಿಕ ಸಮಾಜಗಳಾದವು. ಇಂಗ್ಲಿಷ್ ರಾಜರೆಂದು ಕರೆದುಕೊಳ್ಳುತ್ತಿದ್ದವರು ಇಂಗ್ಲೆಂಡಿನ ರಾಜರಾದಂತೆ ಫ್ರಾಂಕ್ ರಾಜರೆಂದು ಕರೆದುಕೊಳ್ಳುತ್ತಿದ್ದವರು ಮುಂದೆ ಫ್ರೆಂಚ್ ರಾಜರಾದರು.

ಅಲೆಮಾರಿಗಳಾಗಿ ಅಲೆಯುತ್ತಿದ್ದ ಪಂಗಡಗಳ ಐಶ್ವರ್ಯ ಒಂದು ಕಾಲದಲ್ಲಿ ಸಾಕು ಪ್ರಾಣಿಗಳು ಮಾತ್ರ ಆಗಿದ್ದು, ಅವು ಕೂಡ ಅಲೆಯುವ ಸ್ವಭಾವದವಾಗಿದ್ದವು. ಕಾಲಾಂತರದಲ್ಲಿ ಒಂದು ಕಡೆ ನೆಲೆಯೂರಿದ ಪಂಗಡಗಳು ಬೇಸಾಯವನ್ನು ಕಲಿತುಕೊಂಡ ನಂತರ ನೆಲ ಅವರ ಐಶ್ವರ್ಯವಾಯಿತು. ಅವರು ಜೀವಿಸುವ ಸ್ಥಳಗಳು ಹಳ್ಳಿಗಳಾಗಿ ಸುತ್ತಮುತ್ತಲ ಪ್ರದೇಶಗಳು ಫಲವತ್ತಾದ ಹೊಲಗದ್ದೆಗಳಾದವು. ಮೂಲರೂಪದ ಕೆಲವು ಸಮಾಜಗಳು ನೆಲೆಯೂರುವ ಹಂತದಲ್ಲಿದ್ದಾಗ ನೆಲೆಯಿಲ್ಲದೆ ಅಲೆದಾಡುತ್ತಿದ್ದ ಪಂಗಡಗಳು ಅವುಗಳ ಮೇಲೆ ಆಕ್ರಮಣಗಳನ್ನು ನಡೆಸುತ್ತಿದ್ದವು. ಈ ಎರಡೂ ಸಮಾಜಗಳಿಂದ ಬಹಿಷ್ಕೃತಗೊಂಡು, ಛಿದ್ರಗೊಂಡ ಬಿಡಿ ಸಮಾಜಗಳ ಆಕ್ರಮಣವನ್ನು ನೆಲೆಯೂರಿದ ಮತ್ತು ಅಲೆದಾಡುವ ಸಮಾಜಗಳು ಎರಡೂ ಎದುರಿಸ ಬೇಕಾಗಿತ್ತು. ನೆಲೆಯೂರಿದ ಸಮಾಜಗಳು ಅಲೆದಾಡುವ ಸಮಾಜಗಳ ಆಕ್ರಮಣವನ್ನು ತಡೆದುಕೊಳ್ಳಬೇಕಾಗಿದ್ದ ಸಮಯದಲ್ಲಿ ಛಿದ್ರಗೊಂಡಿದ್ದ ಬಿಡಿ ಸಮಾಜಗಳಿಗೆ ಆಶ್ರಯದ ಜೊತೆಗೆ ರಕ್ಷಣೆ ಕೊಡಬೇಕಾಗಿತ್ತು. ಈ ಪ್ರಕ್ರಿಯೆಗಳು ನೂರಾರು ವರ್ಷಗಳ ಕಾಲ ನಡೆಯುತ್ತಲೇ ಇದ್ದು ಎಲ್ಲಾ ಪಂಗಡಗಳು ಒಂದರ ಮೇಲೆ ಒಂದು ದಾಳಿ ಮಾಡುತ್ತಲೇ ತೊಂದರೆಯನ್ನು ಅನುಭವಿಸುತ್ತಿದ್ದವು. ಇದರ ನಡುವೆ ಒಂದು ಪಂಗಡ ಇನ್ನೊಂದು ಪಂಗಡದ ಸಾಕುಪ್ರಾಣಿಗಳನ್ನು ಮತ್ತು ಹೆಣ್ಣುಗಳನ್ನು ಹಾರಿಸಿಕೊಂಡು ಹೋಗುತ್ತಿದ್ದು ಯಾರಿಗೂ ನೆಮ್ಮದಿ ಇಲ್ಲದ ಜೀವನವಾಗಿ ಪರಿಣಮಿಸಿತ್ತು. ಕೆಲವೊಮ್ಮೆ ನೆಲೆಯೂರಿದ ಪಂಗಡಗಳು ಹೆಚ್ಚು ಪ್ರಾಣಹಾನಿಗೆ ಒಳಪಟ್ಟು ಅಳಿದುಳಿದವರು ಛಿದ್ರಗೊಂಡು ಬಿಡಿಗುಂಪುಗಳಾಗಿ ಮಾರ್ಪಡುತ್ತಿದ್ದರು.

ಹೀಗೆ ಛಿದ್ರಗೊಂಡ ಪಂಗಡಗಳು ಹಲವು ಗುಂಪುಗಳಾಗಿ ಬೆಳೆದುನಿಂತವು.

ಮೂಲವಾಗಿ ನೆಲೆಯೂರಿದ್ದ ಪಂಗಡಗಳು ಒಂದೇ ರಕ್ತ ಸಂಬಂಧದಿಂದ ಕೂಡಿದ್ದು, ಛಿದ್ರಗೊಂಡ ಪಂಗಡಗಳು ತಮ್ಮ ಪಂಗಡದೊಳಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ. ಇದರ ನಡುವೆ ನೆಲೆಯೂರಿದ ಒಂದು ಪಂಗಡ ಇನ್ನೊಂದು ಪಂಗಡದ ಜೊತೆ ಯುದ್ಧದಲ್ಲಿ ತೊಡಗಿದ್ದಾಗ ಛಿದ್ರಗೊಂಡವರು ಅತ್ಯಂತ ಅಪಾಯದ ಸ್ಥಿತಿಯಲ್ಲಿ ಜೀವಿಸಬೇಕಾಯಿತು. ಈ ಹಂತದಲ್ಲಿ ಪೂರ್ಣವಾಗಿ ನೆಲೆಯೂರಿದ್ದ ಪಂಗಡಗಳು ಅಲೆದಾಡುವ ಪಂಗಡಗಳ ಕಳ್ಳತನ ಮತ್ತು ಆಕ್ರಮಣಗಳನ್ನು ತಡೆದುಕೊಳ್ಳಬೇಕಾಗಿತ್ತು. ಅದೇ ಸಮಯದಲ್ಲಿ ನೆಲೆಯೂರಿದವರನ್ನು ಮತ್ತು ಅವರ ಸಾಕು ಪ್ರಾಣಿಗಳನ್ನು ರಕ್ಷಿಸಲು ಛಿದ್ರವಾದ ಬಿಡಿಗುಂಪುಗಳು ಒಪ್ಪಿ, ಅದಕ್ಕೆ ಬದಲಾಗಿ ಆಹಾರ ಮತ್ತು ಆಶ್ರಯಗಳನ್ನು ಪಡೆಯುವುದಕ್ಕೆ ಒಪ್ಪಿಕೊಂಡಿರಬೇಕು. ಬಹುಶಃ ಇಲ್ಲಿಂದಲೇ ಎರಡು ಸಮಾಜಗಳು ಇಬ್ಭಾಗವಾಗಿ ವಿಭಜನೆಗೊಂಡಿರಬೇಕು. ಒಂದು ಸಮಾಜ ಹಳ್ಳಿಯ ಒಳಗೆ, ಇನ್ನೊಂದು ಸಮಾಜ ಹಳ್ಳಿಯ ಹೊರಗೆ ಜೀವಿಸಲು ಪ್ರಾರಂಭಿಸಿರಬೇಕು. ಇದರ ಬಗ್ಗೆ ನಿಖರವಾದ ಉಲ್ಲೇಖಗಳು ಎಲ್ಲಿಯೂ ದೊರಕದಿದ್ದರೂ ಈ ವಿವರಣೆಯನ್ನು ತಳ್ಳಿಹಾಕುವಂತಿಲ್ಲ ಎನ್ನುತ್ತಾರೆ ಅಂಬೇಡ್ಕರ್ ಅವರು.

ಎರಡು ಪಂಗಡಗಳೂ ಮೇಲಿನ ವಿಚಾರದಲ್ಲಿ ಸಮ್ಮತಿ ಸೂಚಿಸಿದಾಗ ಛಿದ್ರವಾದ ಬಿಡಿಗುಂಪುಗಳು ತಮ್ಮ ಜೊತೆಯಲ್ಲೇ ಇರಬೇಕೆ ಅಥವಾ ಹಳ್ಳಿಯ ಹೊರಗೆ ಪ್ರತ್ಯೇಕವಾಗಿ ವಾಸಿಸಬೇಕೆ ಎನ್ನುವ ಕಾರಣದಿಂದಲೇ ಗುಂಪು ಕಟ್ಟಿಕೊಂಡಿದ್ದುದಲ್ಲದೆ ಅನ್ಯ ಜನರನ್ನು ತಮ್ಮ ಗುಂಪಿಗೆ ಸೇರಿಸುತ್ತಿರಲಿಲ್ಲ. ಆದುದರಿಂದ ಅವರ ಮುಖ್ಯ ಕೆಲಸ ನೆಲೆಯೂರಿದ ಗುಂಪಿನವರನ್ನು ರಕ್ಷಿಸುವ ಕೆಲಸವಾದ್ದರಿಂದ ಹಳ್ಳಿಯ ಹೊರಗೆ ಬೇರೆಯಾಗಿ ಇರುವುದೇ ಸರಿಯಾದ ಮಾರ್ಗವೆಂದು ತೀರ್ಮಾನವಾಗಿರಬೇಕು. ಹೀಗೆ ಛಿದ್ರವಾದ ಬುಡಕಟ್ಟು ಜನಾಂಗಗಳು ಅಸ್ಪೃಶ್ಯರಾಗಿ ಭಾರತದಾದ್ಯಂತ ಹಳ್ಳಿಗಳ ಹೊರಗೆ ವಾಸಿಸಲು ಪ್ರಾರಂಭಿಸಿದ ಸಮಯದಲ್ಲೇ ಹಿಂದೂ ಸಮಾಜದ ಗುಂಪುಗಳು ಹಳ್ಳಿಗಳನ್ನು ಸ್ಥಾಪಿಸುತ್ತಿದ್ದ ಕಾಲವಾಗಿರಬೇಕು. ಈ ಹಿನ್ನೆಲೆಯಿಂದಲೇ ಅಸ್ಪೃಶ್ಯರು ಮೂಲವಾಗಿ ಅದೇ ಹಳ್ಳಿಗೆ ಸೇರಿದ ಬೇರೆ ಗುಂಪಿನ ಜನರು ಎನ್ನುವ ಅಭಿಪ್ರಾಯ ಮೂಡಿರುವುದು. ಎಷ್ಟೋ ಹಳ್ಳಿಗಳಲ್ಲಿ ಇಂದಿಗೂ ಒಂದೇ ರಕ್ತದ ಗುಂಪಿಗೆ ಸೇರಿದ ಹೆಚ್ಚು ಜನರನ್ನು ನೋಡಬಹುದು. ಇಷ್ಟು ಹೇಳಿದ ಮೇಲೂ ಕೆಲವು ಸಂದೇಹಗಳು ನಮ್ಮನ್ನು ಕಾಡದೇ ಇರುವುದಿಲ್ಲ. ಅಸ್ಪೃಶ್ಯರು ನಿಜವಾಗಿಯೂ ಛಿದ್ರಗೊಂಡ ಬುಡಕಟ್ಟು ಗುಂಪುಗಳೇ? ಹಾಗಾದರೆ ಇದೇ ರೀತಿಯ ಬೆಳವಣಿಗೆಗಳು ಪ್ರಪಂಚದ ಇತರೆ ಪ್ರದೇಶಗಳಲ್ಲಿ ಯಾಕಾದರೂ ಕಾಣಿಸಿಕೊಂಡಿಲ್ಲ? ಛಿದ್ರಗೊಂಡ ಗುಂಪುಗಳಿಂದ ಹುಟ್ಟಿದವರೇ ಅಸ್ಪೃಶ್ಯರು ಎಂದಾದರೆ ಇದನ್ನು ದೃಢೀಕರಿಸಲು ಹಿಂದೂ ಹಳ್ಳಿಯ ಸ್ಪೃಶ್ಯ ಮತ್ತು ಅಸ್ಪೃಶ್ಯ ಸಮುದಾಯಗಳ ಸಂಬಂಧಗಳನ್ನು ಮಾನವ ವಿಜ್ಞಾನದ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅತ್ಯಂತ ಸೂಕ್ತವಾದ ವಿಷಯವಾಗಿದೆ. ಈ ನಿಟ್ಟಿನಲ್ಲಿ ಸರಿಯಾದ ಸಂಶೋಧನೆಗಳು ನಡೆದಾಗ ಮಾತ್ರ ಈ ಅಧ್ಯಾಯದಲ್ಲಿ ಬಂದಿರುವ ಪ್ರಶ್ನೆಗಳಿಗೆ ಸಮರ್ಥವಾದ ಉತ್ತರಗಳನ್ನು ನೀಡಬಹುದಾಗಿದೆ.

ಹಿಂದೂ ಶಾಸ್ತ್ರಗಳಲ್ಲಿ ಕೆಲವು ಸಮಾಜಗಳಿಗೆ ನೀಡಿರುವ ಹೆಸರುಗಳಿಂದ ಸ್ವಲ್ಪ ಮಟ್ಟಿಗೆ ಈ ವಿಷಯದಲ್ಲಿ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಅಂತ್ಯ, ಅಂತ್ಯಜ ಮತ್ತು

ಅಂತ್ಯವಾಸಿ ಎಂಬ ಹೆಸರುಗಳು ಮೂಲವಾಗಿ 'ಅಂತ್ಯ' ಎಂಬ ಪದದಿಂದ ಹುಟ್ಟಿಕೊಂಡಿವೆ. ಹಿಂದೂ ಶಾಸ್ತ್ರಗಳ ಪ್ರಕಾರ ಕೊನೆಯಲ್ಲಿ ಹುಟ್ಟಿದವನು ಅಸ್ಪೃಶ್ಯನು. ಆದರೆ ಅದೇ ವರ್ಣಾಶ್ರಮದ ಕಲ್ಪನೆಯ ಪ್ರಕಾರ ಶೂದ್ರನೇ ಕೊನೆಯದಾಗಿ ಸೃಷ್ಟಿಯಾದವನು. ಹಿಂದೂ ಶಾಸ್ತ್ರಗಳು ಹೇಳುವಂತೆ ಶೂದ್ರ ಸವರ್ಣನಾದರೆ ಅಸ್ಪೃಶ್ಯ ಅವರ್ಣ. ಅಂದರೆ ಅಸ್ಪೃಶ್ಯನು ವರ್ಣಾಶ್ರಮದ ಯೋಜನೆಯ ಕೆಳಗೆ ಬರುವುದಿಲ್ಲ. ಆದರೆ ಇಲ್ಲಿ ಅಂತ್ಯ ಎಂದರೆ ಕೇವಲ ಹಳ್ಳಿಯ ಹೊರಗಡೆ ವಾಸಿಸುವವನು ಎನ್ನುವುದೇ ಸರಿಯಾದ ಅರ್ಥವಿರಬೇಕು. ಹಳ್ಳಿಯ ಹೊರಗೆ ಜೀವಿಸುವುದರಿಂದ ಈ ಪದ ಹುಟ್ಟಿರಬೇಕೇ ವಿನಾ ಅಂತ್ಯ ಎಂದರೆ ಕೊನೆಯಲ್ಲಿ ಸೃಷ್ಟಿಯಾದವನಲ್ಲ.

ಕರ್ನಾಟಕದಲ್ಲಿರುವ ಆದಿಕರ್ನಾಟಕ ಜನರು, ಆಂಧ್ರದಲ್ಲಿರುವ ಆದಿಆಂಧ್ರರು, ಮಾದಿಗ, ತಮಿಳುನಾಡಿನಲ್ಲಿರುವ ಪರಯ ಮತ್ತು ಚಕ್ಕಲಿಯಾನ್ ಮತ್ತು ಮಹಾರಾಷ್ಟ್ರದಲ್ಲಿರುವ ಮಹಾರ್ ಜನಾಂಗಗಳು ಹೆಚ್ಚು ಕಡಿಮೆ ಒಂದೇ ರೀತಿಯ ಕಸುಬುಗಳಲ್ಲಿ ತೊಡಗಿಕೊಂಡಿವೆ. ಮಹಾರಾಷ್ಟ್ರದ ಮಹಾರ್ ಜನಾಂಗಕ್ಕೆ ಬೀದರ್‌ನ ಬಹಮನಿ ಎಂಬ ಮುಸ್ಲಿಂ ರಾಜನೊಬ್ಬನು 52 ಹಕ್ಕುಗಳ ಒಂದು ಸನ್ನದನ್ನು ಬರೆದುಕೊಟ್ಟಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. ಈ ಹಕ್ಕುಗಳು ಮೂಲವಾಗಿ ಬೀದರ್ ರಾಜನಿಂದ ಬಂದುದಲ್ಲ. ಅವು ತಲೆತಲಾಂತರದಿಂದ ಬಂದಿದ್ದು, ಬೀದರ್ ರಾಜನು ಮತ್ತೊಮ್ಮೆ ಕಟ್ಟಾಜ್ಞೆಯಾಗಿ ಪಾಲಿಸುವಂತೆ ಆಜ್ಞೆ ನೀಡಿದ ಹಕ್ಕುಗಳಾಗಿವೆ. ಇವುಗಳಲ್ಲಿ ಮುಖ್ಯವಾದವೆಂದರೆ ಹಳ್ಳಿಯವರಿಂದ ಆಹಾರ ಸ್ವೀಕರಿಸುವುದು, ಧಾನ್ಯಗಳನ್ನು ಸಂಗ್ರಹಿಸಿಕೊಳ್ಳುವುದು ಮತ್ತು ಸತ್ತ ಪ್ರಾಣಿಗಳನ್ನು ಪಡೆದುಕೊಳ್ಳುವುದು. ಈ ಹಕ್ಕುಗಳನ್ನು ಎಲ್ಲಾ ಅಸ್ಪೃಶ್ಯರು ದೇಶದ ಎಲ್ಲಾ ಹಳ್ಳಿಗಳಲ್ಲೂ ಒಂದು ಕಾಲಕ್ಕೆ ಪಡೆಯುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ಇದಕ್ಕೆ ಪ್ರತಿಫಲವಾಗಿ ಅಸ್ಪೃಶ್ಯರು ಬೇರೆಯವರ ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದರು. ಮೇಲೆ ವಿವರಿಸಿದ ಹಲವು ಕಾರಣಗಳ ಆಧಾರದಿಂದ ಹಳ್ಳಿಯ ಹೊರಗಿನವರು ಮೂಲವಾಗಿ ಅಸ್ಪೃಶ್ಯರಲ್ಲ, ಕೇವಲ ಹಳ್ಳಿಯ ಒಳಗಿರುವ ಜನಾಂಗಗಳಿಗೆ ಸೇರಿದ ಬೇರೆ ಬುಡಕಟ್ಟುಗಳ ಜನರೆಂದು ಧಾರಾಳವಾಗಿ ಹೇಳಬಹುದಾಗಿದೆ ಎನ್ನುತ್ತಾರೆ ಅಂಬೇಡ್ಕರ್.

ಮೇಲಿನ ವಿಶ್ಲೇಷಣೆಗೆ ಸರಿಹೊಂದುವಂತಹ ಉದಾಹರಣೆಗಳು ಪ್ರಪಂಚದ ಇತರ ಪ್ರದೇಶಗಳಲ್ಲಿ ಇರಲಿಲ್ಲವೆ, ಇದ್ದರೆ ಅವು ಏಕೆ ಮಾಯವಾದವು? ಸರ್. ಹೆನ್ರಿಮೆನ್ ಆದಿಕಾಲದ ಐರ್‌ಲ್ಯಾಂಡ್‌ನ ಒಂದು ಚಿತ್ರಣವನ್ನು ಹೀಗೆ ವಿವರಿಸಿದ್ದಾನೆ. ಈ ಪ್ರದೇಶದಲ್ಲಿ ಆದಿಕಾಲದಲ್ಲಿ ಐರ್‌ಲ್ಯಾಂಡ್‌ನ ಬುಡಕಟ್ಟು ಜನಾಂಗಗಳು ನೆಲೆಯೂರಿದ್ದಾಗ ಆ ಪ್ರದೇಶ ಎಲ್ಲಾ ಬುಡಕಟ್ಟು ಪಂಗಡಗಳಿಗೂ ಸೇರಿತ್ತು. ಅದರ ಸುತ್ತಲ ಪ್ರದೇಶಗಳಲ್ಲಿ ಹಲವು ಬುಡಕಟ್ಟು ಪಂಗಡಗಳು ನೆಲೆಯೂರಿದ್ದವು. ಮಧ್ಯದಲ್ಲಿ ಮುಖ್ಯಸ್ಥನು ವಾಸವಾಗಿದ್ದು ಮುಂದಕ್ಕೆ ಅವನ ವಂಶಜರು ಆ ಪ್ರದೇಶದಲ್ಲೆಲ್ಲ ಹರಡಿಕೊಳ್ಳುತ್ತಿದ್ದರು. ಸುತ್ತಲೂ ಸಣ್ಣ ಪುಟ್ಟ ಬುಡಕಟ್ಟು ಗುಂಪುಗಳಿದ್ದವು. ಆ ಪ್ರದೇಶವೆಲ್ಲ ಮಧ್ಯದಲ್ಲಿ ವಾಸಿಸುವ ಮುಖ್ಯಸ್ಥ(ರಾಜ)ನಿಗೆ ಸೇರಿದ್ದಾಗಿರುತ್ತಿತ್ತು. ಸುತ್ತಲಿದ್ದವರು ನೆಲದ ಕೆಲಸವನ್ನು ಮಾಡುವುದರ ಜೊತೆಗೆ ರಾಜರ ಸಾಕು ಪ್ರಾಣಿಗಳನ್ನು ಸಹ ನೋಡಿಕೊಳ್ಳುತ್ತಿದ್ದರು. ಇದರ ನಡುವೆ ಆಗಾಗ ಸುತ್ತಲ ಪ್ರದೇಶಗಳಿಂದ ಛಿದ್ರಗೊಂಡ

ಬುಡಕಟ್ಟು ಗುಂಪುಗಳು ಆಶ್ರಯ ಮತ್ತು ರಕ್ಷಣೆಗಾಗಿ ಅಲ್ಲಿಗೆ ಬರುತ್ತಲೇ ಇರುತ್ತಿದ್ದವು.

ಶ್ರೀ ಸಿ. ಭಾಲ್ಮ ಆದಿಕಾಲದ ವೇಲ್ಸ್ ಚಿತ್ರಣವನ್ನು ಇದೇ ರೀತಿಯಾಗಿ ವಿವರಿಸುವುದು ತಿಳಿದುಬಂದಿದೆ. ವೇಲ್ಸ್ ಪ್ರದೇಶಗಳಲ್ಲಿ ಜೀವಿಸುತ್ತಿದ್ದ ಬುಡಕಟ್ಟು ಜನಾಂಗಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಸಮಾಜಗಳಿದ್ದವು. ಒಂದು ವೇಲ್ಸ್ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದ ಸ್ಥಳೀಯ ಬುಡಕಟ್ಟು ಸಮಾಜ. ಎರಡು ಬೇರೆ ಪ್ರದೇಶಗಳಿಂದ ಬಂದವರು ಮತ್ತು ಅವರ ರಕ್ತಸಂಬಂಧಕ್ಕೆ ಒಳಪಡದವರು. ಯಾವುದೇ ಒಂದು ಬುಡಕಟ್ಟು ಸಮಾಜದ ಮುಖ್ಯಶಕ್ತಿ ಮತ್ತು ಒಗ್ಗಟ್ಟು ಅದರ ರಕ್ತಸಂಬಂಧವೇ ಆಗಿರುತ್ತದೆ.

ಮೇಲಿನ ಉದಾಹರಣೆಗಳು ಭಾರತದಲ್ಲಿ ಮಾತ್ರ ಎರಡು ಸಮಾಜಗಳಾಗಿ ಹಳ್ಳಿಯ ಒಳಗೆ ಮತ್ತು ಹೊರಗೆ ಜೀವನ ನಡೆಸುತ್ತಿದ್ದವು ಎನ್ನುವುದನ್ನು ಅಲ್ಲಗಳೆಯುತ್ತದೆ. ಇದರಿಂದ ನಮಗೆ ತಿಳಿದುಬರುವ ವಿಷಯವೆಂದರೆ ಆದಿಕಾಲದಲ್ಲಿಯೇ ಒಂದು ಸಮಾಜ ಹಳ್ಳಿಯ ಒಳಗಿದ್ದರೆ ಇನ್ನೊಂದು ಸಮಾಜ ಹಳ್ಳಿಯ ಹೊರಗಡೆ ಇರುವುದಾಗಿ ತಿಳಿದುಬರುತ್ತದೆ. ಹಳ್ಳಿಯ ಹೊರಗಿರುವವರು ಮತ್ತು ಒಳಗಿರುವವರು ಬೇರೆ ಬೇರೆ ಬುಡಕಟ್ಟುಗಳಿಗೆ ಸೇರಿರುವುದೇ ಇದಕ್ಕೆ ಕಾರಣವಾಗಿರುತ್ತದೆ. ಭಾರತವು ಸೇರಿದಂತೆ ಐರ್‌ಲ್ಯಾಂಡ್, ವೇಲ್ಸ್ ಮತ್ತಿತರ ಪ್ರದೇಶಗಳಲ್ಲಿ ಎರಡು ರೀತಿಯ ಸಮಾಜಗಳು ಇರುವುದಾಗಿ ಮೇಲಿನ ವಿವರಣೆಗಳಿಂದ ತಿಳಿದುಬರುತ್ತದೆ. ಆದರೆ ಭಾರತವನ್ನು ಬಿಟ್ಟು ಮಿಕ್ಕ ಪ್ರದೇಶಗಳಲ್ಲಿ ಕಾಲಾಂತರದಲ್ಲಿ ಭಿನ್ನ ಸಮಾಜಗಳು ಬೆರೆತುಹೋದವು. ಇದೇ ರೀತಿಯ ಬೆಳವಣಿಗೆ ಭಾರತದಲ್ಲಿ ಯಾಕಾದರೂ ನಡೆಯಲಿಲ್ಲ?

ಆದಿಕಾಲದ ಸಮಾಜಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಬೆಳವಣಿಗೆಗಳನ್ನು ನೋಡಬಹುದು. ಒಂದು, ಅಲೆದಾಡುವ ಸಮಾಜ–ಒಂದು ಕಡೆ ನೆಲೆಯೂರಿದ್ದು ಮತ್ತು ಬುಡಕಟ್ಟು ಸಮಾಜ ಸ್ಥಿರ ಸಮಾಜವಾಗಿ ಮಾರ್ಪಟ್ಟಿದ್ದು. ಎರಡನೆಯದು, ಮಾನವ ಸಮಾಜದ ವಿಕಾಸದಲ್ಲಿ ಬುಡಕಟ್ಟು ಸಮಾಜಗಳು ಒಂದಾಗಿ ಬೆಳೆದು ನಿಂತಿದ್ದರಿಂದ ಹೊರಗಿದ್ದ ಛಿದ್ರ ಬುಡಕಟ್ಟು ಸಮಾಜಗಳು ಒಳಗಿದ್ದ ಸಮಾಜಗಳ ಜೊತೆಗೆ ಬೆರೆತು ಹೋಗಿದ್ದು. ವೇಲ್ಸ್ ಮತ್ತು ಐರ್‌ಲ್ಯಾಂಡಿನಲ್ಲಿ ನಡೆದಿದ್ದು ಇದೇ ರೀತಿಯ ಬೆಳವಣಿಗೆ.

ವೇಲ್ಸ್‌ನ ಕಿಮ್ರೊ ಜನಾಂಗದ ಪದ್ಧತಿಯೆಂದರೆ ಅನ್ಯರನ್ನು (ಅನ್ಯರಕ್ತ) ತಮ್ಮ ಜನಾಂಗದವರು ಎಂದು ಒಪ್ಪಿಕೊಳ್ಳಬೇಕಾದರೆ ಅನ್ಯಜನರ ಒಂಬತ್ತು ತಲೆಮಾರುಗಳು ಅವರ ಜೊತೆ ಬೆಳೆಯಬೇಕಾಗಿತ್ತು. ಅದೇ ಕಿಮ್ರೊ ಸಮಾಜದ ಜೊತೆಗೆ ಬೇರೆ ಸಮಾಜದವರು ಅಂತರ ಸಮಾಜ ಮದುವೆಯಾದರೆ ನಾಲ್ಕನೇ ತಲೆಮಾರಿನ ಅವರ ಮಕ್ಕಳನ್ನು ಕಿಮ್ರೊ ಸಮಾಜದವರು ತಮ್ಮ ಸಮಾಜದವರೆಂದು ಭಾವಿಸುತ್ತಿದ್ದರು.

ಈ ರೀತಿಯ ಬೆಳವಣಿಗೆ ಭಾರತದಲ್ಲೇಕೆ ಜರುಗಲಿಲ್ಲ? ನಮ್ಮ ದೇಶದ ಈಶಾನ್ಯದ ಕೆಲವು ಬುಡಕಟ್ಟು ಸಮಾಜಗಳು ಅನ್ಯ ಸಮಾಜದ ಗಂಡಸರಿಗೆ ತಮ್ಮ ಹೆಣ್ಣು ಮಕ್ಕಳನ್ನು ಕೊಟ್ಟು ಮದುವೆ ಮಾಡುತ್ತಾರೆ. ಆದರೆ ಆ ಗಂಡು, ಹೆಣ್ಣಿನ ಮನೆಯಲ್ಲಿಯೇ ಉಳಿದುಕೊಳ್ಳಬೇಕು. ಅವನ ಹಿಂದೆ ಹೆಣ್ಣನ್ನು ಕಳುಹಿಸಲು ಅವರು ತಯಾರಿರುವುದಿಲ್ಲ. ಹಾಗೆಯೇ ಅವನು ಒಂಟಿಯಾಗಿ ಓಡಿಹೋಗದಂತೆ ಎಚ್ಚರ ವಹಿಸುತ್ತಾರೆ. ಐರ್‌ಲ್ಯಾಂಡ್ ಮತ್ತು ವೇಲ್ಸ್‌ನಲ್ಲಾದ ಒಂದು ರೀತಿಯ ಬದಲಾವಣೆಗಳಿಗೆ ಭಾರತದಲ್ಲೂ ಅವಕಾಶವಿತ್ತು ಎನ್ನುವುದಕ್ಕೆ

ಮನುಸ್ಮೃತಿಯ ಅ.10 ಶ್ಲೋಕ 64–67 ಪುಷ್ಟಿ ನೀಡುತ್ತದೆ. ಶೂದ್ರ, ಬ್ರಾಹ್ಮಣ ಹೆಣ್ಣನ್ನು ಮದುವೆಯಾದ ಏಳು ತಲೆಮಾರುಗಳ ನಂತರ ಬ್ರಾಹ್ಮಣನಾಗಬಹುದು. ಆದರೆ ಚಾತುರ್ವರ್ಣ್ಯದ ನಿಯಮದಂತೆ ಶೂದ್ರ ಹುಟ್ಟು ಶೂದ್ರನೇ; ಅವನಿಗೆ ಬ್ರಾಹ್ಮಣನಾಗುವ ಅವಕಾಶವೇ ಇಲ್ಲ. ಐರ್‌ಲ್ಯಾಂಡ್ ಮತ್ತು ವೇಲ್ಸ್‌ಗಳ ರೀತಿಯ ಅವಕಾಶಗಳನ್ನು ಹಿಂದೂ ಸಮಾಜದಲ್ಲಿ ನೀಡಿದ್ದರೆ ಬಹುಶಃ ಅಸ್ಪೃಶ್ಯತೆ ಈ ದಿನ ನಮ್ಮ ನಡುವೆ ಇರುತ್ತಿರಲಿಲ್ಲ ಎನ್ನುತ್ತಾರೆ ಅಂಬೇಡ್ಕರ್.

## ಅಸ್ಪೃಶ್ಯತೆಗೆ ಕಸುಬು ಕಾರಣವೆ?

ಶ್ರೀಯುತ ರೈಸ್ ಹೇಳುವಂತೆ ಮತ್ತು ಇನ್ನೂ ಅನೇಕರು ನಂಬಿರುವಂತೆ, ಅಸ್ಪೃಶ್ಯತೆಗೆ ಮೂಲ ಕಾರಣ ಅವರು ಮಾಡುತ್ತಿರುವ ಕೊಳಕು ವೃತ್ತಿ ಮತ್ತು ಅಸ್ವಚ್ಛತೆ. ಈ ಮಾತುಗಳು ಒಂದು ರೀತಿಯಲ್ಲಿ ತೋರಿಕೆಯ ಮಾತುಗಳಾಗಿದ್ದು ವೃತ್ತಿ ಜೀವನಕ್ಕೂ ಅಸ್ಪೃಶ್ಯತೆಗೂ ಯಾವ ಸಂಬಂಧವೂ ಇಲ್ಲ ಎನ್ನುವುದಾಗಿ ತಿಳಿದುಬರುತ್ತದೆ. ಅಸ್ಪೃಶ್ಯರು ಮಾಡುತ್ತಿರುವ ಕಸುಬುಗಳು ಎಲ್ಲಾ ಸಮಾಜಗಳಲ್ಲೂ ಇತರರು ಮಾಡುತ್ತಿರುವ ಕಸುಬುಗಳೇ ಆಗಿವೆ. ಇದೇ ಕಸುಬು ಮಾಡುತ್ತಿರುವ ಜನರನ್ನು ಯಾವ ದೇಶದಲ್ಲೂ ಅಸ್ಪೃಶ್ಯರೆಂದು ಕರೆಯುತ್ತಿಲ್ಲ. ಈ ರೀತಿಯ ಕಸುಬುಗಳಲ್ಲಿ ತೊಡಗಿದ ದ್ರಾವಿಡರನ್ನು ಹಾಗೆ ಕರೆಯುತ್ತಿದ್ದರು ಎನ್ನುವ ಉದಾಹರಣೆಗಳು ನಮಗೆ ಎಲ್ಲೂ ದೊರಕುವುದಿಲ್ಲ. ಆದರೆ ಆರ್ಯರಲ್ಲಿ ಈ ರೀತಿಯ ಭಾವನೆಗಳು ಇದ್ದ ಬಗ್ಗೆ ಉಲ್ಲೇಖಗಳಿವೆ. ಸ್ವಚ್ಛತೆ ಮತ್ತು ಅಸ್ವಚ್ಛತೆ ಎನ್ನುವ ವಿಷಯದಲ್ಲಿ ಎಲ್ಲಾ ಸಮಾಜಗಳಲ್ಲೂ ಸ್ವಲ್ಪಮಟ್ಟಿಗೆ ಇದೇ ರೀತಿಯ ಮನೋಭಾವನೆಗಳು ಇರುವುದಾಗಿ ತಿಳಿದುಬರುತ್ತದೆ. ನಾರದ ಸ್ಮೃತಿಯಲ್ಲಿ ಆರ್ಯರು ಯಾವುದೇ ಕೊಳಕು ಕೆಲಸಗಳನ್ನು ಮಾಡಲು ಹಿಂಜರಿಯುವುದಿಲ್ಲ ಎಂದು ಹೇಳಲಾಗಿದೆ. ಅದೇ ಸ್ಮೃತಿಯ ಐದನೆಯ ಅಧ್ಯಾಯದಲ್ಲಿ ವೃತ್ತಿಗಳ ಬಗ್ಗೆ ವಿವರಿಸಲಾಗಿದೆ.

ಋಷಿಗಳು ವೃತ್ತಿಗಳನ್ನು ಐದು ವಿಭಾಗಗಳಾಗಿ ವಿಂಗಡಿಸಿದ್ದಾರೆ. ನಾಲ್ಕು ರೀತಿಯ ಕೂಲಿಯಾಳುಗಳು ಮತ್ತು ಐದನೆಯವರು ಗುಲಾಮರು. ವಿದ್ಯಾರ್ಥಿ, ಕೆಲಸ ಕಲಿತುಕೊಳ್ಳುತ್ತಿರುವವರು, ಬಾಡಿಗೆ ಸೇವಕ ಮತ್ತು ಅಧಿಕಾರಿ. ಋಷಿಗಳ ಆಜ್ಞೆಯಂತೆ ಅವರ ಅಂತಸ್ತು ಮತ್ತು ಸಂಬಳ ಅವರ ಜಾತಿ ಮತ್ತು ಕಸುಬನ್ನು ಆಧರಿಸಿರುತ್ತದೆ. ಕಸುಬಿನಲ್ಲಿ ಮುಖ್ಯವಾಗಿ ಎರಡು ರೀತಿ, ಶುಚಿ ಮತ್ತು ಅಶುಚಿ. ಅಶುಚಿ ಕೆಲಸಗಳನ್ನು ಗುಲಾಮರು ಮಾಡಿದರೆ ಶುಚಿಯಾದ ಕೆಲಸಗಳನ್ನು ಕೂಲಿಯಾಳುಗಳು ಮಾಡುತ್ತಾರೆ. ಬಾಗಿಲು ರಸ್ತೆ, ಕೊಳೆತ ಆಹಾರ, ಸ್ನಾನದಗೃಹ, ಶೌಚಾಲಯ ಇನ್ನಿತರ ಸ್ಥಳಗಳನ್ನು ಸ್ವಚ್ಛಗೊಳಿಸುವುದು ಅಶುಚಿಯಾದ ಕೆಲಸ, ಮಿಕ್ಕ ಕೆಲಸಗಳೆಲ್ಲ ಸ್ವಚ್ಛವಾದ ಕೆಲಸಗಳು. ಐದು ರೀತಿಯ ಕೆಲಸಗಾರರಲ್ಲಿ ಕೊನೆಯವರು ಅಶುಚಿ ಕೆಲಸಗಳಲ್ಲಿ ತೊಡಗಿರುವವರು. ಇನ್ನು ನಾಲ್ವರು ಶುಚಿಯಾದ ಕೆಲಸಗಳಲ್ಲಿ ತೊಡಗಿದಂತಾಗುತ್ತದೆ.

ಇಲ್ಲಿ ಅಶುಚಿ ಕೆಲಸಗಳಲ್ಲಿ ತೊಡಗಿರುವ ಗುಲಾಮರು ಯಾರು? ಆರ್ಯರೆ ಅಥವಾ ಅನಾರ್ಯರೆ? ಅದರ ವಿವರಗಳು ಮಾತ್ರ ದೊರಕುವುದಿಲ್ಲ. ಆದರೆ ನಾರದ ಹೇಳುವಂತೆ ಆರ್ಯರೂ ಅಶುಚಿ ಕೆಲಸಗಳಲ್ಲಿ ತೊಡಗಿರುವುದಾಗಿ ತಿಳಿದು ಬರುತ್ತದೆ. ಅವರು ಯಾವುದೇ ವರ್ಣಕ್ಕೆ ಸೇರಿರಲಿ ಬ್ರಾಹ್ಮಣ ಬ್ರಾಹ್ಮಣನಿಗೆ,

ಕ್ಷತ್ರಿಯ ಕ್ಷತ್ರಿಯನಿಗೆ, ವೈಶ್ಯ ವೈಶ್ಯನಿಗೆ ಮತ್ತು ಶೂದ್ರ ಶೂದ್ರನಿಗೆ ಗುಲಾಮನಾಗಬಹುದು ಎನ್ನುವಂತಾಗುತ್ತದೆ.

ನಾರದ ಸ್ಮೃತಿಯಲ್ಲಿ ಹದಿನೈದು ರೀತಿಯ ಗುಲಾಮರನ್ನು ವಿವರಿಸಲಾಗಿದೆ. ಯಜಮಾನನ ಮನೆಯಲ್ಲಿ ಹುಟ್ಟಿದವನು, ಕೊಂಡುಕೊಂಡವನು, ದತ್ತುಪಡೆದವನು, ಗುಲಾಮನ ಮಗ, ಕ್ಷಾಮದಲ್ಲಿ ಸಿಕ್ಕಿದವನು, ಬೇರೆ ಯಜಮಾನನಿಂದ ಕೊಂಡು ಕೊಂಡವನು, ಸಾಲ ತೀರಿಸಲಾರದವನು, ಯುದ್ಧದಲ್ಲಿ ಸೆರೆ ಸಿಕ್ಕಿದವನು, ಪಣ ಹೂಡಿದಾಗ ಸಿಕ್ಕಿದವನು, ನಿರಾಶ್ರಿತನಾಗಿ ಬಂದವನು, ಗುಲಾಮನಾಗಿ ಇರಲು ಬಂದವನು, ಹೆಣ್ಣು ಗುಲಾಮಳ ಸಂಬಂಧಿ ಇತ್ಯಾದಿ.

ಅದೇ ನಾರದ ಸ್ಮೃತಿಯಲ್ಲಿ ಕೆಳಗಿನ ವರ್ಣಗಳವರು ಮೇಲಿನ ವರ್ಣದವರಿಗೆ ಗುಲಾಮರಾಗಬೇಕು ಎನ್ನಲಾಗಿದೆ. ಯಾಜ್ಞವಲ್ಕ್ಯನು ಅದೇ ವಿಷಯವನ್ನು ಹೇಳಿದ್ದಾನೆ. ಬ್ರಾಹ್ಮಣ ತನ್ನ ಗುಲಾಮನನ್ನಾಗಿ ಬ್ರಾಹ್ಮಣನನ್ನು, ಕ್ಷತ್ರಿಯ, ವೈಶ್ಯ ಮತ್ತು ಶೂದ್ರನನ್ನು ನೇಮಿಸಿಕೊಳ್ಳಬಹುದು. ವೈಶ್ಯನು, ವೈಶ್ಯ ಮತ್ತು ಶೂದ್ರನನ್ನು ಗುಲಾಮನಾಗಿ ಪಡೆಯಬಹುದು. ಆದರೆ ಶೂದ್ರ, ಶೂದ್ರನನ್ನು ಮಾತ್ರ ಪಡೆಯಬಹುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಲ್ಲರೂ ಆರ್ಯರೇ ಆಗಿರಬೇಕು. ಇಲ್ಲವೆಂದರೆ ಒಬ್ಬರು ಇನ್ನೊಬ್ಬರನ್ನು ಗುಲಾಮರಾಗಿ ಪಡೆಯಲು ಸಾಧ್ಯವಿಲ್ಲ. ಬ್ರಾಹ್ಮಣ ಶೂದ್ರನನ್ನು ಗುಲಾಮನಾಗಿ ಪಡೆಯಬಹುದು. ಆದರೆ ಶೂದ್ರ, ಬ್ರಾಹ್ಮಣನನ್ನು ಗುಲಾಮನಾಗಿ ಪಡೆಯಲಾರ. ಇಲ್ಲಿ ವರ್ಣಾಶ್ರಮದ ಹುಟ್ಟಿನಿಂದ ನಾಲ್ಕು ವರ್ಣಗಳ ಮಧ್ಯೆ ಅಂತರವನ್ನು ಏರ್ಪಡಿಸಿರುವುದು ಕಾಣಿಸುತ್ತದೆ. ಆದರೆ ಒಂದು ವರ್ಣಕ್ಕೆ ಸೇರಿದವರನ್ನು ಇನ್ನೊಂದು ವರ್ಣದವರು ಪೂರ್ಣವಾಗಿ ದೂರವಿಡುವ ಕೆಲಸ ನಡೆದಿಲ್ಲ.

ಬ್ರಾಹ್ಮಣರ ಮನೆಯಲ್ಲಿ ಬ್ರಾಹ್ಮಣನಿಂದ ಶೂದ್ರನವರೆಗೆ ಎಲ್ಲರೂ ಅಶುಚಿ ಕೆಲಸಗಳಲ್ಲಿ ತೊಡಗಿಕೊಳ್ಳಬಹುದು. ಕ್ಷತ್ರಿಯರ ಮನೆಯಲ್ಲಿ ಕ್ಷತ್ರಿಯನಿಂದ ಶೂದ್ರನವರೆಗೆ ಅಶುಚಿ ಕೆಲಸಗಳನ್ನು ಮಾಡಬಹುದು. ಅಂದರೆ ಒಂದು ಕಾಲದಲ್ಲಿ ಬ್ರಾಹ್ಮಣನಿಂದ ಶೂದ್ರನವರೆಗೆ ಎಲ್ಲರೂ ಅಶುಚಿ ಕೆಲಸಗಳಲ್ಲಿ ತೊಡಗಿದಂತಾಯಿತು. ಒಂದು ಜನಾಂಗವು ತಾನು ಮಾಡುತ್ತಿರುವ ಕೆಲಸದಿಂದ ಅಸ್ಪೃಶ್ಯವಾಯಿತು ಎನ್ನುವುದಾದರೆ ಬ್ರಾಹ್ಮಣನಿಂದ ಶೂದ್ರನವರೆಗೂ ಎಲ್ಲರಲ್ಲೂ ಅಸ್ಪೃಶ್ಯ ಜನಾಂಗ ಇದ್ದಿರಬೇಕು. ಅಂದರೆ ಯಾವುದೇ ಜನಾಂಗವು ಮಾಡುವ ಕೆಲಸದಿಂದ ಅಸ್ಪೃಶ್ಯ ಜನಾಂಗ ಇದ್ದಿರಬೇಕು. ಅಂದರೆ ಯಾವುದೇ ಜನಾಂಗವು ಮಾಡುವ ಕೆಲಸದಿಂದ ಅಸ್ಪೃಶ್ಯತೆ ಹುಟ್ಟಿಕೊಂಡಿತು ಎನ್ನುವುದು ಮೇಲಿನ ವಿವರಣೆಗಳಿಂದ ಶುದ್ಧ ಸುಳ್ಳಿನ ಮಾತಾಗುತ್ತದೆ.

## ಅಸ್ಪೃಶ್ಯ ಸಮಾಜ ಯಾವ ಕಾಲದಲ್ಲಿ ಹುಟ್ಟಿಕೊಂಡಿತು?

ಹಿಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಿದ ಹಾಗೆ ಒಂದು ಕಾಲದಲ್ಲಿ ಭಾರತದ ಹಳ್ಳಿಗಳಲ್ಲಿ ನೆಲೆಯೂರಿದ ಬುಡಕಟ್ಟು ಮತ್ತು ಛಿದ್ರಗೊಂಡ ಬುಡಕಟ್ಟು ಎಂಬ ಎರಡು ರೀತಿಯ ಸಮಾಜಗಳಿದ್ದವು. ಮೊದಲನೆಯದು ಹಳ್ಳಿಯ ಒಳಗೆ, ಎರಡನೆಯದು ಹಳ್ಳಿಯ ಹೊರಗೆ ಜೀವನ ನಡೆಸುತ್ತಿದ್ದವು. ಎರಡು ಸಮಾಜಗಳ ನಡುವೆ ಸಾಮಾಜಿಕವಾಗಿ ಯಾವ ರೀತಿಯ ಪ್ರತ್ಯೇಕತೆಯೂ ಇರಲಿಲ್ಲ. ಹಸುವನ್ನು ಗೋಮಾತೆಯೆಂದು

ಪೂಜಿಸಲು ಪ್ರಾರಂಭಿಸಿ ಗೋಮಾಂಸ ಭಕ್ಷಣೆಯನ್ನು ಬಹಿಷ್ಕರಿಸಿದಾಗ ಸಮಾಜ ಎರಡು ವಿಭಾಗಗಳಾಗಿ ಒಡೆದುಕೊಂಡಿತು.

ನೆಲೆಯೂರಿದ ಸಮಾಜ ಸ್ಪೃಶ್ಯ ಸಮಾಜವಾದರೆ ಛಿದ್ರಗೊಂಡ ಬುಡಕಟ್ಟು ಸಮಾಜ ಅಸ್ಪೃಶ್ಯ ಸಮಾಜವಾಯಿತು. ಅಸ್ಪೃಶ್ಯತೆ ಯಾವ ಕಾಲದಲ್ಲಿ ಹುಟ್ಟಿಕೊಂಡಿತು ಎನ್ನುವುದನ್ನು ನಿರ್ಣಯಿಸಲು ಹಲವು ತೊಡಕುಗಳಿದ್ದು, ಅದೊಂದು ಸಾಮಾಜಿಕ ಮನೋಭಾವನೆಯಾಗಿದೆ. ಒಂದು ಪಂಗಡ ಇನ್ನೊಂದು ಪಂಗಡದ ವಿರುದ್ಧ ಆಚರಿಸುವ ಒಂದು ಸಾಮಾಜಿಕ ಅಸ್ವಸ್ಥ ಆಚರಣೆ ಅದಾಗಿದೆ. ಇದು ಯಾವ ಕಾಲದಲ್ಲಿ ಮೊಳಕೆಯೊಡೆದು ಹೆಮ್ಮರವಾಗಿ ಬೆಳೆಯಿತು? ಎನ್ನುವುದನ್ನು ತಿಳಿದುಕೊಳ್ಳುವುದು ಅಷ್ಟು ಸುಲಭದ ಕೆಲಸವಲ್ಲ. ಅಸ್ಪೃಶ್ಯತೆ ಯಾವ ಕಾಲದಲ್ಲಿ ಹುಟ್ಟಿಕೊಂಡಿತು ಎಂದು ಖಡಾಖಂಡಿತವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಒಂದು ಅಂದಾಜಿನ ಪ್ರಕಾರ ಸ್ವಲ್ಪ ಹೆಚ್ಚು ಕಡಿಮೆ ಸರಿಸುಮಾರಾದ ಕಾಲವನ್ನು ತಿಳಿದುಕೊಳ್ಳಬಹುದಾಗಿದೆ.

ಅಸ್ಪೃಶ್ಯತೆ ಹುಟ್ಟಿದ ಕಾಲವನ್ನು ನಿರ್ಣಯಿಸುವ ಮುಂಚೆ ಅದು ಯಾವ ಕಾಲದಲ್ಲಿ ಪೂರ್ಣವಾಗಿ ಇರಲಿಲ್ಲ ಮತ್ತು ಯಾವ ಕಾಲದಿಂದ ಕಾಣಿಸಿಕೊಂಡಿದೆ ಎನ್ನುವುದನ್ನು ನಿರ್ಣಯಿಸಿ ಆಮೇಲೆ ಪರಿಶೀಲಿಸಬಹುದಾಗಿದೆ. ವೇದಗಳಲ್ಲಿ ಅಂತ್ಯಜರ ಬಗ್ಗೆ ಉಲ್ಲೇಖಗಳಿದ್ದರೂ ಅವರನ್ನು ಅಶುದ್ಧರೆಂದಾಗಲಿ, ಅಸ್ಪೃಶ್ಯರೆಂದಾಗಲಿ ಕರೆದಿಲ್ಲ. ಇದಕ್ಕೆ ಬಲನೀಡುವಂತಹ ಕೆಲವು ವಿವರಣೆಗಳನ್ನು ಮಿ. ಕೇನ್ ನೀಡಿದ್ದಾರೆ. ಆರಂಭದ ವೈದಿಕ ಸಾಹಿತ್ಯದ ಸ್ಮೃತಿಗಳಲ್ಲಿ ಹಲವು ಜಾತಿಗಳನ್ನು ಅಂತ್ಯಜರೆಂದು ಉಲ್ಲೇಖಿಸಲಾಗಿದೆ. ಋಗ್ವೇದದ ಶ್ಲೋಕ VIII 8, 38ರಲ್ಲಿ ಕರ್ಮಣ, ವಾಜಸನೇಯಿ ಸಂಹಿತೆಯಲ್ಲಿ ಚಂಡಾಳ ಮತ್ತು ಪಾಲ್ಕಸ, ಋಗ್ವೇದದಲ್ಲಿ ವೇಪ ಅಥವಾ ವೇಪ್ತ (ಕ್ಷೌರಿಕ), ತೈತ್ತಿರೀಯ ಬ್ರಾಹ್ಮಣದಲ್ಲಿ ಮತ್ತು ವಾಜಸನೇಯಿ ಸಂಹಿತೆಯಲ್ಲಿ ಪಿಡಲಕರ ಅಥವಾ ಬಿಡಲಕರ. ವಾಸಾಹಪ್ರಲ್ ಪುಲಿ (ಅಗಸರ ಹೆಣ್ಣು) ಅಥವಾ ರಜಕ ಎಂದು ಹೆಸರಿಸಲಾಗಿದೆ. ಆದರೆ ಎಲ್ಲೂ ಅಸ್ಪೃಶ್ಯತೆಯ ಬಗ್ಗೆ ವಿವರಣೆ ದೊರಕುವುದಿಲ್ಲ. ಧರ್ಮ ಸೂತ್ರಗಳಲ್ಲಿ ಅಶುದ್ಧತೆಯ ಬಗ್ಗೆ ಹಲವು ಉಲ್ಲೇಖಗಳಿದ್ದರೂ ಅಸ್ಪೃಶ್ಯತೆಯ ಬಗ್ಗೆ ವಿವರಗಳು ದೊರಕುವುದಿಲ್ಲ.

ಮನುವಿನ ಕಾಲದಲ್ಲಿ ಅಸ್ಪೃಶ್ಯತೆ ಇತ್ತೇ ಎನ್ನುವುದನ್ನು ಪರಿಶೀಲನೆ ಮಾಡಿದಾಗ, ಒಂದು ಕಡೆ ನಾಲ್ಕು ವರ್ಣಗಳು ಮಾತ್ರ ಇರುವುದಾಗಿ ತಿಳಿಸಿರುವ ಮನು ರಾಜಕಾರಣಿಗಳಂತೆ ಐದನೇ ವರ್ಣ ಇಲ್ಲ ಎಂದಿದ್ದಾನೆ. ಬಹುಶಃ ಆ ಕಾಲಕ್ಕೆ ಐದನೆಯ ವರ್ಣ ಹುಟ್ಟಿಕೊಳ್ಳುತ್ತಿದ್ದರಿಂದಲೋ ಏನೋ? ಮನು ಐದನೆಯ ವರ್ಣ ಇಲ್ಲ ಎಂದಿರಬೇಕು. ಚಾತುರ್ವರ್ಣ್ಯದಲ್ಲಿ ಇನ್ನೊಂದು ವರ್ಣದ ನೆಲೆಯನ್ನು ನಿಗದಿಪಡಿಸಲಾಗದ ಗೊಂದಲವೇ ಇದಕ್ಕೆ ಕಾರಣವಿರಬೇಕು. ನಾಲ್ಕು ವರ್ಣಗಳ ಒಳಗೆಯೇ ಐದನೆಯ ವರ್ಣವನ್ನು ಇಡಬೇಕೇ? ಅಥವಾ ಅದನ್ನು ಐದನೆಯ ವರ್ಣವೆಂದು ಪ್ರತ್ಯೇಕವಾಗಿ ಕರೆಯಬೇಕೇ ಎನ್ನುವ ಜಿಜ್ಞಾಸೆ ಸಮಾಜದಲ್ಲಿ ಹುಟ್ಟಿಕೊಂಡಿದ್ದುದು ಮಾತ್ರ ಮನುವಿನ ಮಾತುಗಳಿಂದ ತಿಳಿದುಬರುತ್ತದೆ. ಅದು ಯಾವ ವರ್ಗ ಎನ್ನುವುದನ್ನು ಮನು ಮುಂದಕ್ಕೆ ವಿವರಿಸಿಲ್ಲ. ಐದನೆಯ ವರ್ಣ ಎನ್ನುವುದು ಯಾವ ವರ್ಗವಿರಬಹುದು? ಚಾತುರ್ವರ್ಣ್ಯ ಯೋಜನೆಯಂತೆ ಐದನೆಯ ವರ್ಣ ಇಲ್ಲ, ಐದನೆಯ ವರ್ಣ ಎನ್ನುವುದು ನಾಲ್ಕು ವರ್ಣಗಳ ಒಳಗಿನ

ಒಂದು ಉಪವರ್ಣವಾಗಿರಬೇಕು. ಇಲ್ಲ, ಚಾತುರ್ವರ್ಣ್ಯದ ಯೋಜನೆಯಲ್ಲಿ ಐದನೆಯ ವರ್ಣ ಹುಟ್ಟಿಕೊಳ್ಳಲು ಅವಕಾಶ ಇಲ್ಲದಿರಬೇಕು ಅಥವಾ ಚಾತುರ್ವರ್ಣ್ಯದ ಹೊರಗಿನ ವರ್ಗವಾಗಿರಬೇಕು.

ಸಂಪ್ರದಾಯವಾದಿ ಹಿಂದೂಗಳ ಪ್ರಕಾರ ಮನು ಹೇಳಿರುವುದು ಬೇರೆ ಯಾರ ಬಗ್ಗೆಯೂ ಅಲ್ಲ ಅದು ಅಸ್ಪೃಶ್ಯರ ಬಗ್ಗೆ, ಅಸ್ಪೃಶ್ಯರ ನೆಲೆಯು ಹಿಂದೂ ನಿಯಮಾವಳಿಯಲ್ಲಿ ವಿವಾದಕ್ಕೊಳಪಟ್ಟಾಗ ಮನು ಹೇಳಿರುವ ವಿಷಯ ಇದು ಎನ್ನುವುದು ಅವರ ವಾದ. ಈ ನಂಬಿಕೆ ಎಷ್ಟು ಗಾಢವಾಗಿ ಹಬ್ಬಿಕೊಂಡಿತ್ತೆಂದರೆ ಹಿಂದೂಗಳಲ್ಲಿ ಎರಡು ವರ್ಗಗಳು ಹುಟ್ಟಿಕೊಂಡವು. ಸವರ್ಣೀಯರು ಮತ್ತು ಅವರ್ಣೀಯರು (ಅಸ್ಪೃಶ್ಯರು). ಈ ವಿಶ್ಲೇಷಣೆ ಸರಿಯಾದ ಪಕ್ಷದಲ್ಲಿ ಮನುವಿನ ಕಾಲದಲ್ಲಿಯೇ ಅಸ್ಪೃಶ್ಯತೆ ಇತ್ತು ಎನ್ನುವುದು ನಿರ್ವಿವಾದ. ಹಾಗಾದರೆ ಮನು ಇದನ್ನು ಮುಚ್ಚಿಹಾಕಲು ಪ್ರಯತ್ನಿಸಿದನೆ? ಎಲ್ಲಾ ಹಿಂದೂಗಳು ಅಸ್ಪೃಶ್ಯತೆಯನ್ನು ಬಹಳ ಕಟ್ಟುನಿಟ್ಟಾಗಿ ಆಚರಿಸುತ್ತಿದ್ದ ಪಕ್ಷದಲ್ಲಿ ಮನು ಏಕೆ ಅದನ್ನು ವಿಶ್ಲೇಷಿಸಿಲ್ಲ ಎನ್ನುವ ಪ್ರಶ್ನೆ ಏಳುತ್ತದೆ.

ಮನು ಹೇಳಿರುವ ವರ್ಗ ಅಸ್ಪೃಶ್ಯ ವರ್ಗವಲ್ಲ ಎನ್ನುವುದು ಅಂಬೇಡ್ಕರ್ ಅವರ ವಾದ. ಏಕೆಂದರೆ ಮನುವಿನ ಕಾಲದಲ್ಲಿ ಅಸ್ಪೃಶ್ಯತೆ ಇರಲಿಲ್ಲ. ಕೇವಲ ಅಶುದ್ಧತೆ ಮಾತ್ರ ಇತ್ತು. ಮನು ಚಂಡಾಳರ ಬಗ್ಗೆ ಹೇಳುವಾಗಲೂ ಚಂಡಾಳರು ಅಶುದ್ಧರು ಎಂದು ಹೇಳಿದ್ದಾನೆ. ಹಾಗಾಗಿ ಐದನೆಯ ವರ್ಣ ಎನ್ನುವುದರ ಬಗ್ಗೆ ಸಮಾಜದಲ್ಲಿ ಹುಟ್ಟಿಕೊಂಡಿದ್ದ ಕಲಹ ಅಸ್ಪೃಶ್ಯತೆಯ ಬಗ್ಗೆ ಅಲ್ಲ, ಅಶುದ್ಧತೆಯೆನ್ನುವ ವಿಷಯದ್ದಾಗಿದೆ. ಈ ವಿಶ್ಲೇಷಣಕ್ಕೆ ಪೂರಕವೆಂಬಂತೆ ಇದೇ ವರ್ಗದವರನ್ನು ನಾರದ ಸ್ಮೃತಿಯಲ್ಲಿ ಸೇವಕರೆಂದು ಹೇಳಲಾಗಿದೆ. ನಾರದ ಸ್ಮೃತಿಯಲ್ಲಿ ಸೇವಕರನ್ನು ಐದನೆಯ ವರ್ಗವೆಂದು ಕರೆದಿರುವಾಗ ಮನುಸ್ಮೃತಿಯಲ್ಲೂ ಸೇವಕರನ್ನು ಐದನೆಯ ವರ್ಗದವರೆಂದು (ಅಶುದ್ಧರನ್ನು) ಕರೆಯಬಹುದಾಗಿದ್ದಿತು. ಈ ವಿಶ್ಲೇಷಣೆ ಸರಿಯಾದಲ್ಲಿ ಮನುವಿನ ಕಾಲದಲ್ಲಿ ಅಸ್ಪೃಶ್ಯತೆ ಇರಲಿಲ್ಲ ಎನ್ನುವುದು ಸಾಬೀತಾಗುತ್ತದೆ.

ಈಗ ಮನುಸ್ಮೃತಿಯ ನಿಖರವಾದ ಕಾಲ ಎಷ್ಟೆನ್ನುವ ಪ್ರಶ್ನೆಯನ್ನು ಗಮನಿಸೋಣ. ಮನುಸ್ಮೃತಿಯನ್ನು ಬರೆದ ಕಾಲವನ್ನು ತಿಳಿದುಕೊಳ್ಳದೆ ಅಸ್ಪೃಶ್ಯತೆಯ ಹುಟ್ಟಿನ ಕಾಲವನ್ನು ನಿಗದಿಪಡಿಸುವುದು ಸಾಧ್ಯವಿಲ್ಲ. ಮನುಸ್ಮೃತಿಯ ಕಾಲದವರೆಗೆ ಅಸ್ಪೃಶ್ಯತೆ ಹುಟ್ಟಿಕೊಂಡಿರಲಿಲ್ಲ; ಮನುಸ್ಮೃತಿ ಯಾವ ಕಾಲದಲ್ಲಿ ಬರೆದದ್ದು ಎನ್ನುವ ಪ್ರಶ್ನೆಯನ್ನು ಸರಿಯಾಗಿ ಕಂಡುಕೊಳ್ಳಬೇಕಾಗಿದೆ. ಕೆಲವರು ಮನುಸ್ಮೃತಿ ಅತ್ಯಂತ ಹಳೆಯ ಕಾಲದ್ದೆಂದರೆ, ಕೆಲವರು ಬಹಳ ಇತ್ತೀಚಿನ ಕಾಲದಲ್ಲಿ ಬರೆಯಲಾಗಿದೆ ಎನ್ನುತ್ತಾರೆ. ಎಲ್ಲಾ ಪಂಡಿತರ ಲೆಕ್ಕಾಚಾರಗಳ ನಡುವೆ ಬೂಲರ್ ಹೇಳುವುದನ್ನು ಸ್ವಲ್ಪಮಟ್ಟಿಗೆ ಎಲ್ಲರೂ ಒಪ್ಪಿಕೊಂಡಿದ್ದಾರೆ.

ಪ್ರೊ. ಬೂಲರ್ ಪ್ರಕಾರ ಮನುಸ್ಮೃತಿಯ ಇಂದಿನ ಆಕಾರವನ್ನು ಕ್ರಿ. ಶ. ಎರಡನೇ ಶತಮಾನದಲ್ಲಿ ಪಡೆದುಕೊಂಡಿತು. ಇದನ್ನು ದಫ್ತರಿ ಕೂಡ ಒಪ್ಪುತ್ತಾರೆ. ದಫ್ತರಿ ಪ್ರಕಾರ ಮನುಸ್ಮೃತಿ ಕ್ರಿ. ಪೂ. 185ರ ನಂತರ ಬರೆದಿರುವುದಾಗಿದೆ. ದಫ್ತರಿ ಹೇಳುವಂತೆ ಮನುಸ್ಮೃತಿಯಲ್ಲಿ ಮೌರ್ಯರಾಜ್ಯದ ಬೌದ್ಧ ಧರ್ಮ ಅನುಯಾಯಿ ರಾಜ ಬೃಹದ್ರಥನನ್ನು ಅವನ ಬ್ರಾಹ್ಮಣ ಸೇನಾಪತಿ ಪುಷ್ಯಮಿತ್ರ ಸುಂಗನು ಸಾಯಿಸಿದ ವಿಷಯ

ಉಲ್ಲೇಖವಾಗಿದೆ. ಅದು ನಡೆದಿದ್ದು ಕ್ರಿ. ಪೂ. 185ರಲ್ಲಿ. ಅಂದರೆ ಮನುಸ್ಮೃತಿ ಅನಂತರ ಬರೆದಿದ್ದೆಂದಾಯಿತು.

ಮೌರ್ಯರಾಜ ಬೃಹದ್ರಥನನ್ನು ಪುಷ್ಯಮಿತ್ರನು ಸಾಯಿಸಿದ ವಿಷಯವನ್ನು ಚರಿತ್ರೆ ಸರಿಯಾಗಿ ಗುರುತಿಸಲಾಗದೇ ಹೋಗಿರುವುದರಲ್ಲಿ ಪಿತೂರಿ ಇದೆ ಎನ್ನುತ್ತಾರೆ ಕೆಲವು ಪಂಡಿತರು. ಅದಕ್ಕೆ ದೊರಕಬೇಕಾದ ಮಾನ್ಯತೆ ಚರಿತ್ರೆಯಲ್ಲಿ ದೊರಕಲಿಲ್ಲ. ಚರಿತ್ರೆಯಲ್ಲಿ ಇದೊಂದು ಪ್ರಸಿದ್ಧ ದಾಖಲೆಯಾಗಬೇಕಾಗಿದ್ದ ವಿಷಯ. ಮೌರ್ಯರಾಜ ಬೃಹದ್ರಥನನ್ನು ಸುಂಗರು ಸೋಲಿಸಿ ಪಟ್ಟಕ್ಕೇರಿದ ವಿಷಯ ಫ್ರೆಂಚ್‌ಕ್ರಾಂತಿಯಷ್ಟೇ ಪ್ರಸಿದ್ಧಿ ಎನ್ನಬಹುದಾಗಿದೆ. ಬ್ರಾಹ್ಮಣರೆಲ್ಲ ಒಟ್ಟುಗೂಡಿ ಬೌದ್ಧ ಧರ್ಮಿಗಳ ರಾಜ್ಯವನ್ನು ನೆಲಸಮಗೊಳಿಸಿದ ಪಿತೂರಿ ಇದು. ಬೌದ್ಧ ಧರ್ಮಿಗಳ ಪ್ರಕಾರ ಅಧಿಕಾರ ಮತ್ತು ಧರ್ಮ ಎರಡನ್ನೂ ಕೆಳಗುರುಳಿಸಿದ ಈ ದಂಗೆಯ ಹಿಂದೆ ಇನ್ನೂ ಹಲವು ಕಾರಣಗಳಿದ್ದು ಅವುಗಳಲ್ಲಿ ಕೆಲವು ಬ್ರಾಹ್ಮಣರಿಗೆ ಅತ್ಯವಸರವಾಗಿದ್ದ ಕಾಲವದು. ಆಗ ಬ್ರಾಹ್ಮಣರು ಚಾತುರ್ವರ್ಣ್ಯದ ನಿಯಮಗಳನ್ನು ಕಾಪಾಡಿಕೊಳ್ಳುವ ಅಗತ್ಯವಿದ್ದಿತು. ಚಾತುರ್ವರ್ಣ್ಯದ ನಿಯಮಗಳನ್ನು ಬೌದ್ಧ ರಾಜರು ಒಪ್ಪದೆ ನಿರಾಕರಿಸಿ ಪ್ರಾಣಿಗಳನ್ನು ಯಾಗ ಯಜ್ಞಗಳ ಹೆಸರಿನಲ್ಲಿ ಬಲಿಕೊಡುವುದನ್ನು ಸಹ ನಿಷೇಧಿಸಿದ್ದರು.

ಪುಷ್ಯಮಿತ್ರ ಸುಂಗನು ಬೃಹದ್ರಥನನ್ನು ಕೊಲೆ ಮಾಡಿದಾಗ ಬ್ರಾಹ್ಮಣರು ಎರಡು ರೀತಿಯಲ್ಲಿ ತಮ್ಮ ನಿಯಮಗಳನ್ನು ಮೀರಿದ್ದರು. ಒಂದು, ಮನುಸ್ಮೃತಿಯ ಹಿಂದಿನ ವೇದಗಳ ಪ್ರಕಾರ ಬ್ರಾಹ್ಮಣರು ಕತ್ತಿಯನ್ನು ಹಿಡಿಯುವುದು ಪಾಪದ ಕೆಲಸ. ಎರಡು, ರಾಜನ ಆಳು ಪುಷ್ಯಮಿತ್ರನು ತನ್ನ ರಾಜನಾದ ಬೃಹದ್ರಥನನ್ನು ಕೊಲೆಗೈದಿದ್ದು. ಇದರಿಂದ ಮನುಸ್ಮೃತಿ ಹೊಸ ಬಂಡಾಯದ ಕಡೆಗೆ ತನ್ನ ಆಲೋಚನೆಗಳನ್ನು ಬೆಳೆಸಿಕೊಂಡಿತು ಎನ್ನುವುದು ಸಾಬೀತಾಗುತ್ತದೆ. ಈ ದಂಗೆಯ ನಂತರ ಚಾತುರ್ವರ್ಣ್ಯದ ನಿಯಮಗಳನ್ನು ಮತ್ತೆ ಈ ನೆಲದ ನಿಯಮಗಳನ್ನಾಗಿ ಪ್ರಾಣಿಗಳ ಬಲಿಯನ್ನು ಮತ್ತೊಮ್ಮೆ ಅನುಷ್ಠಾನಕ್ಕೆ ತರಲಾಯಿತು. ಸಮಯ ಬಂದರೆ ಬ್ರಾಹ್ಮಣರು ಕತ್ತಿಯನ್ನು ಹಿಡಿದು ಹೋರಾಡಬೇಕು ಮತ್ತು ತಮ್ಮ ನಿಯಮಗಳನ್ನು ರಕ್ಷಿಸಿಕೊಳ್ಳಲು ರಾಜನನ್ನಾದರೂ ಸರಿ ಸಾಯಿಸಬೇಕು ಎನ್ನುವುದು ಬೃಹದ್ರಥನ ಕೊಲೆಯಿಂದ ಸಾಬೀತಾಗಿದೆ. ಬೃಹದ್ರಥನ ಕೊಲೆ ಮತ್ತು ಮನುಸ್ಮೃತಿ ಎರಡಕ್ಕೂ ಸಂಬಂಧವಿರುವುದಾಗಿ ತಿಳಿದುಬಂದಿರುವುದರಿಂದ ಮನುಸ್ಮೃತಿಯನ್ನು ಕ್ರಿ. ಪೂ. 185ರ ನಂತರವೇ ಬರೆಯಲಾಗಿದೆ ಎಂದು ಹೇಳಬಹುದು. ಹಾಗಾಗಿ, ಕ್ರಿ. ಶ. ಎರಡನೇ ಶತಮಾನದವರೆಗೆ ಅಸ್ಪೃಶ್ಯತೆ ಎಲ್ಲೂ ನಿಖರವಾಗಿ ದಾಖಲಾಗಿಲ್ಲ.

ಈಗ ಅಸ್ಪೃಶ್ಯತೆ ಹುಟ್ಟಿದ ಕೆಳಹಂತದ ಕಾಲವನ್ನು ತಿಳಿದುಕೊಳ್ಳೋಣ. ಕ್ರಿ.ಶ. 400ರಲ್ಲಿ ಭಾರತಕ್ಕೆ ಬಂದ ಚೀನಾ ಪ್ರವಾಸಿಗ ಫಾಹಿಯಾನ್ ಭಾರತದ ಜನರ ಬಗ್ಗೆ ಹೀಗೆ ವಿವರಿಸಿದ್ದಾನೆ. ಮಥುರಾ ದಕ್ಷಿಣಕ್ಕೆ ಮಧ್ಯದೇಶ ಎಂದು ಕರೆಯುವರು. ಇಲ್ಲಿನ ಹವಾಗುಣ ಉಷ್ಣದಿಂದ ಕೂಡಿದ್ದು, ಘನಹಿಮ ಮತ್ತು ಹಿಮಧೂಳು ಎಲ್ಲೂ ಕಾಣಬರುವುದಿಲ್ಲ. ಜನರು ಐಶ್ವರ್ಯವಂತರಾಗಿದ್ದು, ರಾಜರಿಗೆ ಯಾವುದೇ ತೆರಿಗೆಗಳನ್ನು ನೀಡದೆ, ಎಂತಹ ಕಟ್ಟುಪಾಡುಗಳಿಗೂ ಸಿಲುಕಿಕೊಂಡಿಲ್ಲ. ಫಲವತ್ತಾದ ಭೂಮಿಯನ್ನು ಉತ್ತು ಬೆಳೆಯುವ ಬೆಳೆಗಳಿಂದ ಬರುವ ಲಾಭದಲ್ಲಿ ಸ್ವಲ್ಪ ಭಾಗವನ್ನು

ಮಾತ್ರ ರಾಜರಿಗೆ ನೀಡುತ್ತಾರೆ. ರಾಜರು ಕಟ್ಟಾಜ್ಞೆಗಳನ್ನೇನೂ ಆದೇಶಿಸುವುದಿಲ್ಲ. ಆದರೆ ತಪ್ಪಿತಸ್ಥರನ್ನು ತಪ್ಪಿಗೆ ಅನುಗುಣವಾಗಿ ದಂಡಿಸುತ್ತಾರೆ. ಪದೇ ಪದೇ ಕ್ರೂರ ತಪ್ಪುಗಳನ್ನು ಮಾಡುವವರ ಬಲಗೈಯನ್ನು ಮಾತ್ರ ಕಡಿದುಹಾಕುತ್ತಾರೆ. ರಾಜನ ಖಾಸಗಿ ಕೆಲಸಗಾರರಿಗೆ ಸಂಬಳವನ್ನು ನಿಗದಿ ಮಾಡಲಾಗಿದೆ. ಇಡೀ ರಾಜ್ಯದಾದ್ಯಂತ ಪ್ರಾಣಿಗಳನ್ನು ಕೊಲ್ಲುವುದಾಗಲಿ, ಮದ್ಯ ಸೇವನೆಯಾಗಲಿ ಇಲ್ಲ. ಅಷ್ಟೇಕೆ ಬೆಳ್ಳುಳ್ಳಿ, ಈರುಳ್ಳಿಯನ್ನು ಸಹ ತಿನ್ನುವುದಿಲ್ಲ. ಆದರೆ ಚಂಡಾಳರೆಂಬ ದುಷ್ಟ ಮನುಷ್ಯರಿದ್ದು, ಅವರು ಪ್ರತ್ಯೇಕ ಸ್ಥಳಗಳಲ್ಲಿ ವಾಸಿಸುತ್ತಿದ್ದು ಮೀನು, ಮಾಂಸ ಎಲ್ಲವನ್ನೂ ಭಕ್ಷಿಸುತ್ತಾರೆ. ಚಂಡಾಳರು ಹಳ್ಳಿ, ಪಟ್ಟಣ ಮತ್ತು ಮಾರುಕಟ್ಟೆಯ ಒಳಗೆ ಪ್ರವೇಶಿಸುವಾಗ ಶಬ್ದಮಾಡಿಕೊಂಡು ಬರುತ್ತಾರೆ. ಆಗ ಇತರ ಹಿಂದೂಗಳು ಅವರ ಎದುರಿಗೆ ಬರುವುದಿಲ್ಲ. ಈ ದೇಶದಲ್ಲಿ ಜನರು ಬಾತುಕೋಳಿ ಮತ್ತು ಕೋಳಿಗಳನ್ನು ಸಾಕುವುದಿಲ್ಲ, ಆಕಳನ್ನು ಮಾರುವುದಿಲ್ಲ.

ಫಾಹಿಯಾನ್ ಅವರ ಈ ವಿವರಣೆಯಿಂದ ಅಸ್ಪೃಶ್ಯತೆಯ ಜಾಡು ಸ್ವಲ್ಪಮಟ್ಟಿಗೆ ಇರುವುದಾಗಿ ತಿಳಿದುಬರುತ್ತದೆ. ಇದಕ್ಕೆ ಒತ್ತು ನೀಡುವಂತಹ ಇನ್ನೊಂದು ಘಟನೆಯನ್ನು ಬಾಣನ 'ಕಾದಂಬರಿ'ಯಲ್ಲಿ ಬರುವ ಚಂಡಾಳರ ಬಗೆಗಿನ ವಿವರವನ್ನು ನೋಡಬಹುದು. ಈ ಕಥೆಯಲ್ಲಿ ಒಂದು ಕಡೆ ಚಂಡಾಳರ ಹುಡುಗಿಯ ಹತ್ತಿರವಿರುವ 'ವೈಶಂಪಾಯನ' ಎಂಬ ಗಿಳಿ ಕಥೆ ಹೇಳುತ್ತದೆ.

ನಾನು ಬಹಳ ದುಷ್ಟ ಕಾರ್ಯಗಳಲ್ಲಿ ತೊಡಗಿರುವ ಜನರು ವಾಸಿಸುವ ಮಾರುಕಟ್ಟೆ ಸ್ಥಳದಿಂದ ಪ್ರಾರಂಭಿಸುತ್ತೇನೆ. ಈ ಸುತ್ತಲ ಸ್ಥಳವನ್ನು ಹುಡುಗರು ಮತ್ತು ಯುವಕರು ಸುತ್ತುವರಿದಿದ್ದು, ಆಯುಧಗಳನ್ನು ಹಿಡಿದುಕೊಂಡು ವಿಕಾರ ತೊಡುಗೆಗಳಲ್ಲಿ ಪ್ರಾಣಿಗಳನ್ನು ಬೇಟೆಯಾಡುತ್ತ, ಮೀನು ಹಿಡಿಯುತ್ತ ದೆವ್ವಗಳಂತೆ ಅಲೆದಾಡುತ್ತಾರೆ. ಅವರ ಗುಡಿಸಿಲುಗಳಿಗೆ ಹೋಗುವ ದಾರಿಗಳು ಬಿದಿರು ಮೆಳೆಗಳಿಂದ ಸುತ್ತುವರಿದಿದ್ದು ದಟ್ಟ ಹೊಗೆ ಹಬ್ಬಿಕೊಂಡಿರುತ್ತದೆ. ಎಲ್ಲಾ ಕಡೆಯೂ ಬೂದಿರಾಶಿಗಳಿದ್ದು ಜೊತೆಗೆ ಎಲುಬು ಬುರುಡೆಗಳು ರಾಶಿ ರಾಶಿಯಾಗಿ ಬಿದ್ದಿವೆ. ಗುಡಿಸಿಲುಗಳ ಪ್ರತಿ ಸ್ಥಳವೂ ರಕ್ತ, ಕೊಬ್ಬು ಮತ್ತು ಮಾಂಸದ ತುಣುಕುಗಳಿಂದ ತುಂಬಿಕೊಂಡಿದೆ. ಗುಡಿಸಿಲುಗಳ ಒಳಗೆ ನಾಯಿಗಳು ಹಾಗೂ ಹೊರಗೆ ಗುಡಿಸಿಲುಗಳ ಸುತ್ತಲೂ ಹಸುಗಳನ್ನು ಮತ್ತು ಸವಾರಿ ಮಾಡುವ ಪ್ರಾಣಿಗಳನ್ನು ಸಹ ಇಟ್ಟುಕೊಂಡಿದ್ದಾರೆ. ಮದ್ಯ ಮತ್ತು ಹೆಣ್ಣುಗಳು ಅಲ್ಲಿ ಸರ್ವೇಸಾಮಾನ್ಯ. ದೇವರಿಗೆ ರಕ್ತ ತರ್ಪಣ ನಡೆಯುತ್ತಲೇ ಇರುತ್ತದೆ. ಒಟ್ಟಿನಲ್ಲಿ ಈ ಸ್ಥಳ ಎಲ್ಲಾ ರೀತಿಯಲ್ಲೂ ನರಕವಿದ್ದಂತಿದೆ.

ಇಂತಹ ಸ್ಥಳದಿಂದ ಚಂಡಾಳರ ಹುಡುಗಿ 'ವೈಶಂಪಾಯನ' ಎಂಬ ಗಿಳಿಯ ಸಮೇತ ರಾಜನ ಆಸ್ಥಾನದ ಕಡೆಗೆ ನಡೆದುಬರುತ್ತಾಳೆ. ಶೂದ್ರಕ ರಾಜ ತನ್ನ ಮಂತ್ರಿಗಳು ಮತ್ತು ಪ್ರಜೆಗಳ ಸಮೇತ ಅರಮನೆಯ ದರ್ಬಾರಿನಲ್ಲಿರುವಾಗ ಒಳಬಂದ ಸೇವಕ ಈ ರೀತಿಯಾಗಿ ಸಂದೇಶವನ್ನು ಕೊಡುತ್ತಾನೆ. 'ಮಹಾರಾಜ, ಅರಮನೆಯ ಪ್ರವೇಶದ್ವಾರದಲ್ಲಿ ಚಂಡಾಳರ ಯುವತಿಯೊಬ್ಬಳು ಪ್ರವೇಶಕ್ಕೆ ಕಾಯುತ್ತಿದ್ದಾಳೆ, ಒಮ್ಮೆ ಶ್ರೇಷ್ಠ ವಂಶದ ತ್ರಿಶಂಕು ಇಂದ್ರನ ಕೋಪಕ್ಕೆ ಬಲಿಯಾಗಿ ಕೆಳಕ್ಕೆ ಬಿದ್ದ ವಂಶದವಳು. ಅವಳು ಪಂಜರದಲ್ಲಿ ಒಂದು ಗಿಳಿಯನ್ನು ತಂದಿರುವಳು. ಸಮುದ್ರದಂತೆ ವಿಶಾಲವಾಗಿ

ಪ್ರಪಂಚದ ಕಲೆಯನ್ನೇ ತುಂಬಿಕೊಂಡಿರುವ ಆ ಗಿಳಿ ಇಡೀ ಭೂಮಂಡಲದಲ್ಲಿಯೇ ದೊಡ್ಡ ನಿಧಿಯಂತೆ. ಓ ರಾಜ ಆ ಗಿಳಿ ಏನು ಹೇಳುತ್ತದೆಯೋ ಅದನ್ನು ತಾವು ಕೇಳಬೇಕೆಂದು ಅವಳು ಇಚ್ಛಿಸುತ್ತಾಳೆ. ತಾವು ಅಪ್ಪಣೆ ನೀಡಿದರೆ ಆ ಯುವತಿಯನ್ನು ತಮ್ಮ ಮುಂದೆ ಬರಲು ಹೇಳುತ್ತೇನೆ' ಎಂದ ಸೇವಕ. ಸಂತೋಷಗೊಂಡ ರಾಜನು ಸುತ್ತಲೂ ಒಮ್ಮೆ ತನ್ನ ಮಂತ್ರಿಗಳನ್ನು ನೋಡಿ 'ಏಕಾಗಬಾರದು..?' ಎಂದು ಅವಳಿಗೆ ಒಳಕ್ಕೆ ಬರಲು ಅಪ್ಪಣೆ ನೀಡುತ್ತಾನೆ. ದ್ವಾರಪಾಲಕ ಯುವತಿಯನ್ನು ಒಳಕ್ಕೆ ಹೋಗುವಂತೆ ಸನ್ನೆ ಮಾಡುತ್ತಾನೆ. ಯುವತಿ ಒಳಕ್ಕೆ ನಡೆದುಬರುತ್ತಾಳೆ.

ಮೊದಲಿಗೆ ರಾಜ ಮತ್ತು ಅವನ ಮಂತ್ರಿಗಳು ಅವಳ ಕಡೆಗೆ ಗಮನ ನೀಡದಿದ್ದಾಗ ಯುವತಿ ಬಿದಿರು ಬೆತ್ತವನ್ನು ಎಲ್ಲರಿಗೂ ಕೇಳಿಸುವಂತೆ ಕೆಳಕ್ಕೆ ಹಾಕುತ್ತಾಳೆ. ಬಾಣ ತನ್ನ 'ಕಾದಂಬರಿ'ಯಲ್ಲಿ ಅವಳ ಬಗ್ಗೆ ಹೀಗೆ ವರ್ಣಿಸುತ್ತಾನೆ. 'ಶೂದ್ರಕರಾಜ ಅವಳ ಕಡೆಗೆ ನೋಡಿದ. ಅವಳ ಬಣ್ಣ ಕೃಷ್ಣನನ್ನು ಹೋಲುವಂತಿತ್ತು. ಅವಳೊಂದು ನೀಲಮಣಿ ಬೊಂಬೆಯಂತೆ ಕಾಣಿಸುತ್ತಿದ್ದು, ನೀಲಿ ಉಡುಗೆಯನ್ನು ಧರಿಸಿದ್ದಳು. ಕೆಂಪು ಉಣ್ಣೆಯ ದಾವಣಿ ಸಾಯಂಕಾಲದ ಬಣ್ಣದಂತೆ ಹೊಳೆಯುತ್ತಿದ್ದು ಅದು ನೀಲಿ ತಾವರೆ ಹೂವಿನ ಮೇಲೆ ಬೀಳುತ್ತಿದ್ದ ಸಂಜೆಯ ಬೆಳಕಿನಂತೆ ಕಂಗೊಳಿಸುತ್ತಿತ್ತು. ಕಿವಿಯಲ್ಲಿ ನೇತಾಡುತ್ತಿದ್ದ ಅಗಲವಾದ ಕಿವಿ ಉಂಗುರದ ಹಿಂದಿನ ಕೆನ್ನೆ ಬಿಳುಪಾಗಿ ರಾತ್ರಿಯನ್ನು ಸುತ್ತುವರಿದ ಚಂದಿರನ ಕಿರಣಗಳಿಂದ ಹೊಳೆಯುತ್ತಿರುವಂತೆ ತೋರುತ್ತಿತ್ತು. ಅವಳ ಹಣೆಯಲ್ಲಿದ್ದ ಗೋರೋಚನ ತಿಲಕ ಮೂರನೇ ಕಣ್ಣಿನಂತೆ ಕಾಣಿಸುತ್ತಿದ್ದು, ಅವಳು ಪಾರ್ವತಿಯಂತೆ ಕಾಣುತ್ತಿದ್ದಳು. ಅವಳು ರತಿಯಂತೆ ಕಾಣುತ್ತಿದ್ದು, ಶಿವ ಮದನನನ್ನು ಸುಟ್ಟಾಗ ಎದ್ದ ಹೊಗೆ ಅವಳನ್ನು ಸುತ್ತುವರಿದಂತೆ ತೋರುತ್ತಿತ್ತು. ಅವಳ ತಾವರೆ ಪಾದಗಳು ದುರ್ಗೆಯ ಪಾದಗಳಂತೆ ಅಸುರರ ರಕ್ತವನ್ನು ಹಚ್ಚಿಕೊಂಡಂತೆ ಕೆಂಪಾಗಿ ಕಾಣುತ್ತಿದ್ದವು. ಅವಳ ಅತಿ ಕೋಮಲ ಬೆರಳುಗಳ ಕೊನೆಯಲ್ಲಿನ ಉಗುರುಗಳು ಕೆಂಪಾಗಿದ್ದು ಅವುಗಳ ಕೋಮಲತೆಯ ಸ್ಪರ್ಶಕ್ಕೆ ನೆಲ ಒರಟೆನ್ನುವಂತಿತ್ತು. ಅವಳು ಮುಂದಕ್ಕೆ ನಡೆದು ಬಂದು ಬಳ್ಳಿಯಂತಹ ತನ್ನ ಕಾಲುಗಳನ್ನು ಮಡಿಚಿ ಕುಳಿತುಕೊಂಡಳು. ಅವಳ ಕಿವಿ ಉಂಗುರಗಳಿಂದ ಏಳುವ ಕಿರಣಗಳು ಬೆಂಕಿಯ ಜ್ವಾಲೆಯ ಬಣ್ಣದಿಂದ ಅವಳನ್ನು ಸುತ್ತುವರಿದಿತ್ತು. ಅಗ್ನಿ ಅವಳ ಸೌಂದರ್ಯದ ಮೇಲೆ ವ್ಯಾಮೋಹವನ್ನು ತೋರಿಸುವಂತಿತ್ತು. ಅಗ್ನಿ ಅವಳ ಹುಟ್ಟಿನ ಅಪವಾದವನ್ನು ಶುದ್ಧಿಮಾಡಿ ಅವಳ ಸೃಷ್ಟಿಕರ್ತನನ್ನೇ ತೊಂದರೆಗೆ ಸಿಲುಕಿಸುವಂತೆ ಆತುರದಲ್ಲಿದ್ದ. ಅವಳ ಕೊರಳ ಹಾರ ಹೊಳೆಯುವ ಮುತ್ತುಗಳಿಂದ ಕೂಡಿದ್ದು ಹರಿಯುವ ಗಂಗೆಯಂತೆ ಹೊಳೆಯುತ್ತಿತ್ತು. ಶರದೃತುವಿನ ಆಗಮನದಂತೆ ಅವಳ ತಾವರೆ ಕಣ್ಣುಗಳು ತೆರೆದುಕೊಳ್ಳುತ್ತ, ಮಳೆಗಾಲದಲ್ಲಿನ ಮೋಡಗಳಂತೆ ಅವಳ ಕೂದಲು ಮಲೆಯ ತಪ್ಪಲುಗಳಂತೆ, ನಕ್ಷತ್ರಗಳಂತೆ ಹೊಳೆವ ವೈಢೂರ್ಯಗಳಿಂದ ಸಿಂಗಾರಗೊಂಡಿವೆ. ತಾವರೆಯಷ್ಟು ಸೊಗಸನ್ನು ಅವಳು ತುಂಬಿಕೊಂಡಿದ್ದು, ಎಲ್ಲರ ಹೃದಯವನ್ನು ಗೆದ್ದು ನಡೆದಾಡುವ ಸೌಂದರ್ಯವೇ ಅವಳಾಗಿದ್ದಾಳೆ. ಪುಟ್ಟ ದೇವತೆಯಂತೆ ಕಂಗೊಳಿಸುತ್ತ ಮಾತಂಗ ಹುಟ್ಟನ್ನು ಮರೆಸುವಂತಿದ್ದಾಳೆ. ಅವಳು ಯಾವ ಬುಡಕಟ್ಟಿಗೂ ಸೇರಿದವಳಂತೆ ಕಾಣಿಸುವುದಿಲ್ಲ. ಎಲ್ಲರ ಕಣ್ಣುಗಳಿಗೂ ಆಕರ್ಷಣೀಯವಾಗಿ ಕಾಣುತ್ತಿದ್ದಾಳೆ'.

ಚಂಡಾಳರ ಹುಡುಗಿಯ ಬಗ್ಗೆ ಮೇಲಿನ ವಿವರಣೆಯನ್ನು ಓದಿದ ಮೇಲೆ ಹಲವು ರೀತಿಯ ಸಂದೇಹಗಳು ಮೂಡುತ್ತವೆ. ಫಾಹಿಯಾನ್ ನೀಡಿರುವ ವಿವರಣೆಗಿಂತ ಇದು ಎಷ್ಟೋ ವ್ಯತ್ಯಾಸವಾದ ವಿವರಣೆ. ಬಾಣ, ವಾತ್ಸ್ಯಾಯನ ಬ್ರಾಹ್ಮಣ. ಈ ವಾತ್ಸ್ಯಾಯನ ಬ್ರಾಹ್ಮಣ ಚಂಡಾಳರ ಹುಡುಗಿಯ ಸೊಗಸನ್ನು ಅಷ್ಟು ಕೊಂಡಾಡಿ ವರ್ಣಿಸಲು ಕಾರಣವೇನು? ಅಸ್ಪೃಶ್ಯರೆಂದು ತಕ್ಷಣವೆ ಹೌಹಾರುವ ಬ್ರಾಹ್ಮಣರು ಚಂಡಾಳರ ಹುಡುಗಿಯ ಬಗ್ಗೆ ಇಷ್ಟು ದೀರ್ಘವಾಗಿ ವರ್ಣಿಸಲು ಸಾಧ್ಯವೆ? ಚಂಡಾಳರು ಅಸ್ಪೃಶ್ಯರಾದ ಪಕ್ಷದಲ್ಲಿ ಅವಳನ್ನು ರಾಜನಿರುವ ಸ್ಥಳಕ್ಕೆ ಬಿಡುತ್ತಿದ್ದರೆ? ಬಾಣನ ಕಾಲದಲ್ಲಿ ಚಂಡಾಳರ ಕುಟುಂಬಗಳು ಎಲ್ಲರ ಜೊತೆಗೂ ಸಾಮಾಜಿಕ ಸಂಬಂಧಗಳನ್ನು ಹೊಂದಿದ್ದವೆ? ಈ ಕಥೆಯನ್ನು ಬಾಣ ಸುಮಾರು ಕ್ರಿ. ಶ. 600ರಲ್ಲಿ ಬರೆದಿದ್ದು, ಚಂಡಾಳರ ಯುವತಿಯನ್ನು ಚಂಡಾಳ ರಾಣಿಯೆಂದು ವರ್ಣಿಸಿರುವುದನ್ನು ನಾವು ಇಲ್ಲಿ ನೋಡಬಹುದಾಗಿದೆ.

ಅಂದರೆ ಕ್ರಿ. ಶ. 600ರವರೆಗೂ ಚಂಡಾಳರನ್ನು ಅಸ್ಪೃಶ್ಯರೆಂದು ಬಹಿಷ್ಕರಿಸಿರಲಿಲ್ಲ ಎಂಬ ವಿಚಾರ ಸ್ಪಷ್ಟವಾಗುತ್ತದೆ. ಫಾಹಿಯಾನ್ ವಿವರಣೆ ನೀಡಿರುವ ಕಾಲ ಕ್ರಿ. ಶ. 400 ಆಗಿದ್ದು, ಅದು ಅಸ್ಪೃಶ್ಯತೆ ಹುಟ್ಟಿಕೊಳ್ಳುತ್ತಿದ್ದ ಕಾಲವಿರಬೇಕು. ಫಾಹಿಯಾನ್ ಭಾರತಕ್ಕೆ ಭೇಟಿ ನೀಡಿದಾಗ ಗುಪ್ತರು ರಾಜ್ಯವಾಳುತ್ತಿದ್ದು, ಬ್ರಾಹ್ಮಣ್ಯವನ್ನು ನೆಚ್ಚಿಕೊಂಡಿದ್ದರು. ಫಾಹಿಯಾನ್ ವಿವರಣೆ ನೀಡಿರುವುದನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಅಸ್ಪೃಶ್ಯತೆಯೆಂಬ ಅಪವಾದ ಆ ಕಾಲಕ್ಕೆ ಚಂಡಾಳರಿಗೆ ತಟ್ಟಿರಲಿಲ್ಲ ಎನ್ನಬಹುದು. ಅದು ಬ್ರಾಹ್ಮಣರು ಚಂಡಾಳರನ್ನು ಅಶುದ್ಧರೆಂದು ಹೇಳಿ ಸಭೆ ಸಮಾರಂಭಗಳಿಂದ ದೂರವಿಟ್ಟ ಕಾಲವಾಗಿರಬೇಕು.

ಚೀಣಾ ದೇಶದ ಯುವಾನ್ ಚ್ವಾಂಗ್ ಕ್ರಿ. ಶ. 629ರಲ್ಲಿ ಭಾರತಕ್ಕೆ ಆಗಮಿಸಿ 16 ವರ್ಷಗಳ ಕಾಲ ಇಡೀ ಭಾರತ ದೇಶವನ್ನೆಲ್ಲ ಸುತ್ತಾಡಿ ಕಂಡಿದ್ದನ್ನೆಲ್ಲ ನಿಖರವಾಗಿ ದಾಖಲಿಸಿದನು. ಅವನ ಒಂದು ವಿವರಣೆ ಹೀಗಿದೆ: 'ಹಿಂದೂಗಳು ಜೀವನ ನಡೆಸುವ ಪಟ್ಟಣ, ನಗರಗಳು ಚತುರ್ಭುಜಾಕೃತಿಯ ಎತ್ತರದ ಗೋಡೆಗಳಿಂದ ಸುತ್ತುವರಿದಿದ್ದು, ಒಳಗಿನ ಬೀದಿಗಳು ಇಕ್ಕಟ್ಟಾಗಿ ಸಣ್ಣದಾಗಿವೆ. ಅಂಗಡಿಗಳು ಮತ್ತು ಉಪಾಹಾರ ಗೃಹಗಳು ಮಾತ್ರ ವಿಶಾಲವಾದ ರಸ್ತೆಗಳಲ್ಲಿವೆ. ಶಿರಚ್ಛೇದನ ಮಾಡುವವರು ಅಥವಾ ಗಲ್ಲಿಗೇರಿಸುವವರು, ಕಟುಕರು, ಮೀನುಗಾರರು, ಸಾರ್ವಜನಿಕ ನಟನಟಿಯರು ಮತ್ತು ಜಾಡಮಾಲಿಗಳು ತಮ್ಮದೇ ಆದ ಪ್ರತ್ಯೇಕ ಸ್ಥಳಗಳಲ್ಲಿ ವಾಸಿಸುತ್ತಾರೆ. ಅವರನ್ನು ನಗರ ಮತ್ತು ಪಟ್ಟಣಗಳ ಹೊರಗಡೆ ವಾಸಿಸಲು ಹಿಂದೂಗಳು ಒತ್ತಾಯ ಮಾಡುತ್ತಾರೆ. ಆ ಕಡೆಗೆ ಯಾರೇ ನಡೆದುಹೋದರೂ ಅವರು ತಮ್ಮ ಸಣ್ಣ ಸಣ್ಣ ಗುಡಿಸಿಲು ಬಾಗಿಲುಗಳಿಂದ ಹೊರಕ್ಕೆ ಇಣಿಕಿ ನೋಡುವರು'.

ಈ ವಿವರಣೆ ಹೆಚ್ಚು ವಿವರಗಳಿಂದ ಕೂಡಿದ್ದಲ್ಲದಿದ್ದರೂ ಫಾಹಿಯಾನ್ ಚಂಡಾಳರ ಸಮಾಜದ ಬಗ್ಗೆ ಮಾತ್ರ ಹೇಳಿದ್ದು, ಯುವಾನ್ ಚ್ವಾಂಗ್ ಚಂಡಾಳರ ಜೊತೆಗೆ ಇನ್ನೂ ಹಲವು ಸಮಾಜಗಳ ಬಗ್ಗೆ ವಿವರಣೆ ನೀಡಿ ಅವರು ಪ್ರತ್ಯೇಕವಾಗಿ ಹಳ್ಳಿ ಪಟ್ಟಣಗಳ ಹೊರಗೆ ವಾಸಿಸುವುದನ್ನು ತಿಳಿಸಿದ್ದಾನೆ. ಇದು ಬಹಳ ಮುಖ್ಯವಾದ ವಿವರಣೆಯಾಗಿದ್ದು ಯುವಾನ್ ಚ್ವಾಂಗ್ ಭಾರತಕ್ಕೆ ಭೇಟಿ ನೀಡಿದಾಗ ಅಸ್ಪೃಶ್ಯತೆ ಸಂಪೂರ್ಣವಾಗಿ ಒಂದು ಹಂತಕ್ಕೆ ಬೆಳೆದಿತ್ತು ಎನ್ನುವ ವಿಷಯ ಸ್ಪಷ್ಟವಾಗುತ್ತದೆ. ಮೇಲೆ ವಿಶ್ಲೇಷಿಸಿರುವ ಇನ್ನಿತರ

ಸಾಮಾಜಿಕ ನೆಲೆಗಳ ಆಧಾರದ ಮೇಲೆ ಅಸ್ಪೃಶ್ಯತೆ ಕ್ರಿ. ಶ. 200ರವರೆಗೆ ಇಲ್ಲದೆ ಇದ್ದು, ಕ್ರಿ. ಶ. 600ರಲ್ಲಿ ಅದು ಸಂಪೂರ್ಣವಾಗಿ ಕಾಣಿಸಿಕೊಂಡಿತ್ತು ಎಂದು ಹೇಳಬಹುದು. ಈ ನಡುವಿನ ಕಾಲದಲ್ಲಿ ಅಸ್ಪೃಶ್ಯತೆ ಹುಟ್ಟಿಕೊಂಡಿರಬೇಕು. ಈ 400 ವರ್ಷಗಳ ನಡುವಿನ ಕಾಲದಲ್ಲಿ ಅಸ್ಪೃಶ್ಯತೆಯ ಗೆರೆಯನ್ನು ನಾವು ಗುರುತಿಸಬೇಕಾಗಿದೆ.

ಇದರ ಜೊತೆಗೆ ಗೋಮಾಂಸ ಭಕ್ಷಣೆಯನ್ನು ತ್ಯಜಿಸಿದ ಕಾಲವನ್ನು ಸಹ ನಾವು ಹೋಲಿಸಿ ನೋಡಬೇಕಾಗಿದೆ. ಬ್ರಾಹ್ಮಣರು ಮತ್ತಿತರ ಹಿಂದೂಗಳು ಹಸುವನ್ನು ಗೋಮಾತೆಯೆಂದು ಪೂಜಿಸಲು ಪ್ರಾರಂಭಿಸಿ, ಗೋಹತ್ಯೆ ಮಹಾಪಾಪವೆಂದು ಸಾರಿದಾಗಲೂ ಕೆಲವು ಸಮಾಜಗಳು (ಹಳ್ಳಿ, ಪಟ್ಟಣಗಳ ಹೊರಗಿದ್ದ ಛಿದ್ರವಾದ ಬುಡಕಟ್ಟು ಸಮಾಜಗಳು) ಗೋಮಾಂಸ ಭಕ್ಷಣೆಯನ್ನು ಮುಂದುವರಿಸಿದವು. ಇದೇ ಅಸ್ಪೃಶ್ಯತೆಯ ಹುಟ್ಟಿಗೆ ಮೂಲ ಕಾರಣವಾಗಿರಬೇಕು. ಗೋಹತ್ಯೆಯನ್ನು ಯಾವ ಕಾಲದಲ್ಲಿ ನಿಷೇಧಿಸಲಾಯಿತು ಎನ್ನುವುದನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಮನುವಿನ ಕಾಲದಲ್ಲಿ ಗೋಹತ್ಯೆ ಮತ್ತು ಗೋಮಾಂಸ ಭಕ್ಷಣೆಯನ್ನು ನಿಷೇಧಿಸಿರಲಿಲ್ಲ ಎಂದು ತಿಳಿದುಬರುತ್ತದೆ. ಗುಪ್ತ ರಾಜರು ಗೋಹತ್ಯೆ ಮಹಾಪಾಪವೆಂದು ಸಾರಿದ್ದು ಸರಿಸುಮಾರು ಕ್ರಿ.ಶ. 4ನೇ ಶತಮಾನದಲ್ಲಿ. ಆದುದರಿಂದ ಅಸ್ಪೃಶ್ಯತೆ ಕ್ರಿ.ಶ. 4ನೇ ಶತಮಾನದಲ್ಲಿ ಹುಟ್ಟಿಕೊಂಡಿತು ಎಂದು ಹೇಳಬಹುದಾಗಿದೆ. ಇದು ಬ್ರಾಹ್ಮಣರು ಮತ್ತು ಬೌದ್ಧ ಧರ್ಮಗಳ ನಡುವಿನ ಹೋರಾಟದ ಮಧ್ಯ ಕಾಲವೂ ಹೌದು.

## ಅಸ್ಪೃಶ್ಯರ ಹುಟ್ಟಿಗೆ ವಿವಿಧ ಜನಾಂಗಗಳು ಕಾರಣವೆ?

ನಮ್ಮವರು ಮತ್ತು ವಿದೇಶಿಯರು ಭಾರತದ ಬಗ್ಗೆ ತಿಳಿದುಕೊಳ್ಳಲು ಇಚ್ಛಿಸುವಾಗ ಮೊದಲಿಗೆ ಪ್ರಪಂಚದಲ್ಲಿಯೇ ಪ್ರಾಚೀನ ಸಂಸ್ಕೃತಿ ಎನ್ನುವ ಹಿಂದೂ ಧರ್ಮ ಅದರ ವೇದ-ಪುರಾಣಗಳು, ಹಬ್ಬ ಆಚರಣೆಗಳು, ಶಿಲ್ಪಕಲೆ ದೇವಾಲಯಗಳು, ಭಾಷೆ, ವೇಷ ಭೂಷಣಗಳು, ನಗ್ನ ಸನ್ಯಾಸಿಗಳು, ತಿಂಡಿ ತೀರ್ಥಗಳು, 33 ಕೋಟಿ ದೇವರುಗಳು – ಹೀಗೆ ಎಲ್ಲದರ ಬಗ್ಗೆ ಅಧ್ಯಯನಗಳನ್ನು ನಡೆಸುತ್ತಾರೆ. ಆದರೆ ಜಾತಿಗಳ ಬಗ್ಗೆಯಾಗಲಿ, ಅಸ್ಪೃಶ್ಯತೆಯ ಬಗ್ಗೆಯಾಗಲಿ ನಮ್ಮಲ್ಲಿರುವ ನೀಚ ಪ್ರವೃತ್ತಿ, ಕೀಳು ಮಟ್ಟದ ಆಚಾರ ವಿಚಾರಗಳ ಬಗ್ಗೆಯಾಗಲಿ ಯಾರೂ ಚಕಾರ ಎತ್ತುವುದಿಲ್ಲ. ಇದಕ್ಕೆ ಮುಖ್ಯಕಾರಣ ನೂರಾರು ವರ್ಷಗಳಿಂದ ಶೂದ್ರ ಮತ್ತು ಅಸ್ಪೃಶ್ಯ ಜನಾಂಗಗಳನ್ನು ವಿದ್ಯೆಯಿಂದ ವಂಚಿಸಿ ದೂರವಿರಿಸಿದ್ದು.

ಇಂದು ಮರಾಠಿ ಭಾಷೆಯ ದಲಿತ ಸಾಹಿತ್ಯದ ಆತ್ಮಕಥೆಗಳಲ್ಲಿ ದಲಿತರ ಬವಣೆಗಳು ಸ್ವಲ್ಪಮಟ್ಟಿಗೆ ಅನಾವರಣಗೊಂಡಿರುವುದಕ್ಕೆ ದಲಿತರು ನಾಲ್ಕು ಅಕ್ಷರ ಕಲಿತುಕೊಂಡಿದ್ದೇ ಕಾರಣವಾಗಿದೆ. ಈ ಪವಾಡ ನಡೆಯಲು ದಲಿತರು 20ನೇ ಶತಮಾನದ ಅಂತ್ಯದವರೆಗೂ ಕಾಯಬೇಕಾಯಿತು. ಭಾರತಕ್ಕೆ ಬ್ರಿಟಿಷರು ಬರಬೇಕಾಯಿತು. ಜೊತೆಗೆ ಅಂಬೇಡ್ಕರ್ ಎಂಬ ಮಹಾಮಾನವತಾವಾದಿ ಮಹಾರಾಷ್ಟ್ರದಲ್ಲಿ ಹುಟ್ಟಿ ಹಿಂದೂ ಧರ್ಮದಲ್ಲಿನ ಹುಳುಕುಗಳನ್ನೆಲ್ಲ ಹೊರಕ್ಕೆ ತೆಗೆಯಬೇಕಾಯಿತು. ಅದೇ ಮೇಲ್ಜಾತಿಯವರು ಜಾತಿ, ಅಸ್ಪೃಶ್ಯತೆ, ಹಸಿವು ಮತ್ತು ಸಾಮಾಜಿಕ ತೊಂದರೆಗಳಿಗೆ ಸಿಲುಕದವರು ಬರೆಯುವುದಾದರೂ ಏನನ್ನ? ಅವರಿಗೆ ಹಿಂದೂ ಧರ್ಮದ ಎಲ್ಲಾ

ಪದ್ಧತಿಗಳು, ಆಚಾರ ವಿಚಾರಗಳು ಸುಂದರವಾಗಿ ಮತ್ತು ಭವ್ಯವಾಗಿಯೇ ಕಾಣಿಸುತ್ತವೆ.

ಸ್ಟಾನ್ಲಿ ರೈಸ್ ಎಂಬಾತ ಅಸ್ಪೃಶ್ಯತೆಯ ಮೂಲವನ್ನು ಹೀಗೆ ವಿಶ್ಲೇಷಿಸುತ್ತಾನೆ. ಪ್ರಸ್ತುತ ಅಲ್ಪಸಂಖ್ಯಾತರಾಗಿರುವ ಅಸ್ಪೃಶ್ಯರು ಮೂಲತಃ ದಕ್ಷಿಣ ಭಾರತದ ಮೂಲ ನಿವಾಸಿಗಳಾದ ಪರಯರು. ಪರಯರ ಮೇಲೆ ಮೊದಲಿಗೆ ದ್ರಾವಿಡರು (ಸಮುದ್ರ ಮೂಲಕ ಬಂದವರು) ಆಕ್ರಮಣ ನಡೆಸಿ ಅವರನ್ನು ಗುಲಾಮರನ್ನಾಗಿ ಮಾಡಿಕೊಂಡರು. ಅದೇ ರೀತಿಯಾಗಿ ಅನಂತರ ದ್ರಾವಿಡರನ್ನು ಸೋಲಿಸಿದ ಆರ್ಯರು, ದ್ರಾವಿಡರನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು. ಯಾವ ಜನಾಂಗ ಸೋತು ಕಂಗೆಟ್ಟಿತೋ ಅದು ಶಕ್ತಿಯುತ ಜನಾಂಗ ಹೇಳಿದ ಕೀಳು ಕೆಲಸಗಳನ್ನು ಮಾಡಿಕೊಂಡು ಗುಲಾಮರಂತೆ ಜೀವನ ನಡೆಸತೊಡಗಿತು. ದೇವಾಲಯಗಳಲ್ಲಿ ಅವರಿಗೆ ಪ್ರವೇಶವನ್ನು ನಿರಾಕರಿಸಲಾಯಿತು. ಮುಂದೆ ಕಾಲಾಂತರದಲ್ಲಿ ಪರಯರು ಮತ್ತು ದ್ರಾವಿಡರು ವಿಲೀನವಾಗಿಹೋದರು, ಸಂಭವನೀಯವಾಗಿ ಅವರು ಮಾಡುತ್ತಿದ್ದ ಮೂಲ ಕಸುಬುಗಳಾದ ಹರೆ ಬಾರಿಸುವುದು ಮತ್ತು ಚರ್ಮದ ಕೆಲಸಗಳು ಅವರ ಜೊತೆಗೆ ಹಾಗೆಯೇ ಮುಂದುವರಿದುಕೊಂಡು ಬಂದವು. ಆರ್ಯರು ಮತ್ತು ದ್ರಾವಿಡರ ನಡುವೆ ನೂರಾರು ವರ್ಷಗಳು ಸಂಘರ್ಷಣೆ ನಡೆದ ಮೇಲೆ ಇಬ್ಬರ ನಡುವೆ ವಿಲೀನತೆ ಕಾಡಿಸಿಕೊಂಡಿತು. ಆದರೂ ಕೆಲವು ಆಚಾರ ವಿಚಾರಗಳಲ್ಲಿ ಬೇರೆಯಾಗಿಯೇ ಉಳಿದುಕೊಂಡರು. ಮುಖ್ಯವಾಗಿ ಮದುವೆ, ಪೂಜೆಯ ವಿಧಾನಗಳು ಬೇರೆಯಾಗಿಯೇ ಮುಂದುವರಿದವು.

ಹಳೆಕಾಲದ ಕ್ರೈಸ್ತರ ಪ್ರಕಾರವೂ ಪರಯರು, ಕೊಳಕರು, ಅವರು ನೀರಿನಿಂದ ಸ್ನಾನ ಮಾಡಿದರೂ ಸ್ವಚ್ಛವಾಗಲಾರರು. ಮೈಲಿಗೆ ಅವರನ್ನು ಬಿಟ್ಟುಹೋಗದು. ಅವರ ಜೊತೆಗೆ ಯಾವುದೇ ರೀತಿಯ ಸಂಪರ್ಕವಿದ್ದರೂ ಕನಿಷ್ಠ ಕೈಗೆ ಎಟುಕದಷ್ಟು ದೂರದಿಂದ ವ್ಯವಹರಿಸ ಬೇಕು. ಆದರೆ ಅವರನ್ನು ಬೇರೆಯವರ ಹೊಲಗಳಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳಬಹುದು. ಏಕೆಂದರೆ ಬೇರೆಯವರು ದೂರದಿಂದಲೇ ಆಜ್ಞೆ ಮಾಡಬಹುದು. ಅವರು ಹುಟ್ಟು ಕೊಳಕರು ಮತ್ತು ಮಲಿನ ಜನರು ಎನ್ನುವುದು ಅವರ ಹಣೆಯಲ್ಲೇ ಬರೆದುಬಿಟ್ಟಿದೆ.

ಸ್ಟಾನ್ಲಿ ರೈಸ್ ಅಭಿಪ್ರಾಯದಂತೆ ಅಸ್ಪೃಶ್ಯತೆಯು ಮೂಲ ಜನಾಂಗದಿಂದ ಮತ್ತು ಅವರು ಮಾಡುತ್ತಿದ್ದ ಕಸುಬಿನಿಂದ ಬಂದಿದೆ; ಮೇಲಿನ ವಿವರಣೆ ಒಂದು ರೀತಿಯಲ್ಲಿ ಯಾಂತ್ರಿಕ ವಿವರಣೆಯಾಗಿದ್ದು ಅದು ಯಾವುದೇ ನಿಖರವಾದ ಉದಾಹರಣೆಯನ್ನು ತೋರಿಸುವುದಿಲ್ಲ. ಆದಿಕಾಲದ ಭಾರತದ ಚರಿತ್ರೆಯ ಪುಟಗಳನ್ನು ತಿರುವಿದಾಗ ಮುಖ್ಯವಾಗಿ ನಾಲ್ಕು ಹೆಸರುಗಳು ಕಾಣಿಸುತ್ತವೆ. ಆರ್ಯರು, ದ್ರಾವಿಡರು, ದಾಸರು ಮತ್ತು ನಾಗರು. ಈ ನಾಲ್ಕು ಹೆಸರುಗಳು ಬೇರೆ ಬೇರೆ ಜನಾಂಗಗಳನ್ನು ಸೂಚಿಸುತ್ತವೆಯೇ ಅಥವಾ ಒಂದೇ ಜನಾಂಗದ ಬೇರೆ ಬೇರೆ ಹೆಸರುಗಳೇ ಎನ್ನುವುದನ್ನು ಚರಿತ್ರೆಯ ಮೂಲಕ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಚರಿತ್ರಕಾರರು ಮತ್ತು ಸಂಶೋಧಕರ ಪ್ರಕಾರ ಅವು ಬೇರೆ ಬೇರೆ ಜನಾಂಗಗಳ ಬೇರೆ ಬೇರೆ ಹೆಸರುಗಳು.

ಮೂಲವಾಗಿ ಆರ್ಯರಲ್ಲಿ ಎರಡು ವಿಧ. ಋಗ್ವೇದದ ಆರ್ಯರು ಮತ್ತು ಅಥರ್ವ ವೇದದ ಆರ್ಯರು. ಋಗ್ವೇದದವರು ಯಾಗಗಳನ್ನು ನಂಬಿದರೆ, ಅಥರ್ವ ವೇದದ ಆರ್ಯರು ಮಾಂತ್ರಿಕತೆಯನ್ನು ನಂಬುತ್ತಿದ್ದರು. ಋಗ್ವೇದದ ಜನ ಪ್ರಳಯವನ್ನು

ನಂಬುತ್ತಿದ್ದು, ತಮ್ಮ ಜನಾಂಗ ಮನುವಿನಿಂದ ಸೃಷ್ಟಿಯಾಯಿತು ಎಂದು ನಂಬಿದವರು. ಅಥರ್ವ ವೇದದವರು ಪ್ರಳಯವನ್ನು ನಂಬದೆ, ತಮ್ಮ ಜನಾಂಗ ಬ್ರಹ್ಮ ಅಥವಾ ಪ್ರಜಾಪತಿಯಿಂದ ಸೃಷ್ಟಿಯಾದುದೆಂದು ನಂಬಿದ್ದರು. ಬ್ರಾಹ್ಮಣಗಳು ಮತ್ತು ಸೂತ್ರಗಳು ಋಗ್ವೇದದ ಆರ್ಯರ ಸೃಷ್ಟಿಯಾದರೆ ಉಪನಿಷತ್ತುಗಳು ಅಥರ್ವ ವೇದದ ಆರ್ಯರ ಸೃಷ್ಟಿ

## ದಾಸರು ಅಥವಾ ನಾಗಾಗಳು

ದಾಸರು ಮತ್ತು ನಾಗಾಗಳು ಒಂದೇ ಜನಾಂಗಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ದಾಹಕ ಎಂಬುವನು ನಾಗಾಗಳ ರಾಜನಾದ್ದರಿಂದ ಆ ಹೆಸರು ಬಂದಿದೆ. ಆರ್ಯರು, ದಾಹಕ ರಾಜನ ಹೆಸರಿನಲ್ಲಿ ಎಲ್ಲರನ್ನೂ ನಾಗಾಗಳೆಂದು ಕರೆಯಲು ಪ್ರಾರಂಭಿಸಿದರು. ಋಗ್ವೇದದಲ್ಲಿ ನಾಗದೇವತೆ ಅಹಿವೃತ್ತ ಆರ್ಯರ ದೇವರಾದ ಇಂದ್ರನ ಶತ್ರುವಾಗಿ ಮೊದಲಬಾರಿಗೆ ಕಾಣಿಸಿಕೊಳ್ಳುತ್ತಾನೆ. ಅಂದರೆ ಆರ್ಯರು ಮತ್ತು ದಾಸರ ನಡುವೆ (ಎರಡು ಸಂಸ್ಕೃತಿಗಳ) ಶತ್ರುತ್ವ ಹುಟ್ಟಿಕೊಂಡಿರುವುದು ಕಾಣಿಸಿಕೊಳ್ಳುತ್ತದೆ. ನಾಗ ದೇವತೆಯನ್ನು ಆರ್ಯರು ಪೂಜಿಸಿದ ಉಲ್ಲೇಖಗಳು ಎಲ್ಲೂ ಕಾಣಿಸುವುದಿಲ್ಲ. ಈ ನಾಗಾ ಅಥವಾ ದಾಸ ಜನಾಂಗ ಅಸಂಸ್ಕೃತರಲ್ಲ; ಭಾರತದಾದ್ಯಂತ ಎಷ್ಟೋ ರಾಜ ಮಹಾರಾಜರ ಕುಟುಂಬಗಳು ನಾಗಾ ಹೆಸರಿನ ಜೊತೆ ಸಂಬಂಧ ಹೊಂದಿವೆ.

ಕದಂಬ ರಾಜನಾದ ಕೃಷ್ಣವರ್ಮ ಮೂಲತಃ ನಾಗ ರಾಜರ ಜೊತೆ ಸಂಬಂಧ ಹೊಂದಿದವನು. ಅಶ್ವತ್ಥಾಮ, ನಾಗಿ ಎಂಬ ಹೆಣ್ಣಿನ ಜೊತೆ ಮದುವೆಯಾದ ವಿಷಯ ಮತ್ತು ಸ್ಕಂದ ಶಿಷ್ಯನು ಪಲ್ಲವ ರಾಜ್ಯವನ್ನು ಸ್ಥಾಪನೆ ಮಾಡಿದ ವಿಷಯವನ್ನು ರಾಯಕೋಟದಲ್ಲಿರುವ ಶಾಸನಗಳಲ್ಲಿ ಉಲ್ಲೇಖವಾಗಿದೆ. 9ನೇ ಶತಮಾನದಲ್ಲಿದ್ದ ವೀರಕೂರ್ಚ ಎಂಬ ಇನ್ನೊಬ್ಬ ಪಲ್ಲವರಾಜನು ಸಹ ನಾಗಾ ಹೆಣ್ಣನ್ನು ಮದುವೆಯಾದ ವಿಷಯವನ್ನು ಅದೇ ಶಿಲಾಶಾಸನದಲ್ಲಿ ಕೆತ್ತಲಾಗಿದೆ. ಎರಡನೇ ಚಂದ್ರಗುಪ್ತನೂ ಸಹ ಕುವೇರ ಎಂಬ ನಾಗ ರಾಜನ ಮಗಳನ್ನು ಮದುವೆಯಾದ ವಿಷಯ ತಿಳಿದುಬರುತ್ತದೆ. ಚೋಳರಾಜನು ನಾಗ ಕನ್ಯೆಯರನ್ನು ಮದುವೆಯಾದ ವಿಷಯ ಕೂಡ ಉಲ್ಲೇಖವಾಗಿದೆ. ಒಟ್ಟಿನಲ್ಲಿ ನಾಗ ರಾಜರು ಅತ್ಯುನ್ನತ ಸಂಸ್ಕೃತರಾಗಿದ್ದು, ಭರತ ಖಂಡದ ಹಲವು ಪ್ರದೇಶಗಳನ್ನು ಅವರು ಆಳಿರುವುದಾಗಿ ತಿಳಿದುಬರುತ್ತದೆ.

ದ್ರಾವಿಡರು ಮತ್ತು ನಾಗಾಗಳು ಬೇರೆ ಬೇರೆ ಜನಾಂಗಕ್ಕೆ ಸೇರಿದವರೆಂದು ತಿಳಿದಿರುವವರೇ ಹೆಚ್ಚು. ಆದರೆ ದ್ರಾವಿಡರು ಮತ್ತು ನಾಗಾಗಳು ಒಂದೇ ಜನಾಂಗಕ್ಕೆ ಸೇರಿದ ಎರಡು ಹೆಸರುಗಳು. ಒಂದು ಕಾಲದಲ್ಲಿ ಮೂಲ ದ್ರಾವಿಡ ಭಾಷೆಯಾದ ತಮಿಳು ಭರತ ಖಂಡವನ್ನೂ ದಾಟಿ ಹಬ್ಬಿಕೊಂಡಿತ್ತೆನ್ನುವುದನ್ನು ಯಾರೂ ಅಲ್ಲಗಳೆಯಲಾರರು. ಪ್ರಖ್ಯಾತ ವಿದ್ವಾಂಸರಾದ ದೀಕ್ಷಿತರ್ 'ದಕ್ಷಿಣ ಭಾರತದ ಆ ರಾಮಾಯಣದಲ್ಲಿ' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ: 'ನಾಗರಹಾವಿನ ಸಂಬಂಧ ಹೊಂದಿದ್ದ ನಾಗಾಗಳೆಂಬ ಜನ ಇಡೀ ಭರತಖಂಡದಲ್ಲೆಲ್ಲ ಹಬ್ಬಿದ್ದರು. ವಾಯುವ್ಯದಲ್ಲಿ ತಕ್ಷಶಿಲೆಯವರೆಗೆ, ಈಶಾನ್ಯದಲ್ಲಿ ಅಸ್ಸಾಂವರೆಗೆ ಹಬ್ಬಿದ್ದರೆ, ದಕ್ಷಿಣದಲ್ಲಿ ಶ್ರೀಲಂಕಾವರೆಗೆ ಪ್ರಾಬಲ್ಯ ಹೊಂದಿದ್ದರು'. ಕ್ರಿಸ್ತಶಕ 1ನೇ ಶತಮಾನದಲ್ಲಿ ತಮಿಳು ಸಾಹಿತ್ಯದಲ್ಲಿ 'ನಾಗಾನಾಡು' ಎಂದೇ ಉಲ್ಲೇಖಿಸಲಾಗಿದೆ. ದಕ್ಷಿಣ ಭಾರತದ ಮೂಲೆ ಮೂಲೆಯಲ್ಲೂ

ಇಂದಿಗೂ ನಾಗ ದೇವತೆಗೆ ಪೂಜೆ ಸಲ್ಲುತ್ತದೆ. ಇವರ ಹೆಣ್ಣುಗಳು ಅತ್ಯಂತ ಸೌಂದರ್ಯವತಿಯರಾಗಿದ್ದು ಮೂಲತಃ ಇವರು ಸಮುದ್ರ ದಾಟಿ ಬಂದ ಜನರು ಎಂಬ ಉಲ್ಲೇಖಗಳಿವೆ. ದಕ್ಷಿಣದಲ್ಲಿ ಚೇರರಾಜ್ಯ ಸ್ಥಾಪನೆಯಾದ ಮೇಲೆ ನಾಗಾರಾಜರ ರಾಜ್ಯಭಾರ ಕುಸಿಯಿತು.

ಸಿ. ಎಸ್. ಓಲ್ಡ್‌ಹಾಮ್ ಹೇಳುವುದು ಹೀಗೆ: ದ್ರಾವಿಡರನ್ನು ಮೂಲವಾಗಿ ಈ ರೀತಿಯಾಗಿ ವಿಂಗಡಿಸಬಹುದು. ಚೇರ, ಚೋಳ ಮತ್ತು ಪಾಂಡ್ಯರು. ಚೇರ ಅಥವಾ ಸೇರ ಎಂದರೆ ದ್ರಾವಿಡರು, ಮೂಲವಾಗಿ ನಾಗಾ ಜನರು. ಚೇರಮಂಡಲ, ನಾಗಾ ದ್ವೀಪ ಅಥವಾ ನಾಗಾ ರಾಜ್ಯದವರು, ಇವರೇ ಮೂಲ ದಕ್ಷಿಣದ ದ್ರಾವಿಡರು. ನಾಗ ದೇವತೆಯ ಸಂಬಂಧಹೊಂದಿದ ಇವರು ಗಂಗಾ ತಟದವರೆಗೂ ರಾಜ್ಯವಾಳುತ್ತಿದ್ದವರು. ಈಗಿನ ಲಿಚ್ಚವಿಗಳು ಮತ್ತು ನೇಪಾಳದ ನೇವಾರರಿಗೂ ಸಂಬಂಧ ಇದ್ದು ಇಂದಿಗೂ ದಕ್ಷಿಣದ ಆಚಾರ ವಿಚಾರಗಳನ್ನು ಹೊಂದಿದ್ದಾರೆ. ನೇಪಾಳದ ಕರಕೋಟಕ ನಾಗಾ ಮತ್ತು ಕಾಶ್ಮೀರದ ನೀಲ ನಾಗಾ ಜನರು ನಾಗ ದೇವತೆಯ ಸಂಬಂಧ ಹೊಂದಿರುವವರು. ಪಂಜಾಬ್ ಮತ್ತು ಹಿಮಾಲಯದ ಹಲವು ಭಾಗಗಳಲ್ಲಿರುವ ಜನರು ಇಂದಿಗೂ ನಾಗ ದೇವತೆಗೆ ಪೂಜೆಯನ್ನು ಸಲ್ಲಿಸುತ್ತಿರುವರು. ಈ ಎಲ್ಲಾ ವಿವರಣೆಗಳಿಂದ ದಕ್ಷಿಣದ ದ್ರಾವಿಡರು ಮತ್ತು ನಾಗಾಗಳು ಒಂದೇ ಎನ್ನುವುದು ಸಾಬೀತಾಗುತ್ತದೆ.

ದ್ರಾವಿಡರು ಎನ್ನುವುದು ಒಂದು ಜನಾಂಗದ ಹೆಸರಲ್ಲ. ಮೂಲವಾಗಿ ತಮಿಳು ಪದವನ್ನು ಸಂಸ್ಕೃತಕ್ಕೆ ತಂದಾಗ ತಮಿಳು, ದಮಿಳ, ದ್ರಾವಿಡ ಆಯಿತು ಎಂದು ತಿಳಿದುಬರುತ್ತದೆ. ಆರ್ಯರು ಭರತ ಖಂಡದ ಮೇಲೆ ಆಕ್ರಮಣ ನಡೆಸುವುದಕ್ಕೆ ಮುಂಚೆ ದ್ರಾವಿಡ ಭಾಷೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಹರಡಿತ್ತು. ಅಂದರೆ ಭಾರತದಾದ್ಯಂತ ನಾಗಾ ಜನರು ಮಾತನಾಡುತ್ತಿದ್ದ ಭಾಷೆ ದ್ರಾವಿಡ ಭಾಷೆ. ಉತ್ತರ ಭಾರತದಲ್ಲಿದ್ದ ನಾಗಾಗಳು ಕಾಲಾಂತರದಲ್ಲಿ ದ್ರಾವಿಡ ಭಾಷೆಯನ್ನು ಬಿಟ್ಟು ಸಂಸ್ಕೃತ ಮೂಲದ ಇನ್ನಿತರ ಭಾಷೆಗಳನ್ನು ಮಾತನಾಡತೊಡಗಿದರು ದಕ್ಷಿಣ ಭಾರತದಲ್ಲಿ ಮಾತ್ರ ಮೂಲ ದ್ರಾವಿಡ ಭಾಷೆಯನ್ನು ಉಳಿಸಿಕೊಳ್ಳಲಾಯಿತು. ಮುಂದೆ ಇದರಿಂದ ತಮಿಳು, ಕನ್ನಡ, ತೆಲುಗು, ಮಲಯಾಳಂ ಹಾಗೂ ತುಳು ಇತ್ಯಾದಿ ಭಾಷೆಗಳು ಹುಟ್ಟಿಕೊಂಡವು. ದಕ್ಷಿಣದವರನ್ನು ದ್ರಾವಿಡರೆಂದು ಕರೆಯಲಾಯಿತು. ('ಯಾರು ಶೂದ್ರರಾಗಿದ್ದರು?' ಡಾ॥ ಅಂಬೇಡ್ಕರ್, ಸಂಪುಟ 7, ಪುಟ 417, ಇದನ್ನು ಅಂಬೇಡ್ಕರ್ ಅವರು ಬಿ. ಆರ್. ಭಂಡಾರ್ಕರ್ ಅವರ 'ಪ್ರಾಚೀನ ಭಾರತದ ಇತಿಹಾಸವನ್ನು ಕುರಿತ ಭಾಷಣಗಳು' ಪುಸ್ತಕದಿಂದ ಆರಿಸಿಕೊಂಡಿದ್ದಾರೆ. ವರ್ಷ 1919, ಪುಟ 80).

ಒಂದು ಜನಾಂಗ ಇನ್ನೊಂದು ಜನಾಂಗವನ್ನು ಗುಲಾಮರಾಗಿಸಿಕೊಂಡಿತು ಎನ್ನುವುದು ರೈಸ್‌ನ ವಾದ. ಅದೇ ರೀತಿಯಾಗಿ 'ಜಾತಿ ಮತ್ತು ಜನಾಂಗ' ಎಂಬ ಪುಸ್ತಕದಲ್ಲಿ ಪ್ರೊ. ಘುರ್ಯೆ ದ್ರಾವಿಡರು ಮತ್ತು ಆರ್ಯರಿಗಿಂತ ಮುಂಚೆ ಪರಯರೆಂಬ ಮೂಲ ಜನಾಂಗ ದಕ್ಷಿಣದಲ್ಲಿದ್ದು ಅದು ಮುಂದೆ ಅಸ್ಪೃಶ್ಯ ಜನಾಂಗವಾಯಿತು ಎಂದು ವಿವರಿಸಿದ್ದಾರೆ. ಪಂಜಾಬ್ ಬ್ರಾಹ್ಮಣ ಮತ್ತು ಪಂಜಾಬ್ ಚಮ್ಮಾರನ (ಅಸ್ಪೃಶ್ಯ) ಮೂಗಿನ ಉದ್ದದ ರಚನೆ ಒಂದೇ ಆಗಿರುತ್ತದೆ. ಬಿಹಾರದ ಚಮ್ಮಾರ ಮತ್ತು ಬಿಹಾರದ ಬ್ರಾಹ್ಮಣನ

ಮೂಗಿನ ಉದ್ದದ ರಚನೆಯಲ್ಲೂ ಯಾವ ವ್ಯತ್ಯಾಸವೂ ಇಲ್ಲ. ಉತ್ತರ ಕನ್ನಡ ಜಿಲ್ಲೆಯಲ್ಲಿನ ಹೊಲೆಯರ ಉದ್ದ ಮೂಗಿನ ರಚನೆ ಕರ್ನಾಟಕ ಬ್ರಾಹ್ಮಣರಿಗಿಂತ ಎಷ್ಟೋ ಉದ್ದವಾದದ್ದು. ತಮಿಳುನಾಡಿನ ಚೆರುಮಾನರ (ಪರಯನಿಗಿಂತ ಕೀಳಾದವರೆಂದು ಭಾವಿಸಲ್ಪಟ್ಟವರ) ಮೂಗಿನ ಉದ್ದದ ರಚನೆ ತಮಿಳುನಾಡಿನ ಬ್ರಾಹ್ಮಣರಿಗಿಂತ ವಿಭಿನ್ನವಾದುದಲ್ಲ. ಮಾನವ ವಿಜ್ಞಾನವನ್ನು ವಿಜ್ಞಾನವಲ್ಲ ಎಂದು ಯಾರೂ ಹೇಳಲಾರರು. ಹಾಗಾದರೆ ಹಿಂದೂ ಸಮಾಜಗಳ ನಡುವಿನ ಏಕತೆ ಹಾಗೂ ಭಿನ್ನತೆಗಳನ್ನು ಕುರಿತ ಮಾನವ ವಿಜ್ಞಾನದ ನಿರೂಪಣೆಯನ್ನು ಸುಳ್ಳೆಂದು ಹೇಳಲು ಹೇಗೆ ಸಾಧ್ಯ? ಅಸ್ಪೃಶ್ಯರು ದ್ರಾವಿಡರು ಮತ್ತು ಆರ್ಯರಿಗಿಂತ ಭಿನ್ನವಾದ ಜನಾಂಗವೆಂದು ಹೇಳಲು ಹೇಗೆ ಸಾಧ್ಯ? ಬ್ರಾಹ್ಮಣರು ಮತ್ತು ಅಸ್ಪೃಶ್ಯರು ಮೂಲವಾಗಿ ಒಂದೇ ಜನಾಂಗಕ್ಕೆ ಸೇರಿದವರು. ಬ್ರಾಹ್ಮಣರು ಆರ್ಯರಾದರೆ, ಅಸ್ಪೃಶ್ಯರೂ ಆರ್ಯರೇ ಆಗುತ್ತಾರೆ. ಬ್ರಾಹ್ಮಣರು ದ್ರಾವಿಡರಾದರೆ, ಅಸ್ಪೃಶ್ಯರೂ ದ್ರಾವಿಡರೇ ಆಗುತ್ತಾರೆ. ಬ್ರಾಹ್ಮಣರು ನಾಗಾಗಳಾದರೆ ಅಸ್ಪೃಶ್ಯರು ನಾಗಾಗಳೇ ಆಗುವರು. ಮೇಲಿನ ವಿಚಾರಗಳಿಂದ ರೈಸ್ ಮತ್ತು ಘುರ್ಯೆ ಹೇಳುವ ಹಾಗೆ ಒಂದು ಜನಾಂಗ ಇನ್ನೊಂದು ಜನಾಂಗವನ್ನು ಗುಲಾಮರನ್ನಾಗಿಸಿಕೊಂಡಿತು ಎನ್ನುವ ಕಲ್ಪನೆ ಪೂರ್ಣವಾಗಿ ನೆಲಕಚ್ಚುತ್ತದೆ ಎನ್ನುತ್ತಾರೆ ಅಂಬೇಡ್ಕರ್.

ಇನ್ನು ಮಾನವನ ಚರ್ಮದ ಬಣ್ಣವನ್ನೇ ತೆಗೆದುಕೊಳ್ಳೋಣ. ದಕ್ಷಿಣ ಭಾರತದಲ್ಲಿರುವ ಬ್ರಾಹ್ಮಣರಲ್ಲಿ ಬೇಕಾದಷ್ಟು ಕಪ್ಪು ಬಣ್ಣದವರಿದ್ದಾರೆ, ಅಸ್ಪೃಶ್ಯರಲ್ಲಿ ಎಷ್ಟೋ ಬಿಳಿ ಬಣ್ಣದ ಜನರಿದ್ದು ಅವರು ಬ್ರಾಹ್ಮಣರಿಗಿಂತ ಆಕರ್ಷಕವಾಗಿದ್ದಾರೆ. ಯಾರು ಯಾವ ಜನಾಂಗಕ್ಕೆ ಸೇರಿದವರು ಎನ್ನುವುದು ಮನುಷ್ಯರ ಅಂಗಾಂಗಗಳ ರಚನೆಯಿಂದ, ಬಣ್ಣದಿಂದ ನಿರ್ಧರಿಸಲು ಸಾಧ್ಯವಾಗದ ಮಾತಾಗಿದೆ ಎನ್ನುವುದು ಸತ್ಯಸಂಗತಿಯಾಗಿದೆ.

**ಸೂಚನೆ : ಈಶಾನ್ಯ ಭಾರತದಲ್ಲಿರುವ ನಾಗಾ ಜನರಿಗೂ ದ್ರಾವಿಡ ನಾಗಾಗಳಿಗೂ ಯಾವುದೇ ಸಂಬಂಧವಿಲ್ಲ. ಇವರು ಮಂಗೋಲಾಯ್ಡ್ ಜನಾಂಗಕ್ಕೆ ಸೇರಿದವರು.**

## ಅಶುದ್ಧತೆ ಮತ್ತು ಅಸ್ಪೃಶ್ಯತೆ

ಅಸ್ಪೃಶ್ಯತೆ ಯಾವ ಕಾಲದಿಂದ ಹುಟ್ಟಿಕೊಂಡಿತು ಎನ್ನುವ ಪ್ರಶ್ನೆಗೆ ಇದು ಪುರಾತನ ಕಾಲದಿಂದಲೂ ಇದೆ ಎನ್ನುತ್ತಾರೆ ಸಂಪ್ರದಾಯವಾದಿಗಳು. ಇತ್ತೀಚಿನ ಸ್ಮೃತಿಗಳಲ್ಲಾಗಲಿ, ಅದಕ್ಕಿಂತ ಎಷ್ಟೋ ಹಿಂದಿನ ಧರ್ಮಸೂತ್ರಗಳಲ್ಲಾಗಲಿ ಅಸ್ಪೃಶ್ಯತೆಯ ಬಗ್ಗೆ ದಾಖಲೆಗಳು ದೊರಕುವುದಿಲ್ಲ. ಕೆಲವು ಸಂಶೋಧಕರ ಪ್ರಕಾರ ಅಸ್ಪೃಶ್ಯತೆ ಕ್ರಿಸ್ತಪೂರ್ವ ಒಂದೆರಡು ಶತಮಾನಗಳಿಗಿಂತ ಮುಂಚೆ ಹುಟ್ಟಿಕೊಂಡಿದ್ದಾಗಿದೆ. ಧರ್ಮಸೂತ್ರಗಳು ಅಸ್ಪೃಶ್ಯತೆ ಮತ್ತು ಅಸ್ಪೃಶ್ಯರ ಬಗ್ಗೆ ಏನು ಹೇಳುತ್ತವೆ? ಅವುಗಳಲ್ಲಿ ತಿಳಿಸಿರುವ ವರ್ಗಗಳು ಅಸ್ಪೃಶ್ಯರನ್ನು ಸೂಚಿಸುತ್ತವೆಯೇ? ಪ್ರಸ್ತುತ ಬಳಸುತ್ತಿರುವ ಪದಗಳನ್ನೇ ಹಿಂದಿನವರು ಬಳಸುತ್ತಿದ್ದರೆ? ಈ ವಿಷಯಗಳ ಕಡೆಗೆ ಸ್ವಲ್ಪ ಗಮನ ಕೊಡೋಣ.

ಧರ್ಮಸೂತ್ರಗಳಲ್ಲಿ ಬಳಸಿರುವ ಅಸ್ಪೃಶ್ಯ ಎಂಬ ಪದ ಒಂದು ವರ್ಗವನ್ನು ಕುರಿತಾಗಿದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಹಾಗೆ ಅಸ್ಪೃಶ್ಯ ಎಂದರೆ ಅಸ್ಪೃಶ್ಯರು ಎನ್ನುವುದು ಕೂಡ ಸರಿಯಾದ ಅರ್ಥವೇ ಆಗಿದೆ. ಧರ್ಮಸೂತ್ರಗಳಲ್ಲಿ

ಬರುವ ಅಸ್ಪೃಶ್ಯ ಆಧುನಿಕವಾಗಿ ಬಳಸುತ್ತಿರುವ ಅಸ್ಪೃಶ್ಯ ಎರಡೂ ಒಂದೆಯೇ ಅಥವಾ ಬೇರೆಯೇ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಇದರ ಜೊತೆಗೆ ಧರ್ಮಸೂತ್ರಗಳಲ್ಲಿ ಬಳಸಿರುವ ಪದಗಳಾದ ಅಸ್ಪೃಶ್ಯ, ಅಂತ್ಯ, ಅಂತ್ಯಜ, ಅಂತ್ಯವಾಸಿ ಮತ್ತು ಬಾಹ್ಯ ಪದಗಳನ್ನು ಮತ್ತು ಮುಂದಿನ ಕೆಲವು ಸ್ಮೃತಿಗಳಲ್ಲಿ ಬಳಸಿರುವ ಪದಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

| ಪದಗಳು | ಧರ್ಮಸೂತ್ರಗಳು | ಸ್ಮೃತಿಗಳು |
|---|---|---|
| ಅಸ್ಪೃಶ್ಯ | 1. ವಿಷ್ಣು, V.104 | ಕಾತ್ಯಾಯನ ಶ್ಲೋಕ 433, 783 |
| ಅಂತ್ಯ | 1. ವಸಿಷ್ಠ 16–30 | 1. ಮನು IV. 79, VII. 68 |
| | 2. ಆಪಸ್ತಂಬ III. 1 | 2. ಯಾಜ್ಞವಲ್ಕ್ಯ I. 148. 197 |
| | | 3. ಅತ್ರಿ 25 |
| | | 4. ಲಿಖಿತ 52 |
| ಅಂತ್ಯಜ | 1. ವಿಷ್ಣು 36.7 | 1. ಮನು IV. 61, VII. 279 |
| | | 2. ಯಾಜ್ಞವಲ್ಕ್ಯ 12. 73 |
| | | 3. ಬೃಹದ್ಯಮ ಸ್ಮೃತಿ (ಮಿತಾಕ್ಷರ) |
| | | 4. ಯಾಜ್ಞವಲ್ಕ್ಯರ ಬಗ್ಗೆ ಹೇಳುವಾಗ III. 260 |
| | | 5. ಅತ್ರಿ 199 |
| | | 6. ವೇದವ್ಯಾಸ 1. 12, 13 |
| ಅಂತ್ಯವಾಸಿ | 1. ಗೌತಮ XXXI | 1. ಮನು IV. 79 X 39 |
| | XXIII, 32 | 2. ಶಾಂತಿಪರ್ವ, ಮಹಾಭಾರತ 141; 29–32 |
| | 2. ವಸಿಷ್ಠ | 3. ಮಧ್ಯಮಾಂಗೀರಸ್(ಮಿತಾಕ್ಷರ) |
| | XVIII, 3 | 4. ಯಾಗದ ಬಗ್ಗೆ ಹೇಳುವಾಗ 3.280 |
| ಬಾಹ್ಯ | 1. ಆಪಸ್ತಂಬ | |
| | 1,2,39,18 | 1. ಮನು 28 |
| | 2. ವಿಷ್ಣು 16, 14 | 2. ನಾರದ 1,155 |

ಧರ್ಮಸೂತ್ರಗಳು ಮತ್ತು ಸ್ಮೃತಿಗಳಲ್ಲಿ ಬಳಸಲಾದ ಅಂತ್ಯ, ಅಂತ್ಯಜ, ಅಂತ್ಯವಾಸಿ, ಮತ್ತು ಬಾಹ್ಯ ಪದಗಳು ಕೇವಲ ಅಸ್ಪೃಶ್ಯರನ್ನು ಸೂಚಿಸುವ ಬೇರೆ ಬೇರೆ ಪದಗಳೇ ಅಥವಾ ಬೇರೆ ಬೇರೆ ಅರ್ಥಗಳನ್ನು ಸೂಚಿಸುವ ಬೇರೆ ಬೇರೆ ವರ್ಗಗಳೇ ಎನ್ನುವುದನ್ನು ಯಾವ ಸೂತ್ರಗಳಲ್ಲೂ ವಿಶ್ಲೇಷಿಸಿಲ್ಲ. ಅಂತ್ಯವಾಸಿ ಮತ್ತು ಅಂತ್ಯಜ ಎನ್ನುವ ಪದಗಳಿಗೆ ಧರ್ಮಸೂತ್ರಗಳಲ್ಲಿ ಅರ್ಥಗಳನ್ನು ನೀಡದಿದ್ದರೂ ಸ್ಮೃತಿಗಳಲ್ಲಿ ಅರ್ಥಗಳನ್ನು ನೀಡಲಾಗಿದೆ. ಅಂತ್ಯವಾಸಿ ಎನ್ನುವುದಕ್ಕೆ ಮಧ್ಯಮಾಂಗೀರಸ್ ಸ್ಮೃತಿಯಲ್ಲಿ, ಅಂತ್ಯಜ ಎನ್ನುವುದಕ್ಕೆ ಅತ್ರಿ ಸ್ಮೃತಿ ಮತ್ತು ವೇದವ್ಯಾಸ ಸ್ಮೃತಿಗಳಲ್ಲಿ ಅಂತ್ಯವಾಸಿ, ಅಂತ್ಯಜ ಎಂಬ ಹೆಸರುಗಳನ್ನು ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| ಅಂತ್ಯವಾಸಿ | ಅಂತ್ಯಜ | |
|---|---|---|
| ಮಧ್ಯಮಾಂಗೀರಸ್ ಸ್ಮೃತಿ | ಅತ್ರಿ ಸ್ಮೃತಿ | ವೇದವ್ಯಾಸ ಸ್ಮೃತಿ |
| ಚಂಡಾಲ | ನಾಟ | ಚಂಡಾಲ |
| ಶ್ವಪಾಕ | ಮೇದ | ಶ್ವಪಾಕ |
| ಕ್ಷತ್ತ | ಭಿಲ್ಲ | ನಟ |
| ಸೂತ | ರಜಕ | ಮೇದ |
| ವೈದೇಹಿಕ | ಚರ್ಮಕಾರ | ಭಿಲ್ಲ |
| ಮಗಧ | ಬುರುಡ | ರಜಕ |
| ಆಯೋಗವ | ಕಾರ್ಯವರ್ತ | ಚರ್ಮಕಾರ |
| | | ವಿರಾಟ್, ದಾಸ, |
| | | ಭಟ್ಟ, ಕೊಳಿಕ, ಪುಷ್ಕರ |

ಮೇಲಿನ ಪಟ್ಟಿಯಲ್ಲಿ ನೀಡಿರುವ ಪದಗಳನ್ನು ಗಮನಿಸಿದಾಗ ಯಾವ ರೀತಿಯ ನಿಬಂಧನೆಗಳನ್ನೂ ಪಾಲಿಸಿಲ್ಲ ಎಂಬುದಾಗಿ ತಿಳಿದುಬರುತ್ತದೆ. ಧರ್ಮಸೂತ್ರ ಮತ್ತು ಸ್ಮೃತಿಗಳಲ್ಲಿ ಬರುವ ಪದಗಳಾದ ಅಂತ್ಯಜ. ಅಂತ್ಯವಾಸಿ ಮತ್ತು ಬಾಹ್ಯ ಎಂದರೆ ಅಸ್ಪೃಶ್ಯರೆ ಅಥವಾ ಬೇರೆ ಅರ್ಥಗಳನ್ನು ಸೂಚಿಸುವ ಪದಗಳೆ ಎನ್ನುವ ವಿಷಯ ಗೊಂದಲವಾಗಿರುವುದರಿಂದ ಬೇರೆ ರೀತಿಯ ಅರ್ಥಗಳೇನನ್ನಾದರೂ ಈ ಪದಗಳು ನೀಡುತ್ತವೆಯೇ ಎನ್ನುವುದನ್ನು ನೋಡಬೇಕಾಗಿದೆ.

ಬಾಹ್ಯಗಳ ಬಗ್ಗೆ ಮನುಸ್ಮೃತಿಯಲ್ಲಿ ವಿವರಿಸಲಾಗಿದೆ. ಮನು ನೀಡಿರುವ ಸಾಮಾಜಿಕ ವರ್ಗೀಕರಣದಲ್ಲಿ ಹಲವು ರೀತಿಯ ವರ್ಗಗಳನ್ನು ವಿಂಗಡಿಸಲಾಗಿದೆ. ಮೊದಲಿಗೆ ಮುಖ್ಯವಾಗಿ ವೈದೇಹಿಕ ಮತ್ತು ದಾಸಗಳೆಂದು ವಿಭಾಗಿಸಿ ವೈದೇಹಿಕರನ್ನು ಮತ್ತೆ ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. 1) ಚಾತುರ್ವರ್ಣ್ಯದ ಒಳಗೆ 2) ಚಾತುರ್ವರ್ಣ್ಯದ ಹೊರಗೆ 3) ವ್ರಾತ್ಯರು ಮತ್ತು 4) ಪತಿತರು ಅಥವಾ ಜಾತಿ ಭ್ರಷ್ಟರು. ಒಬ್ಬ ಮನುಷ್ಯ ಚಾತುರ್ವರ್ಣ್ಯದ ಒಳಗಿನವನೇ ಅಥವಾ ಚಾತುರ್ವರ್ಣ್ಯದ ಹೊರಗಿನವನೆ ಎನ್ನುವುದನ್ನು ಅವನ ತಂದೆ ತಾಯಿಯರಿಂದ ನಿರ್ಧರಿಸಲಾಗುತ್ತದೆ. ಒಂದೇ ವರ್ಣದ ತಂದೆ ತಾಯಿ ಜನ್ಮ ನೀಡಿದಾಗ ಅವನು/ಅವಳು ವರ್ಣದ ಒಳಗೆಯೇ ಉಳಿದುಕೊಳ್ಳುತ್ತಾರೆ. ಎರಡು ವರ್ಗಗಳ ತಂದೆ ತಾಯಿ ಜನ್ಮ ನೀಡಿದಾಗ ವರ್ಣ ಸಂಕರಕ್ಕೆ ಒಳಗಾಗಿ ವರ್ಣದ ಹೊರಗುಳಿಯುತ್ತಾರೆ.

ಮತ್ತೆ ವರ್ಣದ ಹೊರಗಿನವರನ್ನು ಮುಖ್ಯವಾಗಿ ಎರಡು ವಿಭಾಗಗಳಾಗಿ ಮನು ವಿಭಾಗಿಸಿದ್ದಾನೆ. 1) ಅನುಲೋಮ 2) ಪ್ರತಿಲೋಮ. ಮೇಲ್ವರ್ಣದ ತಂದೆ ಮತ್ತು ಕೆಳವರ್ಣದ ತಾಯಿಗೆ ಹುಟ್ಟಿದವರು ಅನುಲೋಮಿಗಳಾದರೆ, ಕೆಳವರ್ಣದ ತಂದೆ ಮತ್ತು ಮೇಲ್ವರ್ಣದ ತಾಯಿಗೆ ಹುಟ್ಟಿದವರು ಪ್ರತಿಲೋಮಿಗಳು. ಅನುಲೋಮಿ ಮತ್ತು ಪ್ರತಿಲೋಮಿ ಇಬ್ಬರೂ ಒಂದೇ ಆದರೂ ಚಾತುರ್ವರ್ಣ್ಯದಲ್ಲಿ ಬಾಹ್ಯರು. ಮನು ಅವರಿಬ್ಬರನ್ನು ಪ್ರತ್ಯೇಕಿಸಿ ಅನುಲೋಮಿಗಳನ್ನು ವರ್ಣಬಾಹ್ಯ ಅಥವಾ ಬಾಹ್ಯಗಳೆಂದರೆ, ಪ್ರತಿಲೋಮಿಗಳನ್ನು ಹೀನರೆಂದು ಕರೆಯುತ್ತಾನೆ. ಹೀನರು ಬ್ರಾಹ್ಮಣರಿಗಿಂತ ಕೀಳಾದವರು ಆದರೆ ಮನು ಇಬ್ಬರನ್ನೂ ಅಸ್ಪೃಶ್ಯರೆಂದು ಎಲ್ಲೂ ಉಲ್ಲೇಖಿಸಿಲ್ಲ. ಶ್ಲೋಕ IV.79ರಲ್ಲಿ ಮನು ಅಂತ್ಯ ಎನ್ನುವುದು ಒಂದು ವರ್ಗವೆಂದು ಹೇಳಿದ್ದರೂ ಅವರು

ಯಾರೆಂದು ವಿವರಿಸಿಲ್ಲ. ಮೇಧಾತಿಥಿ ಅಂತ್ಯ ಎಂದರೆ ಮ್ಲೇಚ್ಛ ಅಥವಾ ಮೇಧ ಎಂದಿದ್ದಾನೆ. ಬೂಲರ್ ಅಂತ್ಯ ಎಂದರೆ ಕೆಳ ಜಾತಿಯವರೆಂದು ತಿಳಿಸಿದ್ದಾನೆ. ಅಂತ್ಯ ಎಂದರೆ ಅಸ್ಪೃಶ್ಯರೆನ್ನುವುದು ಎಲ್ಲಿಯೂ ಇಲ್ಲ. ಆ ಕಾಲಕ್ಕೆ ಹಳ್ಳಿಯ ಹೊರಗೆ ಜೀವಿಸುತ್ತಿದ್ದವರನ್ನು ಅಂತ್ಯರೆಂದು ಕರೆಯುತ್ತಿದ್ದಿರಬೇಕು.

ಮಹಾಭಾರತದ ಶಾಂತಿಪರ್ವ ಶ್ಲೋಕ 109.9ರಲ್ಲಿ ಅಂತ್ಯಜರನ್ನು ಭಟರು ಅಥವಾ ಸೈನಿಕರು ಎಂದು ಹೆಸರಿಸಲಾಗಿದೆ. ಸರಸ್ವತಿ ವಿಲಾಸದಲ್ಲಿ ರಜಕ(ಅಗಸ)ನೂ ಸೇರಿ ಏಳು ರೀತಿಯ ಕಸುಬುಗಳು ಮಾಡುವವರನ್ನು ಪ್ರಕೃತಿಗಳೆಂದು ಕರೆಯಲಾಗಿದೆ. ಪ್ರಕೃತಿಗಳೆಂದರೆ ಕಸುಬುದಾರರು ಎನ್ನುವ ಅರ್ಥದಲ್ಲಿ ಹಿಂದೂ ಶಕ 922ರ ಎರಡನೇ ಬಿಲ್ಲಮನ ಸಂಗಮನೇರ್ ಶಾಸನದ ಹಳ್ಳಿಗಳಲ್ಲಿ 18 ಕಸುಬುಗಳನ್ನು ಮಾಡುವ ಪ್ರಕೃತಿಗಳು ಇರುವುದಾಗಿ ಬರೆಯಲಾಗಿದೆ. ವೀರಮಿತ್ರೋದಯ 18 ಜಾತಿಗಳನ್ನು ಶ್ರೇಣಿಯೆಂದು ಕರೆಯುತ್ತಾನೆ. ಅಂದರೆ 18 ಜಾತಿಗಳು ಬೇರೆ ಬೇರೆ ಕಸುಬುಗಳನ್ನು ಹೊಂದಿದವರಾಗಿದ್ದು ಅವರನ್ನು ಒಟ್ಟಾಗಿ ಅಂತ್ಯಜರೆಂದು ಕರೆಯಲಾಗಿದೆ ಎಂದಿದ್ದಾನೆ. ಈ ರೀತಿಯ ವಿವರಣೆಗಳ ಆಧಾರದಿಂದ ಅಂತ್ಯಜರನ್ನು ಅಸ್ಪೃಶ್ಯರೆಂದು ಕರೆಯಲು ಹೇಗೆ ತಾನೆ ಸಾಧ್ಯ?

ಅಂತ್ಯವಾಸಿಗಳ ಬಗ್ಗೆ ಮುಖ್ಯವಾಗಿ ಎರಡು ರೀತಿಯ ಅರ್ಥಗಳು ದೊರಕುತ್ತವೆ. ಗುರುಗಳ ಮನೆಗಳಲ್ಲಿ ವಾಸಿಸುವ ಬ್ರಹ್ಮಚಾರಿ ಶಿಷ್ಯರನ್ನು ಅಂತೇವಾಸಿಗಳೆಂದು ಕರೆಯುತ್ತಿದ್ದುದಾಗಿ ಉಲ್ಲೇಖಗಳಿವೆ. ಬಹುಶಃ ಕೊನೆಯಲ್ಲಿ ಅವರಿಗೆ ಊಟ ನೀಡುತ್ತಿದ್ದುದರಿಂದ ಅವರನ್ನು ಹಾಗೆ ಕರೆದಿರಬಹುದು ಎನ್ನುವುದು ಒಂದು ಅರ್ಥ. ಬ್ರಹ್ಮಚಾರಿ ಶಿಷ್ಯರನ್ನು ಅಂತೇವಾಸಿಗಳೆಂದು ಕರೆದಿರುವುದರಿಂದ ಇದು ಯಾವ ರೀತಿಯಲ್ಲೂ ಅಸ್ಪೃಶ್ಯರೆನ್ನುವ ಅರ್ಥವನ್ನು ಕೊಡುವುದಿಲ್ಲ.

ವಸಿಷ್ಠ ಧರ್ಮಸೂತ್ರದ 18.3ನೇ ಶ್ಲೋಕದಲ್ಲಿ ಶೂದ್ರ ತಂದೆ ಮತ್ತು ವೈಶ್ಯ ತಾಯಿಗೆ ಹುಟ್ಟಿದವರು ಅಂತ್ಯವಾಸಿಗಳಾದರೆ, ಮನು ಶ್ಲೋಕ V.39ರ ಪ್ರಕಾರ ಚಂಡಾಳ ತಂದೆ ಮತ್ತು ನಿಷಾದ ತಾಯಿಗೆ ಹುಟ್ಟಿದವನು ಅಂತ್ಯವಾಸಿ. ಮಿತಾಕ್ಷರದಲ್ಲಿ ಬರುವ ಶ್ಲೋಕದ ಪ್ರಕಾರ ಅಂತ್ಯವಾಸಿಗಳು ಅಂತ್ಯಜರ ಒಂದು ಉಪಪಂಗಡ ಮಾತ್ರ. ಅಂತ್ಯವಾಸಿ, ಅಂತ್ಯ ಮತ್ತು ಅಂತ್ಯಜರ ಬಗ್ಗೆ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುವ ವಿವರಗಳ ಆಧಾರದ ಮೇಲೆ ಇವರನ್ನು ಅಸ್ಪೃಶ್ಯರೆಂದು ಕರೆಯಲು ಸಾಧ್ಯವಿಲ್ಲ. ಧರ್ಮಸೂತ್ರಗಳಲ್ಲಿ ದೊರಕುವ ಕೆಲವು ವಿವರಗಳನ್ನು ಪರಿಶೀಲಿಸುವುದು ಸೂಕ್ತ. ಧರ್ಮಸೂತ್ರಗಳಲ್ಲಿ ಬರುವ ಅಸ್ಪೃಶ್ಯರು ಮತ್ತು ಪ್ರಸ್ತುತ ಕಾಲದ ಅಸ್ಪೃಶ್ಯರು ಒಂದೇ ಎನ್ನುವ ಪ್ರಶ್ನೆಗೆ ಉತ್ತರ ತಿಳಿದುಕೊಳ್ಳುವುದಕ್ಕಿಂತ ಮುಂಚೆ ಚಂಡಾಲರೆನ್ನುವ ಅಸ್ಪೃಶ್ಯರ ಬಗ್ಗೆ ತಿಳಿದುಕೊಳ್ಳಬೇಕಿದೆ.

ಚಂಡಾಳ ಎನ್ನುವ ಪದ ಕೇವಲ ಸಜಾತೀಯ ವರ್ಗಕ್ಕೆ ಸೀಮಿತವಾದುದಲ್ಲ. ಅದು ಹಲವು ವರ್ಗಗಳನ್ನು ಒಳಗೊಂಡ ಒಂದು ಪದ. ಶಾಸ್ತ್ರಗಳ ಪ್ರಕಾರ ಚಂಡಾಳರಲ್ಲಿ ಮುಖ್ಯವಾಗಿ ಐದು ವರ್ಗಗಳಿವೆ. 1) ಶೂದ್ರ ತಂದೆ ಮತ್ತು ಬ್ರಾಹ್ಮಣ ತಾಯಿಗೆ ಹುಟ್ಟಿದವರು 2) ಮದುವೆಯಾಗದ ಕನ್ಯೆಗೆ ಹುಟ್ಟಿದವರು 3) ಸಗೋತ್ರದ ಹೆಣ್ಣು ಮತ್ತು ಗಂಡಿಗೆ ಹುಟ್ಟಿದವರು 4) ಮನೆ ಬಿಟ್ಟು ಹೋದವರಿಗೆ ಅಥವಾ ಮನೆಯಿಂದ ಹೊರಹಾಕಲ್ಪಟ್ಟವರಿಗೆ ಹುಟ್ಟಿದವರು ಮತ್ತು 5) ರಜಕ ತಂದೆ ಮತ್ತು ಬ್ರಾಹ್ಮಣ ತಾಯಿಗೆ ಹುಟ್ಟಿದವರು. ಶಾಸ್ತ್ರಗಳಲ್ಲಿ ಬರುವ ಈ ಐದು ವರ್ಗಗಳ ಚಂಡಾಳರನ್ನು, ಬ್ರಾಹ್ಮಣರು ಸ್ಪರ್ಶಿಸಿದರೆ ಅಶುದ್ಧರಾಗುತ್ತಾರೆ.

ಅವರು ಮತ್ತೆ ಶುದ್ಧರಾಗಬೇಕಾದರೆ ಸ್ನಾನ ಮಾಡಿ ಹೊಸ ಬಟ್ಟೆಗಳನ್ನು ಧರಿಸಬೇಕು. ಚಂಡಾಳರ ಜೊತೆಗೆ ಶುದ್ಧ ಅಶುದ್ಧತೆಯ ವಿಷಯ ಬಂದಾಗ ಇನ್ನಿತರರು ಸೇರಿಕೊಳ್ಳುತ್ತಾರೆ. ಗೌತಮನ ಧರ್ಮಸೂತ್ರದ ಅಧ್ಯಾಯ XIVರ ಶ್ಲೋಕ 30ರ ಪ್ರಕಾರ ಬ್ರಾಹ್ಮಣರು ಬೇರೆ ಜಾತಿಯವರನ್ನು, ಚಂಡಾಳರನ್ನು, ಮಗುವಿಗೆ ಆಗ ತಾನೇ ಜನ್ಮ ನೀಡಿದ ಹೆಣ್ಣನ್ನು, ಋತುಮತಿಯಾದ ಹೆಣ್ಣನ್ನು ಮತ್ತು ಶವವನ್ನು ಮುಟ್ಟಿದ ನಂತರ ಶುದ್ಧರಾಗಬೇಕಾದರೆ ಸ್ನಾನ ಮಾಡಿ ಬೇರೆ ಬಟ್ಟೆಗಳನ್ನು ಧರಿಸಬೇಕೆಂದು ತಿಳಿಸಲಾಗಿದೆ.

ವಸಿಷ್ಠ ಧರ್ಮಸೂತ್ರ ಅಧ್ಯಾಯ IVರ ಶ್ಲೋಕ 37ರಲ್ಲಿ ಪ್ರಾಣಿಗಳನ್ನು ಬಲಿ ನೀಡುವ ಕಂಭವನ್ನು, ಅಗ್ನಿಯನ್ನು, ಶವವನ್ನು, ಋತುಮತಿಯಾದ ಹೆಣ್ಣನ್ನು, ಮಗುವಿಗೆ ಜನ್ಮ ನೀಡಿದ ಹೆಣ್ಣನ್ನು ಮತ್ತು ಚಂಡಾಳರನ್ನು ಸ್ಪರ್ಶಿಸಿದ ಬ್ರಾಹ್ಮಣರು ನೀರಿನಲ್ಲಿ ತಲೆ ಮುಳುಗಿಸಿ ಸ್ನಾನ ಮಾಡಿ ಬೇರೆ ಬಟ್ಟೆ ಧರಿಸಿದರೆ ಶುದ್ಧರಾಗುವರೆಂದು ಹೇಳಲಾಗಿದೆ. ಬೋಧಾಯನನು ಕೂಡ ವಸಿಷ್ಠ ಧರ್ಮಸೂತ್ರದಲ್ಲಿರುವ ವಿಷಯವನ್ನೇ ಎತ್ತಿ ಹಿಡಿದಿದ್ದಾನೆ.

ಮನುಸ್ಮೃತಿಯ ನಿಯಮಗಳು ಹೀಗೆ ಹೇಳುತ್ತವೆ : ಶ್ಲೋಕ V. 85: ಚಂಡಾಳನನ್ನು, ಮನೆಯ ಹೊರಗಾದ ಹೆಣ್ಣನ್ನು, ಮಗುವಿಗೆ ಜನ್ಮ ನೀಡಿದ ಹೆಣ್ಣನ್ನು, ಬೇರೆ ಜಾತಿಯವರನ್ನು ಮತ್ತು ಶವವನ್ನು ಸ್ಪರ್ಶಿಸಿದ ಬ್ರಾಹ್ಮಣನು ಸ್ನಾನ ಮಾಡುವುದರಿಂದ ಶುದ್ಧನಾಗುತ್ತಾನೆ. ಶ್ಲೋಕ V. 131: ನಾಯಿ ಸಾಯಿಸಿದ ಪ್ರಾಣಿಗಳು, ಕ್ರೂರ ಪ್ರಾಣಿಗಳು ಸಾಯಿಸಿದ ಆಕಳು, ಕುರಿ, ಮೇಕೆಗಳು ಮತ್ತು ಕೆಳವರ್ಗದ ದಾಸರು (ಚಂಡಾಳ) ಸಾಯಿಸಿದ ಪ್ರಾಣಿಗಳ ಮಾಂಸ ಶುದ್ಧ. ಶ್ಲೋಕ V. 143: ಬ್ರಾಹ್ಮಣನು ಯಾವುದೇ ವಸ್ತುವನ್ನು ಸಾಗಿಸುತ್ತಿರುವಾಗ ಅಶುದ್ಧರಾದವರು ಸ್ಪರ್ಶಿಸಿದರೆ ಅಥವಾ ಅಶುದ್ಧ ವಸ್ತುಗಳಿಗೆ ಸೋಕಿದ ನಂತರ ಆ ವಸ್ತುಗಳನ್ನು ನೀರಿನಿಂದ ತೊಳೆದರೆ ಶುದ್ಧವಾಗುತ್ತದೆ.

ಮೇಲಿನ ವಿವರಣೆಗಳಿಂದ ತಿಳಿದುಬರುವ ವಿಷಯವೆಂದರೆ ಧರ್ಮಸೂತ್ರಗಳು ಮತ್ತು ಮನುಸ್ಮೃತಿಯ ಪ್ರಕಾರ ಬ್ರಾಹ್ಮಣರು ಚಂಡಾಳರನ್ನು ಮುಟ್ಟಿದಾಗ ತಾತ್ಕಾಲಿಕವಾಗಿ ಮಲಿನರಾಗುತ್ತಾರೆ ಮತ್ತು ಆ ಮಲಿನತೆಯನ್ನು ಆಚರಿಸುವುದು ಕೇವಲ ನಿರ್ದಿಷ್ಟ ಸಮಯ ಮತ್ತು ಸಂದರ್ಭಗಳಲ್ಲಿ ಎಂದು ತಿಳಿದುಬರುತ್ತದೆ. ಮೇಲಿನ ವಿವರಣೆಗಳು ಸರಿಯಾದ ಪಕ್ಷದಲ್ಲಿ ಅಶುದ್ಧತೆ ಮತ್ತು ಅಸ್ಪೃಶ್ಯತೆ ಪ್ರತ್ಯೇಕವಾದ ವಿಷಯಗಳಾಗಿವೆ.

ಧರ್ಮಸೂತ್ರಗಳಲ್ಲಿನ ಈ ವಿವರಣೆಗಳಿಂದ ಚಂಡಾಳ ಸಮಾಜಗಳು ಆ ಕಾಲಕ್ಕೆ ಅಸ್ಪೃಶ್ಯ ಸಮಾಜಗಳಾಗಿರಲಿಲ್ಲ ಎನ್ನುವುದನ್ನು ಈ ಕೆಳಗಿನ ವಿವರಗಳು ಇನ್ನಷ್ಟು ಗಟ್ಟಿಗೊಳಿಸುತ್ತವೆ. 1) ಸ್ಮೃತಿಗಳಲ್ಲಿ ಹೆಸರಿಸಿರುವ ಅಸ್ಪೃಶ್ಯ ಸಮಾಜಗಳು ಹೆಚ್ಚೆಂದರೆ 12 ಮಾತ್ರ, ಭಾರತ ಸರ್ಕಾರ ನಿರೂಪಿಸಿದ ಆರ್ಡರ್-ಇನ್-ಕೌನ್ಸಿಲ್ ಪಟ್ಟಿಮಾಡಿರುವ ಅಸ್ಪೃಶ್ಯ ಸಮಾಜಗಳು 429. 2) ಆರ್ಡರ್-ಇನ್-ಕೌನ್ಸಿಲ್‌ನಲ್ಲಿ ದಾಖಲಾಗಿರುವ ಸಮಾಜಗಳು, ಸ್ಮೃತಿಗಳಲ್ಲಿ ದಾಖಲಾಗಲಿಲ್ಲ. ಒಟ್ಟು 429 ಸಮಾಜಗಳ ಪೈಕಿ 427 ಸಮಾಜಗಳು ಸ್ಮೃತಿಗಳಲ್ಲಿ ದಾಖಲಾಗಿಲ್ಲ. 3) ಸ್ಮೃತಿಗಳಲ್ಲಿರುವ ಕೆಲವು ಸಮಾಜಗಳು ಆರ್ಡರ್-ಇನ್-ಕೌನ್ಸಿಲ್‌ನಲ್ಲಿ ಇಲ್ಲವೇ ಇಲ್ಲ. 4) ಆರ್ಡರ್-ಇನ್-ಕೌನ್ಸಿಲ್ ಮತ್ತು ಸ್ಮೃತಿಗಳಲ್ಲಿ ದಾಖಲಾಗಿರುವ ಒಂದೇ ಒಂದು ಸಮಾಜವೆಂದರೆ ಚರ್ಮಕಾರ ಸಮಾಜ.

ಅಶುದ್ಧತೆ ಮತ್ತು ಅಸ್ಪೃಶ್ಯತೆಗಳ ನಡುವೆ ಯಾವ ರೀತಿಯ ಸಂಬಂಧವೂ ಇಲ್ಲವಾದರೂ, ಇದೆ ಎಂದು ನಂಬಿರುವವರೆ ಹೆಚ್ಚು. ಧರ್ಮಶಾಸ್ತ್ರಗಳು ಮತ್ತು ಆರ್ಡರ್-ಇನ್-

ಕೌನ್ಸಿಲ್‌ನಲ್ಲಿ ಬರುವ ಸಮಾಜಗಳು ಒಂದೇ ಆದ ಪಕ್ಷದಲ್ಲಿ ತಮ್ಮ ಸ್ಥಾನಗಳನ್ನು ಧರ್ಮ ಶಾಸ್ತ್ರಗಳಲ್ಲಿ ಏಕೆ ಪಡೆಯಲಿಲ್ಲ ಎನ್ನುವುದು ಜಟಿಲವಾದ ಪ್ರಶ್ನೆಯಾಗಿದೆ. ಧರ್ಮಶಾಸ್ತ್ರಗಳಲ್ಲಿ ಬರುವ ಸಮಾಜಗಳು ಹಾಗೂ ಆರ್ಡರ್-ಇನ್-ಕೌನ್ಸಿಲ್‌ನಲ್ಲಿ ಬರುವ ಸಮಾಜಗಳು ಒಂದೇ ಎಂದು ತಿಳಿದುಕೊಂಡರೆ ಮೂಲವಾಗಿ ಅಸ್ಪೃಶ್ಯತೆ 12 ಸಮಾಜಗಳಿಗೆ ಮಾತ್ರ ಸೀಮಿತವಾಗಿದ್ದು ಅನಂತರ 429 ಸಮಾಜಗಳಾಗಿ ವಿಭಜನೆಗೊಂಡಿರಬೇಕು. ಯಾವ ಕಾರಣದಿಂದ ಇಷ್ಟು ಸಮಾಜಗಳಾಗಿ ವಿಭಜನೆ ಗೊಂಡವು? 12 ಸಮಾಜಗಳು ಮುಂದೆ 429 ಸಮಾಜಗಳಾಗಿ ಪರಿವರ್ತನೆಗೊಂಡಿದ್ದು ನಿಜವಾದ ಪಕ್ಷದಲ್ಲಿ ಧರ್ಮಸೂತ್ರಗಳಲ್ಲಿನ ಕನಿಷ್ಠ ಕೆಲವಾದರೂ ಏಕೆ ದಾಖಲಾಗಲಿಲ್ಲ? ಇದಕ್ಕೆ ಎರಡು ರೀತಿಯ ಉತ್ತರಗಳನ್ನು ನೀಡಬಹುದಾಗಿದೆ. ಒಂದು ಮೂಲವಾಗಿ ಧರ್ಮಸೂತ್ರಗಳಲ್ಲಿರುವ 12 ಅಸ್ಪೃಶ್ಯ ಸಮಾಜಗಳು ಮುಂದಿನ ದಿನಗಳಲ್ಲಿ ನಶಿಸಿಹೋಗಿರಬೇಕು. ಎರಡು, ಧರ್ಮಸೂತ್ರಗಳು ಮತ್ತು ಆರ್ಡರ್-ಇನ್-ಕೌನ್ಸಿಲ್‌ನಲ್ಲಿ ಬರುವ ಸಮಾಜಗಳು ಬೇರೆ ಬೇರೆಯೇ ಆಗಿರಬೇಕು. ಮೊದಲನೆಯ ಉತ್ತರ ಸಮಂಜಸವಲ್ಲ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಅಸ್ಪೃಶ್ಯತೆ ಎನ್ನುವುದು ಶಾಶ್ವತವಾಗಿದ್ದಲ್ಲಿ ಸಮಯ ಅದನ್ನು ನಶಿಸಲಾಗಲಿಲ್ಲ. ಈ ಕಾರಣಕ್ಕಾಗಿಯೇ ಧರ್ಮಸೂತ್ರಗಳು ಮತ್ತು ಆರ್ಡರ್-ಇನ್-ಕೌನ್ಸಿಲ್‌ನಲ್ಲಿ ಬರುವ ಹೆಸರುಗಳು ಬೇರೆ ಬೇರೆಯೇ ಆಗಿರಬೇಕು.

ಚರ್ಮಕಾರ ಸಮಾಜ ಮಾತ್ರ ಎರಡೂ ಪಟ್ಟಿಗಳಲ್ಲಿ ಕಾಣಿಸಿಕೊಂಡಿದೆ ಎಂದರೆ ಅದಕ್ಕೆ ಉತ್ತರ ಎರಡೂ ಪಟ್ಟಿಗಳಲ್ಲಿ ಒಂದೇ ಸಮಾಜ ಸೇರಿಕೊಂಡಿದೆ ಎಂಬುದಲ್ಲ. ಅದೇ ಉತ್ತರವಾದರೆ ಇತರ ಸಮಾಜಗಳು ಎರಡರಲ್ಲೂ ಬಿಟ್ಟುಹೋದುದಾದರೂ ಏತಕ್ಕೆ? ಇದಕ್ಕೆ ಸರಿಯಾದ ಉತ್ತರವೆಂದರೆ ಎರಡೂ ಪಟ್ಟಿಗಳಲ್ಲೂ ದಾಖಲಾಗಿರುವ ಸಮಾಜಗಳು ಪ್ರತ್ಯೇಕ ಎನ್ನುವುದು. ಒಂದು ಕಾಲದಲ್ಲಿ ಅಶುದ್ಧವೆನಿಸಿಕೊಂಡ ಸಮಾಜಗಳೇ ಮುಂದಿನ ದಿನಗಳಲ್ಲಿ ಅಸ್ಪೃಶ್ಯ ಸಮಾಜಗಳಾಗಿ ಮಾರ್ಪಟ್ಟಿರಬೇಕು. ಅದೇ ಕಾರಣದಿಂದಲೇ ಚರ್ಮಕಾರ ಸಮಾಜ ಧರ್ಮಸೂತ್ರಗಳು ಮತ್ತು ಆರ್ಡರ್-ಇನ್-ಕೌನ್ಸಿಲ್ ಎರಡರಲ್ಲೂ ದಾಖಲಾಗಿರುವುದು. ಈ ಕಾರಣದಿಂದಲೇ ಅಶುದ್ಧತೆ ಅಸ್ಪೃಶ್ಯತೆಯಾಯಿತು ಎನ್ನುವುದು ದೃಢವಾಗುತ್ತದೆ. ಚರ್ಮಕಾರ ಒಂದು ಕಾಲದಲ್ಲಿ ಅಶುದ್ಧ ಸಮಾಜವಾಗಿದ್ದು ಅನಂತರ ಅದು ಅಸ್ಪೃಶ್ಯ ಸಮಾಜವಾಗಿ ಮಾರ್ಪಟ್ಟ ಕಾರಣ ಎರಡೂ ಪಟ್ಟಿಗಳಲ್ಲಿ ಸ್ಥಾನ ಪಡೆದುಕೊಂಡಿರಬೇಕು. ಧರ್ಮಸೂತ್ರಗಳಲ್ಲಿ ಬರುವ 12 ಸಮಾಜಗಳು ಮೂಲವಾಗಿ ಅಶುದ್ಧ ಸಮಾಜಗಳಾಗಿದ್ದು, ಚರ್ಮಕಾರ ಸಮಾಜ ಮಾತ್ರ ಅಸ್ಪೃಶ್ಯ ಸಮಾಜಕ್ಕಿಂತ ಮೊದಲೇ ರೂಪುಗೊಂಡಿರಬೇಕು. ಚರ್ಮಕಾರ ಮತ್ತು ಅಶುದ್ಧ ಸಮಾಜಗಳ ಮಧ್ಯದ ಅಂತರವೆಂದರೆ ಗೋಮಾಂಸ ಭಕ್ಷಣೆ. ಅಶುದ್ಧ ಸಮಾಜಗಳು ಮುಂದಿನ ದಿನಗಳಲ್ಲಿ ಗೋಮಾಂಸ ಭಕ್ಷಿಸುವುದನ್ನು ಮುಂದುವರಿಸಿದ ಕಾರಣ ಅಸ್ಪೃಶ್ಯರಾದರು. ಹಸು ಗೋಮಾತೆಯಾಗಿ, ಗೋಮಾಂಸ ಭಕ್ಷಣೆ ಪಾಪವೆಂದು ಸಾರಿದ ನಂತರ ಅಶುದ್ಧ ಸಮಾಜಗಳು ಅಸ್ಪೃಶ್ಯ ಸಮಾಜಗಳಾಗಿರಬೇಕು.

ಮೇಲಿನ ವಿವರಗಳಿಂದ ತಿಳಿದುಬರುವ ವಿಷಯವೆಂದೆ ಅಶುದ್ಧತೆ ಮತ್ತು ಅಸ್ಪೃಶ್ಯತೆ ಪ್ರತ್ಯೇಕವಾದವು. ಹಸುವನ್ನು ಪೂಜಿಸಲು ಪ್ರಾರಂಭಿಸಿದ ಕಾಲದಿಂದ ಗೋಮಾಂಸ ಭಕ್ಷಿಸುವ ಸಮಾಜಗಳು ಅಸ್ಪೃಶ್ಯ ಸಮಾಜಗಳಾಗಿ ಪರಿವರ್ತನೆಗೊಂಡವು. ಅಂದರೆ ಗೋಮಾಂಸ ಭಕ್ಷಣೆ ಅಸ್ಪೃಶ್ಯತೆಗೆ ಮೂಲ ಕಾರಣವಾಯಿತು.

## ಅಧ್ಯಾಯ–10

ನಾನೆಂದೂ ನನ್ನ ಸ್ವಾಭಿಮಾನವನ್ನು ಮಾರಾಟ ಮಾಡಿಕೊಳ್ಳಲಿಲ್ಲ
–ಅಂಬೇಡ್ಕರ್.

# ಹಿಂದೂ ಮೇಲ್ಜಾತಿಗಳ ಪೌರೋಹಿತ್ಯ

ಬ್ರಾಹ್ಮಣರು, ಅಸ್ಪೃಶ್ಯರಿಗೆ ಪೌರೋಹಿತ್ಯವನ್ನು ಮಾಡುವುದಿಲ್ಲವೇ ಅಥವಾ ಅಸ್ಪೃಶ್ಯರು, ಬ್ರಾಹ್ಮಣರ ಪೌರೋಹಿತ್ಯವನ್ನು ನಿರಾಕರಿಸಿದ್ದಾರೆಯೇ ಎನ್ನುವುದನ್ನು ತಿಳಿದುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ಕ್ರಿ. ಶ. 1910ರವರೆಗೆ ಭಾರತ ಜನಗಣತಿ ವಿಭಾಗ ದೇಶದಲ್ಲಿನ ಜನರನ್ನು ಮುಖ್ಯವಾಗಿ ಮೂರು ವಿಭಾಗಗಳಾಗಿ ವಿಂಗಡಿಸಿತ್ತು. ಮುಸ್ಲಿಮರು, ಹಿಂದೂಗಳು ಮತ್ತು ಕ್ರೈಸ್ತರು. 1910ರ ನಂತರ ಹಿಂದೂಗಳನ್ನು ಮತ್ತೆ ಮೂರು ವಿಭಾಗಗಳಾಗಿ ತೋರಿಸಲಾಯಿತು. ಹಿಂದೂಗಳು, ಬುಡಕಟ್ಟು ಜನರು ಮತ್ತು ಅಸ್ಪೃಶ್ಯರು.

ಹಿಂದೂಗಳು ಮತ್ತು ಅಸ್ಪೃಶ್ಯರ ನಡುವಿನ ಅಂತರವನ್ನು ಜನಗಣತಿ ಆಯುಕ್ತರು ಈ ರೀತಿಯಾಗಿ ವಿವರಿಸಿದ್ದಾರೆ: ಅಸ್ಪೃಶ್ಯರೆಂದರೆ ಬ್ರಾಹ್ಮಣರ ಶ್ರೇಷ್ಠತೆಯನ್ನು ಒಪ್ಪದವರು, ಬ್ರಾಹ್ಮಣರಿಂದ ಮಂತ್ರಗಳನ್ನು ಸ್ವೀಕರಿಸದವರು, ವೇದಗಳನ್ನು ಒಪ್ಪದವರು, ಹಿಂದೂ ದೇವರುಗಳನ್ನು ನಂಬದವರು, ಬ್ರಾಹ್ಮಣರ ಪೌರೋಹಿತ್ಯವನ್ನು ಒಪ್ಪದವರು, ಬ್ರಾಹ್ಮಣ ಗುರುಗಳಿಲ್ಲದವರು, ಹಿಂದೂ ದೇವಾಲಯಗಳ ಗರ್ಭಗುಡಿಗಳಿಗೆ ಪ್ರವೇಶ ಪಡೆಯದವರು. ಅಶುದ್ಧ ಜನ ಎಂಬುವವರು, ಅನಾಥ ಶವಗಳನ್ನು ಹೂಳುವವರು ಮತ್ತು ಗೋಮಾಂಸವನ್ನು ಭಕ್ಷಿಸುವವರು.

ಮೇಲಿನ ಅಂಶಗಳಲ್ಲಿ ಅಸ್ಪೃಶ್ಯರಿಗೆ ಸಂಬಂಧಪಟ್ಟ ಕೆಲವು ಮುಖ್ಯ ವಿಷಯಗಳನ್ನು ಮಾತ್ರ ಪ್ರಸ್ತಾಪಕ್ಕೆ ತೆಗೆದುಕೊಳ್ಳಲಾಗಿದೆ. ಜನಗಣತಿ ಆಯುಕ್ತರು ಮೇಲಿನ ಕಾರಣಗಳನ್ನು ತೋರುನೋಟಕ್ಕೆ ನೀಡಿದ್ದರೂ ಅದರ ಹಿಂದಿನ ಸತ್ಯಗಳು ಬೇರೆಯೇ ಆಗಿವೆ. ಅಸ್ಪೃಶ್ಯರು ಬ್ರಾಹ್ಮಣರಿಂದ ಮಂತ್ರಗಳನ್ನು ಏಕೆ ಸ್ವೀಕರಿಸುತ್ತಿಲ್ಲ, ಬ್ರಾಹ್ಮಣರು ಅಸ್ಪೃಶ್ಯರಿಗೆ ಪೌರೋಹಿತ್ಯವನ್ನು ಏಕೆ ಮಾಡುತ್ತಿಲ್ಲ, ಅಸ್ಪೃಶ್ಯರು ತಮ್ಮ ಸ್ವಂತ ಪುರೋಹಿತರನ್ನು ಏಕೆ ಹೊಂದಿದ್ದರು ಎಂಬ ಪ್ರಶ್ನೆಗಳ ಹಿಂದೆ ಹಲವು ಸತ್ಯಗಳು ಮರೆಮಾಚಿಕೊಂಡಿದ್ದು ಅದರ ಹಿಂದೆಯೇ ಅಸ್ಪೃಶ್ಯತೆಯ ಮೂಲವೂ ಸ್ವಲ್ಪಮಟ್ಟಿಗೆ ಅಡಗಿದೆ ಎನ್ನಬಹುದು.

ಜನಗಣತಿ ಆಯುಕ್ತರು ಬ್ರಾಹ್ಮಣರು, ಅಸ್ಪೃಶ್ಯರಿಗೆ ಪೌರೋಹಿತ್ಯವನ್ನು ತಿರಸ್ಕರಿಸಿದ್ದಾರೆ ಎಂದಿದ್ದಾರೆ. ಆದರೆ ಅಸ್ಪೃಶ್ಯರೂ ಕೂಡ ಬ್ರಾಹ್ಮಣರನ್ನು ತಮ್ಮ ಸಾಂಸ್ಕಾರಿಕ ಕಾರ್ಯಕ್ರಮಗಳಿಗೆ ಸೇರಿಸುತ್ತಿರಲಿಲ್ಲ ಎನ್ನುವುದು ಸಹ ಅಷ್ಟೇ ಸತ್ಯ. ಜನರು ಸಾಮಾನ್ಯವಾಗಿ ತಿಳಿದಿರುವಂತೆ ಬ್ರಾಹ್ಮಣರು ಅತಿ ಶ್ರೇಷ್ಠರಾಗಿದ್ದು, ಅಸ್ಪೃಶ್ಯರು ಅತಿ ಕೀಳು ಜನರು. ಆದರೆ ಅಸ್ಪೃಶ್ಯರು

ತಿಳಿದಿರುವಂತೆ ಬ್ರಾಹ್ಮಣರೂ ಕೂಡ ಅಶುದ್ಧರೆ. ಬ್ರಾಹ್ಮಣರು, ಅಸ್ಪೃಶ್ಯರಿರುವ ಸ್ಥಳಗಳಿಗೆ ಬರುವುದೆಂದರೆ ಯಾವುದೋ ಅಜಾಗರೂಕತೆಯ ಕೆಟ್ಟ ಘಳಿಗೆ ಬರಲಿದೆ ಎಂದೇ ನಂಬುತ್ತಾರೆ. ಈ ವಿಷಯವನ್ನು ತಿಳಿದುಕೊಳ್ಳಬೇಕಾದರೆ ಅಸ್ಪೃಶ್ಯರ ಕೆಲವು ಪದ್ಧತಿಗಳನ್ನು ತಿಳಿದುಕೊಳ್ಳುವುದು ಸೂಕ್ತವೆನಿಸುತ್ತದೆ.

ಅಬೆ ದುಬ್ವಾ ಹೀಗೆ ವಿವರಿಸುತ್ತಾನೆ: ಈ ದಿನಗಳಲ್ಲೂ ಬ್ರಾಹ್ಮಣರು, ಪರಯರನ್ನು ತಮ್ಮ ಹಳ್ಳಿಯ ಬೀದಿಗಳಲ್ಲಿ ಹಾದುಹೋಗಲು ಬಿಡುವುದಿಲ್ಲ. ಅದೇ ರೀತಿಯಾಗಿ ಪರಯರು ಕೂಡ ತಮ್ಮ ಗುಡಿಸಿಲುಗಳಿರುವ ಸ್ಥಳಕ್ಕೆ ಬ್ರಾಹ್ಮಣರು ಬರುವುದನ್ನು ಸಹಿಸುವುದಿಲ್ಲ. ಬ್ರಾಹ್ಮಣರು ಬರುವುದೆಂದರೆ ತಮ್ಮ ನಾಶ ಗ್ಯಾರೆಂಟಿ ಎಂದೇ ನಂಬಲಾಗಿದೆ. ತಂಜಾವೂರು ಜಿಲ್ಲೆಯ ಗೆಜೆಟೀರ್ ಬರೆದ ಹೆಮ್ಮಿಂಗ್ಸ್‌ವೇ ಹೇಳುವಂತೆ ತಂಜಾವೂರು ಜಿಲ್ಲೆಯ ಪರಯ, ಪಲ್ಲನ್ ಅಥವಾ ಚಕ್ಕಲಿಯಾನ್ ಜಾತಿಯವರು ತಮ್ಮ ಬೀದಿಗಳಿಗೆ ಬ್ರಾಹ್ಮಣರ ಆಗಮನ ಎಂದರೆ ತಮಗೆ ಯಾವುದೋ ತೊಂದರೆ ಕಟ್ಟಿಟ್ಟಂತೆಯೇ ಎಂದು ಭಾವಿಸುತ್ತಾರೆ.

ಮೈಸೂರು ಜಿಲ್ಲೆಯ ಹೊಲೆಯರ ಬಗ್ಗೆ ಕ್ಯಾಪ್ಟನ್ ಮೆಕ್ಕೆಂಜಿ ಹೀಗೆ ವಿವರಿಸಿದ್ದಾನೆ: ಪ್ರತಿ ಹಳ್ಳಿಯ ಹೊರಗೆ ಹೊಲೆಯರ ಮನೆಗಳಿವೆ. ಇವರು ಮೂಲವಾಗಿ ವ್ಯವಸಾಯ ಮಾಡುತ್ತಿದ್ದ ಗುಲಾಮರು ಮತ್ತು ಅಸ್ಪೃಶ್ಯತೆಯ ಕಳಂಕಕ್ಕೆ ಈಡಾದವರು. ಬ್ರಾಹ್ಮಣರು ನೇರವಾಗಿ ಇವರ ಕೈಗಳಿಂದ ಏನನ್ನೂ ಪಡೆಯುವುದಿಲ್ಲ. ಆದರೆ ಅದೇ ಬ್ರಾಹ್ಮಣರು ತಾವು ಹೊಲೆಯರ ಬೀದಿಗಳಲ್ಲಿ ಯಾವ ತೊಂದರೆಯೂ ಇಲ್ಲದೆ ಹಾದುಹೋದರೆ ತಮಗೆ ಯಾವುದೋ ಅದೃಷ್ಟವು ಒಲಿಯುತ್ತದೆ ಎಂದೇ ನಂಬುತ್ತಾರೆ. ಹೊಲೆಯರು ಮಾತ್ರ ಬ್ರಾಹ್ಮಣರ ಆಗಮನವನ್ನು ಇಷ್ಟಪಡುವುದಿಲ್ಲ. ಹೊಲೆಯರ ಬೀದಿಗಳಲ್ಲಿ ಬ್ರಾಹ್ಮಣರು ಹಾದುಹೋದರೆ ತಮಗೆ ಭಾರಿ ಕೆಡಕು ಕಾದಿದೆಯೆಂದೇ ನಂಬುತ್ತಾರೆ. ಇತರ ಜಾತಿಗಳವರು ಹೊಲೆಯರ ಬಾಗಿಲುಗಳವರೆಗೆ ಬರಬಹುದು, ಮನೆಯ ಒಳಗೆ ಬಂದರೆಂದರೆ ಕೆಟ್ಟದ್ದಾಗುತ್ತದೆ ಎಂದೇ ನಂಬುವರು. ಹಾಗೆ ಯಾರಾದರೂ ತಪ್ಪಿ ಹೊಲೆಯರ ಮನೆಗಳ ಒಳಗೆ ಬಂದುಬಿಟ್ಟರೆ ಅವರ ಬಟ್ಟೆಯನ್ನು ಸೀಳಿ ಅದರ ಕೊನೆಯಲ್ಲಿ ಸ್ವಲ್ಪ ಉಪ್ಪು ಕಟ್ಟಿ ಕಳುಹಿಸಿಕೊಡುತ್ತಾರೆ. ಇದರಿಂದ ಹೊಲೆಯರಿಗೆ ಏನಾದರೂ ಕೆಡಕು ನಡೆಯುವುದಿದ್ದರೆ ಅದು ನಡೆಯದೇ ಹೋಗಲಿ ಎನ್ನುವುದೇ ಇದರ ಆಶಯ.

ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲೂಕಿನ ಹಳ್ಳಿಗಳಲ್ಲಿ ಸಾವು ಹೊಲೆಯರು ಯಾವುದೇ ಒಳ್ಳೆ ಕಾರ್ಯಗಳಿಗೆ ಹೋಗುವ ಮುಂಚೆ ಮುಖ್ಯರಸ್ತೆಗೆ ಒಬ್ಬರನ್ನು ಕಳುಹಿಸಿ ಯಾರಾದರೂ ಅಡ್ಡ ಬರುತ್ತಿದ್ದಾರೆಯೇ ಎಂದು ನೋಡಿ ಬರಲು ಹೇಳುತ್ತಾರೆ. ಒಂದು ಮುತ್ತೈದೆ ಹೆಣ್ಣು, ಕೊನೆಗೆ ಹೆಣ ಹೊತ್ತು ಅಡ್ಡ ಬಂದರೂ ಸರಿ ಅದು ಒಳ್ಳೆಯ ಶಕುನವೇ. ಆದರೆ ಒಬ್ಬ ಬ್ರಾಹ್ಮಣ ಅಡ್ಡ ಬಂದರೆ ಅಪಶಕುನವೆಂದು ಪ್ರಯಾಣವನ್ನು ಮುಂದೂಡುತ್ತಾರೆ. ಮನೆಯಿಂದ ಆಗಲೇ ಹೊರಗೆ ಬಂದಿದ್ದರೆ ಮತ್ತೆ ಮನೆಗೆ ವಾಪಾಸ್ ಬಂದು ನೀರು ಕುಡಿದು, ಸ್ವಲ್ಪ ಹೊತ್ತು ಕುಳಿತ ನಂತರ ಮತ್ತೆ ಪ್ರಯಾಣ ಮುಂದುವರಿಸುತ್ತಾರೆ. ಅಂದರೆ ಹೊಲೆಯರು ಮತ್ತು ಬ್ರಾಹ್ಮಣರ ಮಧ್ಯೆ ಯಾವುದೋ ಕಾಲದಿಂದ ವೈರತ್ವ ಇರಲೇಬೇಕು.

ಬ್ರಾಹ್ಮಣರು, ಅಸ್ಪೃಶ್ಯರಿಗೆ ಪೌರೋಹಿತ್ಯವನ್ನು ನೀಡಲು ಒಪ್ಪುವುದಿಲ್ಲವೆ? ಅಥವಾ ಅಸ್ಪೃಶ್ಯರು ಬ್ರಾಹ್ಮಣರ ಪೌರೋಹಿತ್ಯವನ್ನು ಒಪ್ಪುವುದಿಲ್ಲವೆ? ಯಾವುದು ಸರಿಯಾದ ವಿಷಯ ಎನ್ನುವ ಪ್ರಶ್ನೆಗೆ ಉತ್ತರ ದೊರಕಬೇಕಾಗಿದೆ. ಬ್ರಾಹ್ಮಣರು ಅಸ್ಪೃಶ್ಯರನ್ನು ಅಶುದ್ಧರೆಂದು ತಿಳಿದಿರುವರೆ? ಅಥವಾ ಅಸ್ಪೃಶ್ಯರು ಬ್ರಾಹ್ಮಣರನ್ನು ಅಶುದ್ಧರೆಂದು ನಂಬಿರುವರೆ? ಇದರ ಬಗ್ಗೆ ನಮಗೆ ಸರಿಯಾದ ಮಾಹಿತಿಗಳು ದೊರಕುವುದಿಲ್ಲವಾದರೂ ಮೇಲಿನ ವಿವರಗಳನ್ನು ಆಳವಾಗಿ ಯೋಚಿಸಿದಾಗ ಒಬ್ಬರನ್ನೊಬ್ಬರು ಯಾವುದೋ ಕಾಲದಿಂದ ದ್ವೇಷಿಸುತ್ತಿರುವುದಾಗಿ ತಿಳಿದುಬರುತ್ತದೆ.

ಪ್ರಸ್ತುತ ವಿಷಯಕ್ಕೆ ಬಂದಾಗ ಹಳ್ಳಿಗಳಲ್ಲಿರುವ ಅಸ್ಪೃಶ್ಯರ ಮನೆಗಳಲ್ಲಿ ನಡೆಯುವ ಯಾವುದೇ ಪೂಜೆ ಪುನಸ್ಕಾರ, ಮದುವೆಗಳನ್ನು ಅವರ ನಡುವಿನ ಹಿರಿಯರೇ ನಡೆಸಿಕೊಡುತ್ತಾರೆ. ಸಾವಿನ ವಿಷಯದಲ್ಲಂತೂ ಬೇರೆಯವರು ಮಧ್ಯ ಪ್ರವೇಶಿಸುವ ಸಂಭವವೇ ಇಲ್ಲ. ಕಳೆದ 50 ವರ್ಷಗಳಲ್ಲಿ ಮೀಸಲಾತಿಯಿಂದ ಸ್ವಲ್ಪಮಟ್ಟಿಗೆ ಆರ್ಥಿಕವಾಗಿ ಮುಂದುವರೆದಿರುವ ಅಸ್ಪೃಶ್ಯರು ನಗರ ವಾತಾವರಣದಲ್ಲಿ ತಮ್ಮ ಮನೆಗಳಲ್ಲಿ ನಡೆಯುವ ಪೂಜೆ ಪುನಸ್ಕಾರಗಳಿಗೆ ವಿಶೇಷವಾಗಿ ಮದುವೆಗಳಿಗೆ ಈಗೀಗ ಬ್ರಾಹ್ಮಣರನ್ನು ಕರೆಸುವ ಪರಿಪಾಟವನ್ನು ರೂಢಿಸಿಕೊಳ್ಳುತ್ತಿದ್ದಾರೆ. ಬ್ರಾಹ್ಮಣರು ಕೂಡ ಪೌರೋಹಿತ್ಯ ಒಂದು ವೃತ್ತಿ ಎನ್ನುವಂತೆ ಜಾತಿ ಧರ್ಮಗಳನ್ನು ಲೆಕ್ಕಿಸದೆ ಪೌರೋಹಿತ್ಯವನ್ನು ನಡೆಸಿಕೊಡುತ್ತಿದ್ದಾರೆ. ಅಡಿಗೆ ಮಾಡುವುದಕ್ಕೂ ಬ್ರಾಹ್ಮಣರನ್ನೇ ನೆಚ್ಚಿಕೊಳ್ಳುತ್ತಿದ್ದಾರೆ. ಆದರೆ ಇದು ಸಸ್ಯಾಹಾರಿ ಅಡಿಗೆ ಮಾತ್ರ.

## ಗೋಮಾಂಸ ಭಕ್ಷಣೆಯಿಂದ ಅಸ್ಪೃಶ್ಯತೆ ಹುಟ್ಟಿಕೊಂಡಿತೆ?

ಭಾರತ ಜನಗಣತಿ ಆಯುಕ್ತರು ಮುಖ್ಯವಾಗಿ ಸತ್ತ ಹಸುವಿನ ಮಾಂಸವನ್ನು ಭಕ್ಷಣೆ ಮಾಡುವ ಜನಾಂಗಗಳನ್ನು ಅಸ್ಪೃಶ್ಯರೆಂದು ಗುರುತಿಸಲಾಗಿದೆ ಎಂದಿದ್ದಾರೆ. ಅಸ್ಪೃಶ್ಯರನ್ನು ಬಿಟ್ಟರೆ ಬೇರೆ ಹಿಂದೂಗಳು ಯಾರೂ ಗೋಮಾಂಸವನ್ನು ಭಕ್ಷಿಸುವುದಿಲ್ಲ ಎನ್ನುವುದೇನೋ ನಿಜ. ಗೋಮಾಂಸವನ್ನು ಭಕ್ಷಿಸುವುದರ ಜೊತೆಗೆ ಕೆಲವರು ಅದರ ಚರ್ಮ ಸುಲಿದು ಚಪ್ಪಲಿ, ಬೂಟು, ಬೆಲ್ಟ್ ಮತ್ತಿತರ ಚರ್ಮದ ವಸ್ತುಗಳನ್ನು ತಯಾರಿಸುತ್ತಾರೆ. ಪ್ರಶ್ನೆ ಎಂದರೆ ಗೋಮಾಂಸ ಭಕ್ಷಿಸುವುದರಿಂದ ಅಸ್ಪೃಶ್ಯತೆ ಹುಟ್ಟಿಕೊಂಡಿತೆ? ಛಿದ್ರವಾದ ಬುಡಕಟ್ಟು ಜನಾಂಗಗಳು ಗೋಮಾಂಸ ಭಕ್ಷಿಸುವುದರಿಂದ ಅಸ್ಪೃಶ್ಯ ಸಮಾಜಗಳಾದವೆ? ಇದಲ್ಲದೆ ಬೇರೆ ಯಾವುದಾದರೂ ಕಾರಣಗಳು ಹಿಂದೂಗಳಿಂದ ಅಸ್ಪೃಶ್ಯರನ್ನು ಪ್ರತ್ಯೇಕಿಸಿತೆ?

ಹಿಂದೂಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಸಮಾಜಗಳಿವೆ. ಒಂದು ಸಸ್ಯಾಹಾರಿಗಳು, ಇನ್ನೊಂದು ಮಾಂಸಾಹಾರಿಗಳು. ಇದರಲ್ಲಿಯೇ ಇನ್ನೊಂದು ಉಪವಿಭಾಗವೆಂದರೆ ಗೋಮಾಂಸ ಭಕ್ಷಿಸುವವರು. ಇವರು ಮಾತ್ರ ಅಸ್ಪೃಶ್ಯರಾಗಿರುವರು. ಮೊದಲನೇ ವಿಚಾರ ಹಿಂದೂಗಳನ್ನು ಯಾವ ರೀತಿಯಲ್ಲೂ ಇಬ್ಭಾಗ ಮಾಡಲಿಲ್ಲ. ಆದರೆ ಎರಡನೇ ವಿಚಾರವು ಹಿಂದೂಗಳನ್ನು ಸ್ಪೃಶ್ಯರು ಮತ್ತು ಅಸ್ಪೃಶ್ಯರು ಎಂದು ಎರಡು ವಿಭಾಗಗಳಾಗಿ ಒಡೆದಿದೆ. ಗೋಮಾಂಸ ಭಕ್ಷಣೆಗೆ ಸಂಬಂಧಪಟ್ಟಂತೆ ಹಿಂದೂ ಶಾಸ್ತ್ರಗಳಲ್ಲಿ ಬರುವ ಕೆಲವು ಮುಖ್ಯ ವಿಷಯಗಳು ಹೀಗಿವೆ:

ವೇದವ್ಯಾಸ ಸ್ಮೃತಿಯ ಶ್ಲೋಕ 12–13ರ ಪ್ರಕಾರ ಚರ್ಮಕಾರ, ಭಟ (ಸೈನಿಕ), ಭಿಲ್ಲ, ರಜಕ (ದೋಬಿ), ಪುಷ್ಕರ, ನಟ, ಷಟ, ಮೇದ, ಚಂಡಾಳ, ದಾಸ, ಶ್ವಪಾಕ ಮತ್ತು ಕೋಲಿಕ ಜನಾಂಗಗಳ ಅಂತ್ಯಜರು ಗೋಮಾಂಸವನ್ನು ಭಕ್ಷಿಸುವವರು. ಸಾಮಾನ್ಯವಾಗಿ ವೇದಗಳಲ್ಲಿ ಈ ವಿವರಣೆಗಳನ್ನು ನೀಡಿಲ್ಲ. ಆದರೆ ಸ್ಮೃತಿಯಲ್ಲಿ ಅದನ್ನು ವಿವರಿಸಿದ್ದಾರೆ. ಸ್ಮೃತಿಕಾರರಿಗೆ ಅಸ್ಪೃಶ್ಯತೆಯ ಮೂಲ ಕಾರಣವು ತಿಳಿದಿರುವುದು ಇಲ್ಲಿ ಸ್ಪಷ್ಟವಾಗಿ ಕಾಣಿಸುತ್ತದೆ. ಇಲ್ಲಿ ಅಸ್ಪೃಶ್ಯರನ್ನು ಬಿಟ್ಟು ಮಿಕ್ಕವರೆಲ್ಲ ಕಾಲಾಂತರದಲ್ಲಿ ಗೋಮಾಂಸ ಭಕ್ಷಿಸುವುದನ್ನು ತ್ಯಜಿಸಿ ಹಿಂದೂಗಳನ್ನು (ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ) ಅನುಕರಿಸಿರಬೇಕು. ಕೆಲವು ಜನಾಂಗಗಳು ಗೋಮಾಂಸ ಭಕ್ಷಣೆಯನ್ನು ಮುಂದುವರಿಸಿದ ಕಾರಣ ಅಸ್ಪೃಶ್ಯತೆ ಅವರನ್ನು ಆವರಿಸಿಕೊಂಡಿರಬೇಕು.

ಬೌದ್ಧರನ್ನು ಮೂಲವಾಗಿ ಬ್ರಾಹ್ಮಣರು ದ್ವೇಷಿಸಲು ಪ್ರಾರಂಭಿಸಿದ ಮೇಲೆ ಅವರನ್ನು ಅಸ್ಪೃಶ್ಯರ ಜೊತೆಗೆ ಸೇರಿಸಿರಬೇಕು ಎನ್ನುವುದಾಗಿ ತಿಳಿದುಬರುತ್ತದೆ. ಒಂದು ಕಾಲದಲ್ಲಿ ಬ್ರಾಹ್ಮಣರ ಸಮೇತ ಎಲ್ಲರೂ ಗೋಮಾಂಸವನ್ನು ಭಕ್ಷಿಸುತ್ತಿದ್ದರು. ಬ್ರಾಹ್ಮಣರು ಬೌದ್ಧರನ್ನು ದ್ವೇಷಿಸಲು ಪ್ರಾರಂಭಿಸಿದಾಗ ಮತ್ತು ಅವರ ಜೊತೆಗೆ ಛಿದ್ರವಾದ ಬುಡಕಟ್ಟು ಜನಾಂಗಗಳು ಮತ್ತು ಬೌದ್ಧ ಜನಾಂಗಗಳು ಗೋಮಾಂಸ ಭಕ್ಷಿಸುವುದನ್ನು ಮುಂದುವರಿಸಿದ ಸಮಯದಲ್ಲಿ ಬ್ರಾಹ್ಮಣರು ಗೋಮಾಂಸ ಭಕ್ಷಣೆಯನ್ನು ತ್ಯಜಿಸಿ ಗೋಪೂಜೆ ಮಾಡಲು ಪ್ರಾರಂಭಿಸಿದರು. ಗೋಮಾಂಸ ಭಕ್ಷಿಸುವ ಬೌದ್ಧರು ಮತ್ತು ಛಿದ್ರ ಬುಡಕಟ್ಟು ಜನಾಂಗಗಳು ಮುಂದಿನ ದಿನಗಳಲ್ಲಿ ಅಸ್ಪೃಶ್ಯರೆಂಬ ಕಳಂಕವನ್ನು ಹೊತ್ತುಕೊಳ್ಳಬೇಕಾಯಿತು.

ಗೋಮಾಂಸ ಭಕ್ಷಣೆಯಿಂದ ಅಸ್ಪೃಶ್ಯತೆ ಹುಟ್ಟಿಕೊಂಡಿತು ಎನ್ನುವ ವಿಚಾರದಲ್ಲಿ ಹಲವು ಪ್ರಶ್ನೆಗಳು ಏಳುತ್ತವೆ. ಹಿಂದೂಗಳು ಗೋಮಾಂಸ ಭಕ್ಷಿಸುವುದನ್ನು ಬಿಟ್ಟರೇಕೆ? ಹಿಂದೂಗಳು ಎಂದಿನಿಂದ ಈ ತೀರ್ಮಾನ ಕೈಗೊಂಡರು? ಅಸ್ಪೃಶ್ಯರು ಯಾವ ಕಾಲದಿಂದ ಗೋಮಾಂಸ ಭಕ್ಷಿಸುತ್ತಿದ್ದರು? ಎಲ್ಲಾ ಹಿಂದೂಗಳು ಗೋಮಾಂಸ ಭಕ್ಷಣೆಯನ್ನು ತ್ಯಜಿಸಿದಾಗ ಅಸ್ಪೃಶ್ಯರಾದವರು ಮಾತ್ರ ಗೋಮಾಂಸ ಭಕ್ಷಣೆಯನ್ನು ಏಕೆ ತ್ಯಜಿಸಲಿಲ್ಲ? ಅಸ್ಪೃಶ್ಯರು ಮೂಲದಿಂದಲೂ ಅಸ್ಪೃಶ್ಯರಾಗಿಯೇ ಇದ್ದರೆ? ಒಂದು ಕಾಲದಲ್ಲಿ ಎಲ್ಲರೂ ಗೋಮಾಂಸ ಭಕ್ಷಿಸುತ್ತಿದ್ದಾಗ, ಅಸ್ಪೃಶ್ಯರು ಸಹ ಸ್ಪೃಶ್ಯರಾಗಿದ್ದರು ಎಂದರೆ ಮುಂದಿನ ದಿನಗಳಲ್ಲಿ ಅವರು ಅಸ್ಪೃಶ್ಯರಾದ ಕಾರಣಗಳಾದರೂ ಏನು? ಈ ಪ್ರಶ್ನೆಗಳಿಗೆಲ್ಲ ಉತ್ತರಗಳನ್ನು ಮುಂದಿನ ಅಧ್ಯಾಯಗಳಲ್ಲಿ ಸಾಕ್ಷ್ಯಾಧಾರಗಳ ಸಮೇತ ವಿವರಿಸಲಾಗಿದೆ.

## ಗೋಮಾಂಸ ಭಕ್ಷಿಸುವವರು ಮಾತ್ರ ಅಸ್ಪೃಶ್ಯರಾಗಿದ್ದು

ಒಂದು ಕಾಲದಲ್ಲಿ ಎಲ್ಲರೂ ಗೋಮಾಂಸ ಭಕ್ಷಣೆ ಮಾಡುತ್ತಿದ್ದವರೇ. ಅನಂತರ ಬ್ರಾಹ್ಮಣರು ಗೋಮಾಂಸ ಭಕ್ಷಣೆಯನ್ನು ನಿಲ್ಲಿಸಿದ ಕಾರಣ ಇನ್ನಿತರ ಹಿಂದೂಗಳೂ ಅವರನ್ನು ಅನುಕರಿಸಿದರು. ಆದರೆ ಕೆಲವು ಛಿದ್ರವಾದ ಬುಡಕಟ್ಟು ಸಮಾಜಗಳು ಮಾತ್ರ ಗೋಮಾಂಸ ಭಕ್ಷಣೆಯನ್ನು ಮುಂದುವರಿಸಿದಾಗ ಸಮಾಜದಲ್ಲಿ ಎರಡು ರೀತಿಯ ಗುಂಪುಗಳು ಹುಟ್ಟಿಕೊಂಡವು. ಹಿಂದೂ ಸಮಾಜದಲ್ಲಿ ಇದು ಹಿಂದೆಂದಿಗಿಂತ ಎದ್ದು ಕಾಣಿಸುವಂತಹ ಬಿರುಕಾಗಿ ಕಾಣಿಸಿಕೊಂಡಿತು. ಬ್ರಾಹ್ಮಣರು, ಮತ್ತಿತರ ಹಿಂದೂಗಳು

ಬೌದ್ಧರನ್ನು, ಬೌದ್ಧ ಧರ್ಮವನ್ನು ಹೀಯಾಳಿಸುವ ಅಥವಾ ಸೋಲಿಸುವ ಕಾರಣದಿಂದ ಗೋಪೂಜೆ ಮಾಡುತ್ತ ಗೋಹತ್ಯೆಯನ್ನು ಸಮಾಜದ ಒಂದು ದೊಡ್ಡ ಅನಿಷ್ಟ ಗಂಡಾಂತರ ಎನ್ನುವಂತೆ ನೋಡತೊಡಗಿದರು. ಇದೇ ಸಮಯದಲ್ಲಿ ಸಮಾಜದ ಕೆಲವು ಗುಂಪುಗಳು ಗೋಮಾಂಸವನ್ನು ಭಕ್ಷಿಸುವುದನ್ನು ಮುಂದುವರಿಸಿದ ಕಾರಣ ಅದು ಅಸ್ಪೃಶ್ಯತೆಯ ಹುಟ್ಟಿಗೆ ಕಾರಣವಾಗುವುದರ ಜೊತೆಗೆ ಸಮಾಜವನ್ನು ಎರಡು ಗುಂಪುಗಳಾಗಿ ಪ್ರತ್ಯೇಕಿಸಿತು. ಪ್ರಪಂಚದ ಎಷ್ಟೋ ಪ್ರದೇಶಗಳಲ್ಲಿ ಹಲವು ಗುಂಪುಗಳ ನಡುವೆ ಹಲವು ರೀತಿಯ ಆಹಾರ ಪದ್ಧತಿಗಳಿದ್ದರೂ ಅವು ಯಾವುವೂ ಜನರ ಮಧ್ಯೆ ಈ ರೀತಿಯ ಒಡಕನ್ನು ಮೂಡಿಸಲಿಲ್ಲ. ಆದರೆ ಹಿಂದೂ ಸಮಾಜದಲ್ಲಿ ಇದು ಅಜಗಜಾಂತರವಾದ ಸಾಮಾಜಿಕ ವ್ಯತ್ಯಾಸವನ್ನೇ ಸೃಷ್ಟಿಮಾಡಿತು.

ಇಂತಹ ಪರಿಸ್ಥಿತಿ ಭಾರತದಲ್ಲಿ ಮಾತ್ರ ಏಕೆ ಸೃಷ್ಟಿಯಾಯಿತು? ಗೋಮಾಂಸ ಭಕ್ಷಣೆ ಒಂದು ಗುಂಪಿನ ಐಚ್ಛಿಕ ವಿಷಯವಾಗದೆ ಅದು ಇಡೀ ಹಿಂದೂ ಧರ್ಮದ ಪದ್ಧತಿಯಾಗಿ ಹೇಗೆ ಬೆಳೆದುನಿಂತಿತು ಎನ್ನುವುದು ಸೋಜಿಗ ಹುಟ್ಟಿಸುವಂತಹ ವಿಷಯವಾಗಿದೆ. ಮೂಲವಾಗಿ ಬ್ರಾಹ್ಮಣರು ಗೋಹತ್ಯೆ ಮಹಾಪಾಪ ಎಂದು ಗೋಪೂಜೆ ಮಾಡತೊಡಗಿದ್ದೇ ಕಾರಣವಾಗಿ ಹಿಂದೂ ಸಮಾಜ ಎರಡು ಭಾಗಗಳಾಗಿ ಇಬ್ಭಾಗಗೊಂಡಿತು. ಗೋಮಾಂಸ ತಿನ್ನುವವರು ಸಮಾಜದಲ್ಲಿ ಯಾವುದೋ ಮಹಾಪಾಪ ಮಾಡಿದವರಂತೆ ತಲೆತಗ್ಗಿಸುವಂತಹ ಪರಿಸ್ಥಿತಿ ಉಂಟಾಗಿ ಅಸ್ಪೃಶ್ಯರೆನ್ನುವ ಕಳಂಕವನ್ನು ಹೊತ್ತುಕೊಳ್ಳುವಂತಾಯಿತು.

ಯಾವುದೇ ಧರ್ಮ ಒಗ್ಗಟ್ಟಾಗಿ ಮುಂದುವರಿಯಬೇಕೆಂದರೆ ಆ ಧರ್ಮದ ಜನರು ಅದು ಸತ್ಯ ಸಂಗತಿಯಾಗಲಿ, ಶುದ್ಧ ಸುಳ್ಳಾಗಲಿ, ಮೂಢನಂಬಿಕೆಯ ವಿಷಯವಾಗಲಿ ಕಣ್ಣುಮುಚ್ಚಿ ಒಪ್ಪಿಕೊಳ್ಳಲೇಬೇಕು. ಪ್ರಶ್ನಿಸದೇ ಯಾವುದನ್ನೂ ನಂಬಬಾರದು ಎಂದು ಸಾಕ್ರಟೀಸ್ ಹೇಳಿದಾಗ ಧರ್ಮಾಂಧ ಜನರು ಅವನಿಗೆ ವಿಷ ಕೊಟ್ಟು ಸಾಯಿಸಿದರು. ಅದೇ ರೀತಿಯಲ್ಲಿ ಎಲ್ಲಾ ಧರ್ಮದ ಜನರು ಇಂದಿಗೂ ಹಿಂದಿನ ಮೂಢನಂಬಿಕೆಗಳನ್ನೇ ಮುಂದುವರಿಸಿಕೊಂಡು ಬರುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಮುಖ್ಯವಾಗಿ ಯಾವುದೇ ಒಂದು ರೀತಿಯ ಧರ್ಮಾಂಧತೆ ಉಳಿದುಕೊಳ್ಳಬೇಕಾದರೆ ಆ ಧರ್ಮವನ್ನು ಪಾಲಿಸುವ ಜನರ ಮಧ್ಯೆ ಎರಡು ರೀತಿಯ ನಂಬಿಕೆಗಳು ಇರಲೇಬೇಕು. ಒಂದು, ಧರ್ಮವನ್ನು ಪವಿತ್ರ ಎಂದು ಎಲ್ಲರೂ ಒಟ್ಟಾಗಿ ನಂಬಬೇಕು. ಎರಡು, ಸಮಾಜಗಳು ಒಟ್ಟುಗೂಡಿರುವ ವಿಷಯಗಳ ಆಧಾರದಿಂದ ಧರ್ಮ ಸೃಷ್ಟಿಯಾಗಿ ಅದರಲ್ಲಿ ಪವಿತ್ರ ಮತ್ತು ಅಪವಿತ್ರ ಎಂಬ ಕಲ್ಪನೆಗಳು ರೂಪುಗೊಂಡಿರಬೇಕು. ಯಾವುದೇ ಒಂದು ಗುಂಪು ಆ ಧರ್ಮದ ವಿರುದ್ಧವಾಗಿ ನಡೆದುಕೊಂಡರೆ ಆ ಗುಂಪನ್ನು ಸಮಾಜದಿಂದ ಹೊರಕ್ಕೆ ಹಾಕಲಾಗುತ್ತದೆ. ಅವರನ್ನು ಅಧರ್ಮಿಗಳೆಂದು ಸಾರಲೂಬಹುದು. ಒಂದು ಗುಂಪು ಗೋಹತ್ಯೆ ಮಹಾಪಾಪ, ಗೋಮಾಂಸ ಭಕ್ಷಣೆ ಇನ್ನೂ ಮಹಾಪಾಪ ಎಂದು ಸಾರಿದ ಸಮಾಜದ ಮುಂದೆಯೇ ಇನ್ನೊಂದು ಗುಂಪು ಗೋಮಾಂಸ ಭಕ್ಷಿಸುವವರನ್ನು ಹೇಗೆ ತಾನೇ ನೋಡಿಕೊಂಡು ಸುಮ್ಮನಿರಲು ಸಾಧ್ಯ? ಹಾಗೆ ಗೋಮಾಂಸ ಭಕ್ಷಿಸುತ್ತಿದ್ದವರನ್ನು ಸಹಜವಾಗಿಯೇ ಸಮಾಜದಲ್ಲಿ ಕೊಳಕರು ಹಾಗೂ ಅಸ್ಪೃಶ್ಯರು ಎಂದು ದೂರ ಸರಿಸಿರಬೇಕು.

ಹಿಂದೂ ಧರ್ಮ ದೇವರು ಮತ್ತು ದೇವ್ವಗಳನ್ನೇ ಅಲ್ಲದೆ ಎಷ್ಟೋ ವಸ್ತುಗಳನ್ನು ಮತ್ತು ವಿಷಯಗಳನ್ನು ಪವಿತ್ರ ಎಂದು ಸಾರಿದೆ. ಕಲ್ಲು–ಮಣ್ಣು, ಮರ–ಗಿಡ, ನದಿ–ಸಮುದ್ರ, ಪ್ರಾಣಿ–ಪಕ್ಷಿ, ಮನೆ–ಮಠ ಹೀಗೆ ಎಲ್ಲವನ್ನೂ ಪವಿತ್ರವೆಂದೇ ಬೋಧಿಸಿದೆ. ಪ್ರೊ. ಡರ್ಕ್‌ಹೈಮ್ ಹೇಳುವಂತೆ ಮನುಷ್ಯ ತನಗೆ ಇಷ್ಟವಾದುದನ್ನು ಅಪ್ಪಿಕೊಂಡು ಲೀನವಾಗಿಬಿಡುತ್ತಾನೆ; ಅದು ಏನೇ ಆಗಿರಬಹುದು. ಇಷ್ಟವಿಲ್ಲದಿರುವುದನ್ನು ದೂರ ಸರಿಸಿ ಅದನ್ನು ಅಪವಿತ್ರವೆಂದು ಬಹಿಷ್ಕರಿಸಿಬಿಡುತ್ತಾನೆ. ಗೋಮಾಂಸ ಭಕ್ಷಿಸುವವರನ್ನು ಹಿಂದೂ ಧರ್ಮ ಹೀಗೆಯೇ ನಡೆಸಿಕೊಂಡಿತು. ಮನುಷ್ಯ ಮೊದಲಿಗೆ ನಿಸರ್ಗವನ್ನು ಪೂಜಿಸಲು ಪ್ರಾರಂಭಿಸಿದ, ಅದು ಸಹಜವೂ ಕೂಡ. ಆದರೆ ಇನ್ನೊಬ್ಬ ಮನುಷ್ಯನನ್ನು ಹೀನವಾಗಿ ತುಚ್ಛ ಎಂದು ದೂರ ಸರಿಸಿದ್ದು ಮಾತ್ರ ಅನ್ಯಾಯ.

ಸ್ಪರ್ಶ ಅಥವಾ ಸಂಪರ್ಕ ಹಲವು ರೀತಿಯದ್ದಾಗಿರುತ್ತದೆ. ಬಹಿಷ್ಕೃತವಾದ ವಸ್ತುಗಳನ್ನು ಮುಟ್ಟಬಾರದು. ಅಂತಹ ವಸ್ತುಗಳನ್ನು ವೀಕ್ಷಿಸುವುದು ಕೂಡ ಸ್ಪರ್ಶಿಸಿದಂತೆಯೇ. ಆದುದರಿಂದಲೇ ಕೆಲವು ವಸ್ತುಗಳನ್ನು ಅಪವಿತ್ರವೆಂದು ಘೋಷಿಸಿ ಆ ವಸ್ತುಗಳ ವೀಕ್ಷಣೆಯನ್ನು ನಿಷೇಧಿಸಲಾಗಿದೆ. ಇನ್ನೂ ಕೆಲವು ವಸ್ತುಗಳನ್ನು ಮಹಿಳೆಯರು ನೋಡಬಾರದೆಂದು ಅವರಿಂದ ದೂರವಿಡಲಾಗಿದೆ. ಮನುಷ್ಯನು ಮಾತನಾಡುವುದರಿಂದ (ಉಸಿರಾಟ) ಎದುರಿಗಿರುವವರನ್ನು ಸ್ಪರ್ಶಿಸಿದಂತಾಗುತ್ತದೆ. ಆದುದರಿಂದಲೇ ಕೆಲವು ಪವಿತ್ರವಾದ ಹೆಸರುಗಳನ್ನು ಉಚ್ಚರಿಸಬಾರದೆಂದು ನಿಷೇಧ ಹೇರಿರುವುದು.

ವೇದಗಳನ್ನು ಬ್ರಾಹ್ಮಣರು ಮಾತ್ರ ಓದಬೇಕು, ಶೂದ್ರರು ಓದಬಾರದೆಂದು ಆಜ್ಞೆ ಮಾಡಿರುವುದು ಇದೇ ಕಾರಣಕ್ಕಾಗಿಯೇ. ಆಹಾರವನ್ನು ಸೇವಿಸಲೇಬೇಕಾದ್ದರಿಂದ ಅದು ಒಂದು ರೀತಿಯಲ್ಲಿ ವಿಧಿಯಿಲ್ಲದ ಕೆಲಸವಾಗಿ ಪರಿಣಮಿಸಿದೆ. ಪವಿತ್ರವಾದ, ಅಪವಿತ್ರವಾದ ಪ್ರಾಣಿಗಳು ಮತ್ತು ಸಸ್ಯಾಹಾರದ ಬಗ್ಗೆ ಪವಿತ್ರ, ಅಪವಿತ್ರ ಎನ್ನುವ ಹಲವು ವಿಧಿ ವಿಧಾನಗಳು ಹುಟ್ಟಿಕೊಂಡಿರುವುದು ಇದೇ ಹಿನ್ನೆಲೆಯಿಂದಲೇ. ಆದ್ದರಿಂದ ಯಾವುದೇ ಪದ್ಧತಿಯನ್ನು ಅಥವಾ ನಂಬಿಕೆಯನ್ನು ಪ್ರಶ್ನಿಸುವಂತಿಲ್ಲ. ಅವೆಲ್ಲವನ್ನು ವಿಶ್ಲೇಷಿಸುವಂತೆಯೂ ಇಲ್ಲ. ಯಾವುದನ್ನೂ ಪ್ರಶ್ನಿಸದೇ ಒಪ್ಪಿಕೊಳ್ಳುವುದೇ ಧರ್ಮದ ಮೊದಲ ನಿಯಮ. ಅಸ್ಪೃಶ್ಯತೆ ಕೂಡ ಅದೇ ರೀತಿಯದ್ದು, ಪ್ರಶ್ನಿಸುವ ವಿಷಯವಲ್ಲ. ಹಸು, ಹಿಂದೂಗಳ ಪವಿತ್ರವಾದ ಪ್ರಾಣಿ. ಅಂತಹ ಪವಿತ್ರವಾದ ಹಸುವಿನ ಮಾಂಸವನ್ನು ತಿನ್ನುವುದೆಂದರೆ ಅವರು ಅಪವಿತ್ರರು, ಕೊಳಕರು ಮತ್ತು ಸ್ಪರ್ಶಕ್ಕೆ ಯೋಗ್ಯರಲ್ಲದವರು. ಹಿಂದೂ ಸಮಾಜ ಅವರನ್ನು ಸಾಮಾಜಿಕವಾಗಿ ಅಸ್ಪೃಶ್ಯರೆಂದು ಹೆಸರಿಸಿ ದೂರ ಸರಿಸಿತು.

ಹಸು ಬದುಕಿದ್ದರೂ ಪವಿತ್ರವೇ, ಸತ್ತರೂ ಪವಿತ್ರವೇ. ಗೋಮಾಂಸ ಭಕ್ಷಣೆಯನ್ನು ಮುಂದುವರಿಸಿದ ಛಿದ್ರ ಬುಡಕಟ್ಟು ಸಮಾಜಗಳು ಹಿಂದೂ ಸಮಾಜದ ಮಧ್ಯೆ ಅಸ್ಪೃಶ್ಯ ಸಮಾಜಗಳಾದವು. ಮೇಲಿನ ವಿಶ್ಲೇಷಣೆಯ ಆಧಾರದ ಮೇಲೆ ಮುಖ್ಯವಾಗಿ ಎರಡು ಪ್ರಶ್ನೆಗಳು ಏಳುತ್ತವೆ. ಛಿದ್ರವಾದ ಬುಡಕಟ್ಟು ಸಮಾಜಗಳು ಮಾತ್ರ ಗೋಮಾಂಸ ಭಕ್ಷಣೆಯನ್ನು ಮುಂದುವರಿಸಿದವು ಎನ್ನುವುದಕ್ಕೆ ಯಾವ ಆಧಾರವಿದೆ? ಬ್ರಾಹ್ಮಣರು ಮತ್ತು ಇತರ ಹಿಂದೂಗಳಂತೆ ಈ ಛಿದ್ರ ಬುಡಕಟ್ಟು ಜನಾಂಗಗಳು ಗೋಮಾಂಸ ತಿನ್ನುವುದನ್ನು ಯಾಕಾದರೂ ಬಿಡಲಿಲ್ಲ?

ಮೊದಲನೇ ಪ್ರಶ್ನೆ ಮುಖ್ಯವಾದುದಲ್ಲದೇ ನಿಷ್ಕರ್ಷವಾದುದೂ ಹೌದು. ಛಿದ್ರ ಬುಡಕಟ್ಟು

ಜನಾಂಗಗಳು ಮೊದಲಿನಿಂದಲೂ ಗೋಮಾಂಸವನ್ನು ಭಕ್ಷಿಸುತ್ತಿದ್ದರಾದರೆ ಮೇಲಿನ ವಿಶ್ಲೇಷಣೆಗೆ ಅರ್ಥವೇ ಇಲ್ಲ. ಮೊದಲಿನಿಂದಲೂ ಅವರು ಗೋಮಾಂಸವನ್ನು ತಿನ್ನುತ್ತಿದ್ದು ಅಸ್ಪೃಶ್ಯರು ಎಂದು ಪರಿಗಣಿತವಾಗಿದ್ದರೆ ಆ ಕೆಲಸವನ್ನು ಎಲ್ಲರೂ ತ್ಯಜಿಸಿದಾಗಲೂ ಅಸ್ಪೃಶ್ಯರು ಎಂದು ಮುಂದುವರಿಸಿದ್ದಕ್ಕಾಗಿ ಅವರನ್ನು ಅಸ್ಪೃಶ್ಯರೆಂದು ಕರೆದಿರಬಹುದು. ಎರಡನೇ ಪ್ರಶ್ನೆ ನಿಷ್ಕರ್ಷ ಅಲ್ಲದಿದ್ದರೂ ಸರಿ ಇರಲೂಬಹುದು. ಬ್ರಾಹ್ಮಣರು ಗೋಮಾಂಸದ ಭಕ್ಷಣೆಯನ್ನು ನಿಷೇಧಿಸಿ ಇನ್ನಿತರ ಹಿಂದೂ ವಿಭಾಗಗಳು ಅವರನ್ನು ಅನುಕರಿಸಿದಾಗ ಛಿದ್ರ ಬುಡಕಟ್ಟು ಜನಾಂಗಗಳು ಮಾತ್ರ ಗೋಮಾಂಸ ತಿನ್ನುವುದನ್ನು ಮುಂದುವರಿಸಿದ್ದರೆ ಅವರನ್ನು ಅಸ್ಪೃಶ್ಯರೆಂದು ಕರೆಯಲು ಅವಕಾಶಗಳಿವೆ. ಏಕೆಂದರೆ ಬ್ರಾಹ್ಮಣರು ಗೋಹತ್ಯೆಯನ್ನು ಮಹಾಪಾಪವೆಂದು ಸಾರಿ, ಗೋಪೂಜೆ ಮಾಡಲು ಪ್ರಾರಂಭಿಸಿದಾಗ ಇನ್ನಿತರ ಹಿಂದೂ ವಿಭಾಗಗಳು ಅವರನ್ನು ಅನುಸರಿಸಿ, ಛಿದ್ರವಾದ ಬುಡಕಟ್ಟು ಜನಾಂಗಗಳು ಮಾತ್ರ ಗೋಮಾಂಸ ತಿನ್ನುವುದನ್ನು ಮುಂದುವರಿಸಿ ಅವರನ್ನು ಅಸ್ಪೃಶ್ಯರೆಂದು ದೂರಸರಿಸಿರಬೇಕು. ಒಂದು ವೇಳೆ ಬ್ರಾಹ್ಮಣರು ಮತ್ತು ಇನ್ನಿತರ ಹಿಂದೂಗಳ ಜೊತೆಯೇ ಛಿದ್ರ ಬುಡಕಟ್ಟು ಸಮಾಜವೂ ಗೋಮಾಂಸ ತಿನ್ನುವುದನ್ನು ಬಿಟ್ಟಿದ್ದರೆ ಅಸ್ಪೃಶ್ಯತೆ ಹಿಂದೂ ಸಮಾಜದ ಮಧ್ಯದಲ್ಲಿ ಪ್ರಸ್ತುತ ಇರುತ್ತಿರಲಿಲ್ಲವೇನೋ?

ಒಂದು ಕಾಲದಲ್ಲಿ ನೆಲೆಯೂರಿದ ಬುಡಕಟ್ಟು ಮತ್ತು ಛಿದ್ರ ಬುಡಕಟ್ಟು ಸಮಾಜಗಳೆರಡೂ ಗೋಮಾಂಸವನ್ನು ತಿನ್ನುತ್ತಿದ್ದು, ನೆಲೆಯೂರಿದ ಬುಡಕಟ್ಟು ಸಮಾಜ ತಾಜಾ ಗೋಮಾಂಸವನ್ನು, ಮತ್ತು ಛಿದ್ರ ಬುಡಕಟ್ಟು ಸಮಾಜ ಸತ್ತ ಗೋಮಾಂಸವನ್ನು ತಿನ್ನಲು ಯಾವ ಕಾಲದಿಂದ ಪ್ರಾರಂಭಿಸಿದವು ಎನ್ನುವುದು ಬಿಡಿಸಲಾಗದ ಪ್ರಶ್ನೆಯಾಗಿದೆ. ನೆಲೆಯೂರಿದ ಬುಡಕಟ್ಟು ಸಮಾಜ ಸತ್ತ ಗೋಮಾಂಸ ತಿನ್ನುತ್ತಿತ್ತು ಅಥವಾ ತಿನ್ನುತ್ತಿರಲಿಲ್ಲ ಎನ್ನುವ ಆಧಾರಗಳು ನಮಗೆ ದೊರೆತಿಲ್ಲವಾದರೂ, ಛಿದ್ರಬುಡಕಟ್ಟು ಸಮಾಜಗಳು ಮಾತ್ರ ಸತ್ತ ಗೋಮಾಂಸ ತಿನ್ನುತ್ತಿದ್ದ ಉಲ್ಲೇಖಗಳು ಹೇರಳವಾಗಿ ದೊರಕುತ್ತವೆ.

ಒಂದು ಕಾಲದಲ್ಲಿ ಮಹಾರಾಷ್ಟ್ರದ ಮಹಾರ್, ಕರ್ನಾಟಕದ ಹೊಲೆಯ-ಮಾದಿಗರು, ಆಂಧ್ರದ ಮಾಲ-ಮಾದಿಗರು, ತಮಿಳುನಾಡಿನ ಪರಯ-ಚಕ್ಕಲಿಯಾನ್ ಜನಾಂಗಗಳು ಹಳ್ಳಿಯ ಯಾವ ಹಿಂದೂವಿನ ಹಸು ಸತ್ತರೂ ಅದು ತಮ್ಮ ಹಕ್ಕೆಂದೇ ತಿಳಿದಿದ್ದರು. ಇದರಿಂದ ಹಿಂದೂಗಳು, ಸತ್ತ ಹಸುಗಳನ್ನು ತಿನ್ನುವುದಿಲ್ಲ ಎಂದು ತಿಳಿದುಬರುತ್ತದೆ. ಸತ್ತ ಹಸುವನ್ನು ಅಸ್ಪೃಶ್ಯರಿಗೆ ನೀಡಬೇಕಾದುದು ಅವರ ಧರ್ಮ. ಇದರಿಂದ ತಿಳಿದುಬರುವ ಇನ್ನೊಂದು ವಿಷಯವೆಂದರೆ ಸತ್ತ ಹಸುವನ್ನು ಅಸ್ಪೃಶ್ಯರು ತಿಂದರೆ ಬದುಕಿದ ಹಸುವನ್ನು ಕೊಂದು ಹಿಂದೂಗಳು ತಿನ್ನುತ್ತಿದ್ದುದಾಗಿ ತಿಳಿದುಬರುತ್ತದೆ. ಮೇಲೆ ಪ್ರಸ್ತಾಪಿಸಿರುವ ವಿಷಯ ಹಿಂದಿನ ಕಾಲದ ಪದ್ಧತಿಯೆ? ಈ ವಿಷಯವನ್ನು ದೇಶದ ಉದ್ದಗಲಕ್ಕೂ ಉದಾಹರಣೆಯಾಗಿ ತೆಗೆದುಕೊಳ್ಳಬಹುದೆ ಎನ್ನುವ ವಿಚಾರವನ್ನು ಕೂಲಂಕಷವಾಗಿ ವಿಶ್ಲೇಷಿಸಬಹುದಾಗಿದೆ.

ಬೀದರ್‌ನ ಮುಸ್ಲಿಂ ರಾಜ, ಮಹಾರಾಷ್ಟ್ರದ ಮಹಾರ್ ಜನಾಂಗಕ್ಕೆ ಹಿಂದೂಗಳ ವಿರುದ್ಧ 52 ಹಕ್ಕುಗಳನ್ನು ನೀಡಿದ ವಿಚಾರ ದಾಖಲಾಗಿದೆ. ಈ ಹಕ್ಕುಗಳಲ್ಲಿ ಹಿಂದೂಗಳ ಸತ್ತ ಹಸುಗಳು ಮಹಾರ್ ಜನಾಂಗಕ್ಕೆ ಸೇರಿರುವುದು ಒಂದು. ಬೀದರ್‌ನ ರಾಜನ ಈ

ನಿಯಮ ಅವನು ಸೃಷ್ಟಿಸಿದ್ದಲ್ಲ; ಅದು ಅವನಿಗಿಂತ ಮುಂಚೆ ಎಷ್ಟೋ ತಲೆಮಾರುಗಳಿಂದ ಬಂದ ಹಕ್ಕುಗಳನ್ನು ಮತ್ತೊಮ್ಮೆ ಮಹಾರ್ ಜನಾಂಗಕ್ಕೆ ಉಯಿಲು ರೂಪದಲ್ಲಿ ನೀಡಿದ್ದಾಗಿದೆ. ನೆಲೆಯೂರಿದ ಜನಾಂಗ ವ್ಯವಸಾಯ ಮಾಡುತ್ತ ನೂರಾರು ಸಾಕು ಪ್ರಾಣಿಗಳನ್ನು ಹೊಂದಿದ್ದ ಸುಧಾರಿಸಿದ ಜನಾಂಗವಾಗಿದ್ದು, ಅದು ಸತ್ತ ಪ್ರಾಣಿಗಳನ್ನು ತಿನ್ನುವಷ್ಟು ಹೀನ ಸ್ಥಿತಿಯಲ್ಲಿರಲಿಲ್ಲ. ಅದೇ ಛಿದ್ರ ಬುಡಕಟ್ಟು ಜನಾಂಗ ಹಳ್ಳಿಯ ಹೊರಗೆ ಕಾಯುವ ಕೆಲಸಕ್ಕಾಗಿ ಮತ್ತು ಇನ್ನಿತರ ಕೆಲಸಗಳಿಗಾಗಿ ನೇಮಕವಾಗಿದ್ದು ಕಾಯಿಲೆ ಬಂದು ಸತ್ತ ಹಸು ಮಾಂಸವನ್ನು ನೆಲೆಯೂರಿದ ಜನಾಂಗದಿಂದ ಪಡೆಯುತ್ತಿತ್ತು.

ಗುಪ್ತರ ಕಾಲದ ರಾಜರ ನಿಯಮದಂತೆ ಗೋಹತ್ಯೆ ಮಹಾಪಾಪವಾಗಿದ್ದರೂ ಅದು ಛಿದ್ರ ಬುಡಕಟ್ಟು ಸಮಾಜಕ್ಕೆ ಅನ್ವಯಿಸುತ್ತಿರಲಿಲ್ಲ. ಏಕೆಂದರೆ ಅವರು ಗೋಹತ್ಯೆ ಮಾಡುತ್ತಿರಲಿಲ್ಲ. ಸತ್ಯ ಹಸುಗಳ ಮಾಂಸವನ್ನು ಮಾತ್ರ ಭಕ್ಷಿಸುತ್ತಿದ್ದರು. ಆದುದರಿಂದ ಗುಪ್ತರ ನಿಯಮದ ಪ್ರಕಾರ ಸತ್ತ ಗೋಮಾಂಸ ತಿನ್ನುವುದು ಅಪರಾಧವಾಗಿರಲಿಲ್ಲ. ಹಾಗಾಗಿ ಸತ್ತ ಗೋಮಾಂಸ ಭಕ್ಷಣೆ ಎಂದಿನಂತೆ ಮುಂದುವರಿದಿತ್ತು. ಬ್ರಾಹ್ಮಣರ ಪ್ರಕಾರ ಗೋಹತ್ಯೆ ಮಹಾಪಾಪವಾದರೆ, ಬೌದ್ಧರ ಪ್ರಕಾರ ಪ್ರಾಣಿಹಿಂಸೆ ಅಪರಾಧ. ಆದರೆ ಸತ್ತ ಗೋಮಾಂಸ ಭಕ್ಷಣೆ ಈ ಎರಡೂ ಅಪರಾಧಗಳ ಒಳಗೆ ಬರದ ಕಾರಣ ಛಿದ್ರ ಬುಡಕಟ್ಟು ಜನಾಂಗಗಳು ಎರಡೂ ಧರ್ಮಗಳ ನಿಯಮಗಳ ಒಳಗೆ ಅಪರಾಧವಾಗದ ಕಾರಣ ಗೋಮಾಂಸ ಭಕ್ಷಣೆಯನ್ನು ಎಂದಿನಂತೆ ಮುಂದುವರಿಸಿತು. ಇನ್ನು ಉಳಿದುಕೊಳ್ಳುವ ಕೊನೆ ಪ್ರಶ್ನೆ ಎಂದರೆ ಬ್ರಾಹ್ಮಣರು ಮತ್ತಿತರ ಹಿಂದೂಗಳು ಗೋಮಾಂಸ ಭಕ್ಷಿಸುವುದನ್ನು ತ್ಯಜಿಸಿದಾಗ ಈ ಛಿದ್ರ ಬುಡಕಟ್ಟು ಜನಾಂಗ ಮಾತ್ರ ಗೋಮಾಂಸ ಭಕ್ಷಣೆಯನ್ನು ಏಕೆ ತ್ಯಜಿಸಲಿಲ್ಲ ಎನ್ನುವುದು.

ಗೋಮಾಂಸ ಭಕ್ಷಿಸದೆ ಬ್ರಾಹ್ಮಣರನ್ನು ಅನುಕರಿಸಿದ್ದರೆ ಛಿದ್ರ ಬುಡಕಟ್ಟು ಜನಾಂಗಗಳು ತೊಂದರೆಗೆ ಸಿಲುಕಿಕೊಳ್ಳುತ್ತಿದ್ದುವು. ಏಕೆಂದರೆ ಒಂದು ಕಾಲದಲ್ಲಿ ಸತ್ತ ಹಸುಗಳೇ ಅವರಿಗೆ ಮುಖ್ಯ ಆಹಾರವಾಗಿದ್ದರಿಂದ ಅವರು ಗೋಮಾಂಸ ಭಕ್ಷಣೆಯನ್ನು ತ್ಯಜಿಸಲಾರದೇ ಹೋದರು. ಸತ್ತ ಹಸುಗಳನ್ನು ಹೊತ್ತುಕೊಂಡು ಹೋಗುವುದೂ ಆ ಜನಾಂಗದ ಹಕ್ಕಾಗಿತ್ತು. ಹಾಗಾಗಿ ಅದು ಹಿಂದೂ ಸಮಾಜದಲ್ಲಿ ಎಂದೆಂದೂ ಅಸ್ಪೃಶ್ಯ ಸಮಾಜವಾಗಿ ಉಳಿದುಹೋಯಿತು.

## ಹಿಂದೂಗಳು ಗೋಮಾಂಸ ಭಕ್ಷಕರೆ

ಮನುಷ್ಯರು ನರಭಕ್ಷಕರಾಗಿದ್ದ ಕಾಲಘಟ್ಟ ದಾಟಿದರೆ, 'ವಾತಾಪಿ ಜೀರ್ಣೋಭವ' ಎಂಬ ಸಂದರ್ಭಗಳನ್ನು ಬಿಟ್ಟರೆ, ಮನುಷ್ಯರ ಆಹಾರ ಸಂಸ್ಕೃತಿಯ ಬಹುಮುಖ್ಯ ಭಾಗ ಪ್ರಾಣಿಗಳೇ ಆಗಿದ್ದವು. ಪ್ರಾಣಿಗಳ ಬೇಟೆಯೆ ಮನುಷ್ಯನ ಮೊದಲ ಉದ್ಯೋಗವಾಗಿ ಮನುಷ್ಯ ಕುಲ ಸಾಗಿಬಂದಿತು. ಕೃಷಿ ಚಟುವಟಿಕೆ, ಪಶುಪಾಲನೆಗಳಲ್ಲಿ ಸಾಕಿ ಸಲುಹುವುದು ಮುಂದುವರಿಯಿತು. ನಾಗರಿಕತೆ ಬೆಳೆದಂತೆ ಪ್ರಾಣಿಗಳಿಗೂ ಮೌಲ್ಯ ಮತ್ತು ಮಹತ್ವ ಪ್ರಾಪ್ತವಾಗುತ್ತಾಹೋಯಿತು. ದೇವರುಗಳ ಪೈಕಿ ಒಬ್ಬೊಬ್ಬರಿಗೆ ಒಂದೊಂದು ಪ್ರಾಣಿ ಇಷ್ಟವಾಗಿ ದೇವರುಗಳ ರಾಜ್ಯದಲ್ಲೂ ಅವು ಹಾಯಾಗಿ

ಓಡಾಡಿಕೊಂಡಿದ್ದವು. ಆಹಾರ ಸಂಸ್ಕೃತಿ ವೈವಿಧ್ಯಮಯವಾಗಿ ಬೆಳೆದಂತೆ ರುಚಿ-ಅಭಿರುಚಿಗಳೂ ಬೆಳೆದವು. ಬದುಕಿರುವಾಗ ಆಹಾರವನ್ನು ಪ್ರೀತಿಸುವುದಿರಲಿ, ಸತ್ತಮೇಲೂ ಚಕ್ರವರ್ತಿಗಳು ಹೊಟ್ಟೆ ತುಂಬಾ ಉಣ್ಣುತ್ತಿರಲಿ ಎಂದು ನೂರಾರು ಕೊಪ್ಪರಿಗೆ ಪ್ರಾಣಿ ಮಾಂಸದ ಆಹಾರವನ್ನು, ಅವುಗಳನ್ನು ಬಡಿಸಲು ಚೆಂದೊಳ್ಳಿ ಚಲುವೆಯರನ್ನೂ ಈಜಿಪ್ಟ್‌ನ ಪಿರಮಿಡ್‌ಗಳಲ್ಲಿ ಹೂತಿಟ್ಟರು. ಸತ್ತವರಿಗೆ ವರ್ಷಕ್ಕೊಮ್ಮೆ ಧನ್ಯವಾದ ಹೇಳುತ್ತ, ಇಲ್ಲವೇ ಶ್ರಾದ್ಧ ಮಾಡುತ್ತ, ಅವರಿಗೆ ಬೇಕಾದ ಆಹಾರವನ್ನು ಶ್ರದ್ಧೆಯಿಂದ ಮಾಡಿ ತಿನ್ನುವ ಜನರು ಪ್ರಪಂಚದಲ್ಲಿ ಎಲ್ಲೆಲ್ಲೂ ಇದ್ದಾರೆ.

ಋಗ್ವೇದದಲ್ಲಿ ಗೋವುಗಳನ್ನು ಕುರಿತ ಉಲ್ಲೇಖ 700 ಬಾರಿ ಇರುವುದು, ಆ ಸಮಾಜದಲ್ಲಿ ಅವುಗಳಿಗಿದ್ದ ಮಹತ್ವವನ್ನು ಎತ್ತಿಹೇಳುತ್ತದೆ. ವೇದಗಳಲ್ಲಿ ಹೇಳುವಂತೆ ಇಂದ್ರ, ಅಗ್ನಿ ಮುಂತಾದವರಿಗೆ ಗೋವಿನ ಮಾಂಸ ಬಹಳ ಪ್ರಿಯವಾದ ಭಕ್ಷ್ಯ. ಮುಂದೆ ಮನು ಹೇಳುವ 'ಪಂಚ ಮಹಾಪಾತಕ'ಗಳ ಪಟ್ಟಿಯಲ್ಲಿ ಗೋವಧೆ-ಗೋಮಾಂಸ ಸೇವನೆ ಎರಡೂ ಸೇರಿಲ್ಲ. ವಸಿಷ್ಠ ಸೂತ್ರದ ಪ್ರಕಾರ ಯಜ್ಞದ ನಂತರ 'ಗೋಮಾಂಸ ಸೇವನೆ ಮಾಡದಿದ್ದರೆ ನರಕ ಪ್ರಾಪ್ತಿಯಾಗುತ್ತದೆ'. ಯಾಜ್ಞವಲ್ಕ್ಯ, ಕಲ್ಪ, ಗೃಹ್ಯಸೂತ್ರಗಳಲ್ಲಿ ಬ್ರಾಹ್ಮಣರೂ ಸೇರಿದಂತೆ ಅಂದಿನ ಜನರ ಮಾಂಸಾಹಾರ ಕುರಿತು ಹೇಳಲಾಗಿದೆ. ರಾಮಾಯಣ, ಮಹಾಭಾರತಗಳಲ್ಲಿ ಅಶ್ವಮೇಧದಲ್ಲಿ ಪ್ರಾಣಿಬಲಿ, ಗೋಮಾಂಸ ಕುರಿತ ವರ್ಣನೆಗಳಿವೆ. ರಂತಿದೇವ ಮಹಾರಾಜನ ಪಾಕಶಾಲೆಯಲ್ಲಿ ಪ್ರತಿನಿತ್ಯ ಎಷ್ಟು ಪ್ರಾಣಿಗಳನ್ನು ಕಡಿದು ಅಡಿಗೆ ಮಾಡಲಾಗುತ್ತಿತ್ತು ಎಂಬ ವೈಭವದ ಚಿತ್ರಣವಿದೆ. ಅತಿಥಿಗಳು ಬಂದರೆ ಗೋವಿನ ಮಾಂಸದ ಅಡಿಗೆ ತಯಾರಾಗುತ್ತಿತ್ತು. ಚರಕ, ಸುಶ್ರುತ, ವಾಗ್ಭಟರೆಲ್ಲ ಆರೋಗ್ಯ ರಕ್ಷಣೆಗೆ ದನದ ಮಾಂಸದ ಅಗತ್ಯವಿದೆ ಎಂದು ಹೇಳಿದ್ದಾರೆ.

ಪ್ರಾಚೀನ ಭಾರತದ ಬದುಕಿನ ಅಂಗವಾಗಿದ್ದ ಪ್ರಾಣಿಬಲಿ-ಮಾಂಸಾಹಾರಗಳನ್ನು ತಮ್ಮದೇ ವಿಶಿಷ್ಟ ಕಾರಣಗಳಿಗೆ ವಿರೋಧಿಸುವುದು ಬೌದ್ಧ ಮತ್ತು ಜೈನ ಧರ್ಮಗಳಿಗೆ ಅನಿವಾರ್ಯವಾಯಿತು. ಆದರೆ ಬುದ್ಧನ ಪರಿನಿರ್ವಾಣ ಕುರಿತು ಬುದ್ಧ ಸತ್ತದ್ದು ಹಂದಿ ಮಾಂಸದ ಸೇವನೆಯಿಂದಾದ ಅಸ್ವಸ್ಥದಿಂದಲ್ಲ, ಅದು ಚೆನ್ನಾಗಿಯೇ ಇತ್ತು, ಬುದ್ಧನು ಸತ್ತಿದ್ದು ನಿಶ್ಶಕ್ತಿಯಿಂದ' ಎಂದು ಮಿಲಿಂದಪನ್ಹ ಸಮಜಾಯಿಸಿ ಕೊಡುವುದು ಬುದ್ಧನ ಕಾಲದ ಆಹಾರ ಸಂಸ್ಕೃತಿಯನ್ನು ಕುರಿತು ಹೇಳುತ್ತದೆ. ಅಗಣಿತ ಪ್ರಾಣಹರಣದ ಯುದ್ಧಗಳನ್ನು ಮಾಡುತ್ತಿದ್ದ ಸಾಮ್ರಾಟ್ ಅಶೋಕ ಪ್ರಾಣಿವಧೆ ನಿಷೇಧ ಚಿಂತಿಸಲು ಬಲಿಷ್ಠವಾದ ರಾಜಕೀಯ-ಧಾರ್ಮಿಕ ಕಾರಣಗಳು ಇದ್ದಿರಲೇಬೇಕು. (ಡಾ. ಆರ್. ಪೂರ್ಣಿಮಾ, 31.3.15, ಪ್ರಜಾವಾಣಿ).

ಮನುಷ್ಯ ವಾನರನಿಂದ ಮಾನವನಾಗಿ, ಕಾಡಿನಿಂದ ಗುಹೆಗೆ, ಗುಹೆಯಿಂದ ಬಯಲಿಗೆ ಬಂದ ನಂತರವೂ ಎಷ್ಟೋ ಸಾವಿರ ವರ್ಷಗಳ ಕಾಲ ಎಲ್ಲ ಪ್ರಾಣಿಗಳನ್ನೂ ಬೇಟೆಯಾಡುತ್ತಾ ಹಸಿಮಾಂಸವನ್ನೇ ತಿನ್ನುತ್ತಾ ಪ್ರಾಣಿಗಳಂತೆ ಜೀವಿಸಿದ್ದನು. ಹಿಂದೂಗಳು ಒಂದು ಕಾಲದಲ್ಲಿ ಹೇರಳವಾಗಿ ಗೋಮಾಂಸವನ್ನು ಭಕ್ಷಿಸುತ್ತಿದ್ದರು.

ಋಗ್ವೇದದ ಅಧ್ಯಾಯ Xರ 86.14ನೇ ಶ್ಲೋಕದಲ್ಲಿ ಇಂದ್ರನು ನನ್ನೊಬ್ಬನಿಗಾಗಿ ಅವರು ಹದಿನೈದಕ್ಕಿಂತ ಹೆಚ್ಚು ಎತ್ತುಗಳನ್ನು ಕಡಿದು ಅಡಿಗೆ ಮಾಡಿದ್ದಾರೆ ಎಂದು ಹೇಳುತ್ತಾನೆ. ಅದೇ ಅಧ್ಯಾಯದ 91.14ನೇ ಶ್ಲೋಕದಲ್ಲಿ ಅಗ್ನಿಗಾಗಿ ಕುದುರೆಗಳನ್ನು,

ಎತ್ತು, ಗೊಡ್ಡು ಹಸುಗಳನ್ನು ಮತ್ತು ಟಗರುಗಳನ್ನು ಆಹುತಿ ನೀಡಿರುವುದಾಗಿ ಉಲ್ಲೇಖಿಸಲಾಗಿದೆ. ಅದೇ ಅಧ್ಯಾಯದ 72.6ನೇ ಶ್ಲೋಕದಲ್ಲಿ ಹಸುಗಳನ್ನು ಕತ್ತಿ ಅಥವಾ ಕೊಡಲಿಯಿಂದ ಕಡಿದು ಸಾಯಿಸುವ ವಿಧಾನಗಳನ್ನು ವಿವರಿಸಲಾಗಿದೆ.

ತೈತ್ತಿರೀಯ ಬ್ರಾಹ್ಮಣದಲ್ಲಿ ಯಾವ ಯಾವ ಎತ್ತು, ಹಸುಗಳನ್ನು ಯಾವ ಯಾವ ದೇವರುಗಳಿಗೆ ಆಹುತಿ ನೀಡಬೇಕೆಂಬುದನ್ನು ವಿವರಿಸಲಾಗಿದೆ. ಗಿಡ್ಡನೆ ಎತ್ತನ್ನು ವಿಷ್ಣುವಿಗೆ, ಬಾಗಿರುವ ಕೊಂಬುಗಳಿಗೆ ಮತ್ತು ನೆತ್ತಿಯಲ್ಲಿ ಆಕ್ರೋಶವಿರುವ ಎತ್ತನ್ನು ಇಂದ್ರನಿಗೆ, ಕಪ್ಪು ಹಸುವನ್ನು ಪೂಷನ್‌ಗೆ, ಕೆಂಪು ಹಸುವನ್ನು ರುದ್ರನಿಗೆ ಇತ್ಯಾದಿ. ತೈತ್ತಿರೀಯ ಬ್ರಾಹ್ಮಣದಲ್ಲಿ ಇನ್ನೊಂದು ಬಲಿದಾನವಾದ ಪಂಚ ಶಾರದೀಯ ಸೇವಾಯಾಗದ ಬಗ್ಗೆ ವಿವರಿಸಲಾಗಿದೆ. ಈ ಬಲಿದಾನದಲ್ಲಿ ಐದು ವರ್ಷಗಳ ಹದಿನೇಳು ಹಿಣಿಲಿಲ್ಲದ (ಡುಬ್ಬ) ಗಿಡ್ಡನೆ ಎತ್ತುಗಳನ್ನು ಮತ್ತು ಮೂರು ವರ್ಷಗಳ ಒಳಗಿನ ಪಡ್ಡೆ ಹಸುಗಳನ್ನು ಆಹುತಿ ನೀಡುವುದಾಗಿ ತಿಳಿಸಲಾಗಿದೆ.

ಆಪಸ್ತಂಬ ಧರ್ಮಸೂತ್ರದ ಸೂತ್ರ 15. 14–19ರಂತೆ ಹಸು ಮತ್ತು ಎತ್ತು ಪವಿತ್ರ ಆದುದರಿಂದ ಅವುಗಳನ್ನು ತಿನ್ನಬೇಕು ಎಂದು ತಿಳಿಸಲಾಗಿದೆ. ಗೃಹ್ಯಸೂತ್ರದಲ್ಲಿ ಮಧುಪರ್ಕದ ಬಗ್ಗೆ ಹೇರಳ ವಿವರಣೆಯನ್ನು ನೀಡಲಾಗಿದೆ. ಆರ್ಯರಲ್ಲಿ ಅತಿ ಮುಖ್ಯವಾದ ಅತಿಥಿಗಳು ಬಂದಾಗ ಮಧುಪರ್ಕವನ್ನು ನೀಡಿ ಸತ್ಕರಿಸುವುದುಂಟು. ಇದಕ್ಕೆ ಅರ್ಹರಾದ ಅತಿಥಿಗಳೆಂದರೆ ಋತ್ವಿಜ ಅಥವಾ ಯಜ್ಞಗಳನ್ನು ನಡೆಸುವ ಬ್ರಾಹ್ಮಣರು, ಆಚಾರ್ಯ ಅಥವಾ ಅಧ್ಯಾಪಕ, ಮದುವೆ ಗಂಡು, ರಾಜ, ಸ್ನಾತಕ, ಗುರುಕುಲದಿಂದ ಆಗ ತಾನೇ ವಿದ್ಯೆಯನ್ನು ಮುಗಿಸಿ ಬಂದಿರುವವನು ಮತ್ತು ಆತಿಥ್ಯ ನೀಡುವವರಿಗೆ ಇಷ್ಟವಾದವನು. ಮಧುಪರ್ಕವನ್ನು ಜೇನುತುಪ್ಪ, ಮೊಸರು, ಬೆಣ್ಣೆ, ಹುರಿದ ಬಾರ್ಲಿ, ತುಪ್ಪ, ನೀರು, ನೆಲದಲ್ಲಿ ಬೆಳೆದ ಬೀಜಗಳು, ಪಾಯಸ, ಹಾಲು ಇವೆಲ್ಲದರ ಜೊತೆಗೆ ಗೋಮಾಂಸ, ಟಗರು, ಮೇಕೆ, ಜಿಂಕೆಗಳ ಮಾಂಸ ಬೆರೆಸಿ ತಯಾರಿಸುವುದಾಗಿ ವೇದಗಳಲ್ಲಿ ಹೇಳಲಾಗಿದೆ.

ಆರ್ಯರು ಅತಿಥಿಗಳಿಗಾಗಿ ಗೋಮಾಂಸವನ್ನು ನೀಡುವ ವಿಷಯ ಎಷ್ಟರಮಟ್ಟಿಗೆ ಪ್ರಿಯವಾಗಿತ್ತೆಂದರೆ ಗೋಮಾಂಸಕ್ಕಾಗಿ ಬರುತ್ತಿದ್ದ ಅತಿಥಿಗಳನ್ನು ಗೋಘ್ನ ಎಂದೇ ಕರೆಯುತ್ತಿದ್ದರು. ಅದರ ಅರ್ಥ ಗೋಹಂತಕರೆಂದು. ಅಶ್ವಲಾಯನ ಗೃಹ್ಯಸೂತ್ರದಲ್ಲಿ ಹಸುಗಳ ಹತ್ಯೆ ತಪ್ಪಿಸಲು ಗೋಮಾಂಸ ಭಕ್ಷಿಸಲು ಬರುತ್ತಿದ್ದ ಅತಿಥಿಗಳ ಮುಂದೆ ಹಸುಗಳನ್ನು ಕಡಿಯುವುದನ್ನು ಬಿಟ್ಟು ಸಭ್ಯರಾಗಿ ನಡೆದುಕೊಳ್ಳುವಂತೆ ವಿನಂತಿಸಿಕೊಳ್ಳಲಾಗಿದೆ. ಆಪಸ್ತಂಬ ಧರ್ಮಸೂತ್ರದಲ್ಲಿ ಆರ್ಯರು ಸತ್ತಾಗ ವಿಧಿ ವಿಧಾನಗಳನ್ನು ಹೇಗೆ ನಡೆಸಬೇಕೆಂದು ವಿವರಿಸಲಾಗಿದೆ. ಅಂದರೆ ಸತ್ತವರ ಮೇಲೆ ಯಾವ ಯಾವ ಸಲಕರಣೆಗಳನ್ನು ಮತ್ತು ಪ್ರಾಣಿಗಳ ಅಂಗಾಂಗಗಳನ್ನು ಎಲ್ಲಿ ಇಡಬೇಕು ಎನ್ನುವ ವಿವರಣೆಯನ್ನು ನೀಡಲಾಗಿದೆ.

ಬಲಗೈಯಲ್ಲಿ ಗುಹು (ಚಮಚ). ಎಡಗೈಯಲ್ಲಿ ಉಪಭೃತ್ (ಇನ್ನೊಂದು ಚಮಚ). ಬಲಗಡೆ ಸೌಟು (ಯಜ್ಞದ ಮರದ ಕತ್ತಿ), ಎಡಗಡೆ ಅಗ್ನಿಹೋತ್ರ ಹವನಗಳಲ್ಲಿ ಉಪಯೋಗಿಸುವ ಸೌಟು. ಎದೆಯ ಮೇಲೆ ಧ್ರುವ (ದೊಡ್ಡಸೌಟು), ತಲೆ ಮೇಲೆ ಯಜ್ಞದ ಪಾತ್ರೆಗಳು; ಹಲ್ಲುಗಳ ಮೇಲೆ ರಸವನ್ನು ಹಿಂಡುವ ಕಲ್ಲುಗಳು. ಮೂಗಿನ

ಎರಡು ಕಡೆಗಳಲ್ಲೂ ಸ್ರುವಸ್ ಎನ್ನುವ ಎರಡು ಚಿಕ್ಕ ಚಿಕ್ಕ ಯಜ್ಞದ ಸೌಟುಗಳು. ಎರಡು ಕಿವಿಗಳ ಮೇಲೆ ಎರಡು ಪ್ರಶಿತ್ರಾಹರಣ ಪಾತ್ರೆಗಳು, ಅದರಲ್ಲಿ ಪವಿತ್ರ ಆಹಾರ ತುಂಬುವುದು, ಒಂದೇ ಪಾತ್ರೆಯಲ್ಲಿ ತುಂಬಿದರೂ ಆಗಬಹುದು. ಹೊಟ್ಟೆಯ ಮೇಲೆ ಪಾತ್ರೀಯ ಎಂಬ ಯಜ್ಞದ ಪಾತ್ರೆ, ಕಾಲುಗಳ ಮೇಲೆ ಒರಳುಕಲ್ಲು ಮತ್ತು ಒನಕೆ. ಗುಪ್ತಾಂಗಗಳ ಮೇಲೆ ಶಮೀ ವೃಕ್ಷದ ದಂಡ. ಸಾಯಿಸಿದ ಪ್ರಾಣಿಯ ಎರಡು ಮೂತ್ರಪಿಂಡ ಬೀಜಗಳನ್ನು ಎರಡು ಕೈಗಳಲ್ಲಿ ಇಟ್ಟು ಮಂತ್ರಿಸುವುದು. ಪ್ರಾಣಿಯ ಹೃದಯವನ್ನು ಸತ್ತವನ ಹೃದಯದ ಮೇಲೆ ಇಡುವುದು. ಒಟ್ಟಿನಲ್ಲಿ ಸತ್ತವನ ಪ್ರತಿಯೊಂದು ಅಂಗಾಂಗದ ಮೇಲೆ ದಿನನಿತ್ಯ ಉಪಯೋಗಿಸುವ ಸಲಕರಣೆಗಳ ಜೊತೆಗೆ ಸಾಯಿಸಿದ ಪ್ರಾಣಿಯ ಅಂಗಾಂಗಗಳನ್ನು ಇಡಬೇಕು ಎಂದು ವಿವರಿಸಲಾಗಿದೆ.

ಮೇಲಿನ ವಿವರಣೆಯಿಂದ ಆರ್ಯನೊಬ್ಬನು ಸತ್ತಾಗ ಒಂದು ಪ್ರಾಣಿಯನ್ನು ಸಾಯಿಸಿ ಅದರ ಅಂಗಾಂಗಗಳನ್ನು ಸತ್ತವರ ಮೇಲೆ ಇಡುತ್ತಿದ್ದುದಾಗಿ ತಿಳಿದುಬರುತ್ತದೆ. ವೇದ ಮತ್ತು ಬ್ರಾಹ್ಮಣಗಳ ಕಾಲದ ನಂತರ ಬೌದ್ಧ ಸಾಹಿತ್ಯದಲ್ಲಿ ಬ್ರಾಹ್ಮಣರು ಹಸುಗಳನ್ನು ಸಾಮೂಹಿಕವಾಗಿ ಕಡಿಯುತ್ತಿದ್ದ ವಿಷಯವನ್ನು ವಿವರಿಸಲಾಗಿದೆ. ಯಾಗ, ಯಜ್ಞ ಮತ್ತು ಧರ್ಮಗಳ ಹೆಸರಿನಲ್ಲಿ ಬ್ರಾಹ್ಮಣರು ಎಷ್ಟೊಂದು ಪ್ರಾಣಿಗಳನ್ನು ಆಹುತಿ ನೀಡುತ್ತಿದ್ದರೆಂದರೆ ಹೇಳಲು ಅಸಾಧ್ಯ. ಬ್ರಾಹ್ಮಣನಾದ ಕೋಟದಂತನಿಗೆ ಬುದ್ಧನು ಪ್ರಾಣಿಗಳ ವಧೆಯನ್ನು ಮಾಡಬಾರದೆಂದು ಹೀಗೆ ಬೋಧಿಸುತ್ತಾನೆ.

'ಓ ಬ್ರಾಹ್ಮಣ, ಆ ಪಶುಯಜ್ಞದಲ್ಲಿ ಎತ್ತುಗಳನ್ನು ಕಡಿಯಲಿಲ್ಲ. ಆಡುಗಳನ್ನಾಗಲಿ, ಕೋಳಿ, ಕೊಬ್ಬಿದ ಹಂದಿಗಳು ಯಾವುದೇ ಜೀವವುಳ್ಳ ಪ್ರಾಣಿಗಳ ವಧೆ ನಡೆಯಲಿಲ್ಲ. ಮರಗಳಿಗೆ ಪ್ರಾಣಿಗಳನ್ನು ಕಟ್ಟಿಹಾಕಿ ಹಿಂಸಿಸಲಿಲ್ಲ, ಕಡಿಯುವ ಸ್ಥಳದಲ್ಲಿ ರಕ್ತಕ್ಕಾಗಿ ದರ್ಭೆ ಹುಲ್ಲನ್ನು ಹಾಸಲಿಲ್ಲ. ಯಾರೂ ಕತ್ತಿಗಳನ್ನು ಹಿಡಿದು ಮೂಕ ಪ್ರಾಣಿಗಳ ಮೇಲೆ ಎರಗಲಿಲ್ಲ. ಅವುಗಳ ಮುಖಗಳಲ್ಲಿ ಯಾವ ರೀತಿಯ ದುಃಖವೂ ಕಾಣಲಿಲ್ಲ' ಇದಕ್ಕೆ ಉತ್ತರವಾಗಿ ಬುದ್ಧನಿಗೆ ವಂದನೆಗಳನ್ನು ಸಲ್ಲಿಸಿದ ಕೂಟದಂತನು ಪಶುಯಜ್ಞಕ್ಕಾಗಿ ಕಾದಿರಿಸಿದ್ದ ಪ್ರಾಣಿಗಳನ್ನು ಸ್ವತಂತ್ರವಾಗಿ ಬಿಡುವುದಕ್ಕಿಂತ ಮುಂಚೆ ಹೀಗೆ ಹೇಳುತ್ತಾನೆ :

'ಪೂಜ್ಯ ಗೌತಮನೆ, ನನ್ನನ್ನು ನಿನ್ನ ಅನುಯಾಯಿಯಾಗಿ ಸ್ವೀಕರಿಸು, ಈ ದಿನದಿಂದ ನಾನು ಬದುಕಿರುವವರೆಗೆ ನಿನ್ನ ಉಪದೇಶವನ್ನು ಪಾಲಿಸುತ್ತೇನೆ. ಓ ಗೌತಮ, ನನ್ನ ವಶದಲ್ಲಿದ್ದ ಏಳು ನೂರು ಎತ್ತುಗಳು, ಏಳು ನೂರು ಹೋರಿಗಳು, ಏಳು ನೂರು ಪಡ್ಡೆ ಹಸುಗಳು, ಏಳುನೂರು ಮೇಕೆಗಳು ಮತ್ತು ಏಳುನೂರು ಟಗರುಗಳನ್ನು ಸ್ವತಂತ್ರವಾಗಿ ಜೀವಿಸಲು ಬಿಟ್ಟುಬಿಟ್ಟೆ. ಅವು ಸ್ವತಂತ್ರವಾಗಿ ಹುಲ್ಲು ಮೇಯುತ್ತಾ ಸ್ವಚ್ಛ ನೀರು ಕುಡಿಯುತ್ತಾ ತಣ್ಣನೆ ಗಾಳಿಯಲ್ಲಿ ತಿರುಗಾಡುತ್ತಾ ಬಾಳಲಿ'.

ಸಂಯುಕ್ತನಿಕಾಯದ 3. 1–9ರಲ್ಲಿ ಕೋಸಲ ರಾಜ್ಯದ ಪಸನಾಡು ರಾಜನು ನಡೆಸಿದ ಯಜ್ಞದ ವಿವರಣೆ ಬರುತ್ತದೆ. ಐದು ನೂರು ಎತ್ತುಗಳು, ಐದು ನೂರು ಆಕಳುಗಳು, ಪಡ್ಡೆ ಹಸುಗಳು, ಮೇಕೆ ಮತ್ತು ಟಗರುಗಳನ್ನು ಪಶುಯಜ್ಞದಲ್ಲಿ ಕಡಿಯುತ್ತಿದ್ದುದಾಗಿ ತಿಳಿದುಬರುತ್ತದೆ. ಈ ಮೇಲಿನ ಎಲ್ಲಾ ಸಾಕ್ಷ್ಯಾಧಾರಗಳಿಂದ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಗೋಮಾಂಸವನ್ನು ಒಂದು ಕಾಲದಲ್ಲಿ ಹೇರಳವಾಗಿ ಭಕ್ಷಿಸುತ್ತಿದ್ದರೆಂದು ಸಾಬೀತಾಗುತ್ತದೆ.

## ಬ್ರಾಹ್ಮಣರು, ಬ್ರಾಹ್ಮಣೇತರರು ಗೋಮಾಂಸ ಭಕ್ಷಣೆಯನ್ನು ತ್ಯಜಿಸಿದ್ದೇಕೆ?

ಹಿಂದೂಗಳನ್ನು ಮುಖ್ಯವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಶಾಕಾಹಾರಿ, ಮಾಂಸಾಹಾರಿ ಮತ್ತು ಮಾಂಸಾಹಾರಿಗಳಲ್ಲಿ ಗೋಮಾಂಸ ತಿನ್ನದವರು ಮತ್ತು ತಿನ್ನುವವರು. ಇದಕ್ಕೆ ಹೋಲುವಂತೆ ಬ್ರಾಹ್ಮಣರು, ಬ್ರಾಹ್ಮಣೇತರರು ಮತ್ತು ಅಸ್ಪೃಶ್ಯರು ಎನ್ನಬಹುದು. ಈ ವಿಭಾಗಗಳು ಹಿಂದೂ ಸಮಾಜದ ಚಾತುರ್ವರ್ಣ್ಯದ ಆಧಾರದಿಂದ ರೂಪಿತವಾದುದಲ್ಲವಾದರೂ ಸಾಮಾಜಿಕ ಆಧಾರದ ನೆಲೆಯಿಂದಲೇ ಕೂಡಿದೆ. ಬ್ರಾಹ್ಮಣರು ಪೂರ್ಣ ಶಾಕಾಹಾರಿಗಳಾದರೆ, ಬ್ರಾಹ್ಮಣೇತರರು ಎಲ್ಲಾ ರೀತಿಯ ಮಾಂಸವನ್ನು ಭಕ್ಷಿಸುತ್ತ ಗೋಮಾಂಸವನ್ನು ಮಾತ್ರ ತ್ಯಜಿಸಿದರು. ಇದಕ್ಕೆ ಉತ್ತರವನ್ನು ಕಂಡುಕೊಳ್ಳಲು ಅಶೋಕ ಮತ್ತು ಮನುವಿನ ಕಾಲದ ಕೆಲವು ಶಿಲಾಶಾಸನಗಳಲ್ಲಿರುವ ವಿವರಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಅಶೋಕನ ಕಾಲದ ಶಿಲಾಶಾಸನ ಸಂಖ್ಯೆ 1ರಲ್ಲಿ ಹೀಗೆ ಕೆತ್ತಲಾಗಿದೆ : ಈ ಉಗ್ರಶಾಸನವನ್ನು ರಾಜನ ಪವಿತ್ರ ಆಜ್ಞೆಯಂತೆ ಕೆತ್ತಲಾಗಿದೆ. ರಾಜಧಾನಿಯಲ್ಲಿ ಯಾವುದೇ ಪ್ರಾಣಿಯನ್ನು ಆಹುತಿಗಾಗಿ ಮತ್ತು ಉತ್ಸವ ದಿನಗಳ ಔತಣಕ್ಕಾಗಿ ಕಡಿಯಬಾರದೆಂದು ಆಜ್ಞೆಯನ್ನು ಹೊರಡಿಸಲಾಗಿದೆ. ಆದರೂ ಕೆಲವು ಸ್ಥಳಗಳಲ್ಲಿ ಭರೀಪೂರ್ಣ ಔತಣಗಳನ್ನು ರಾಜನ ಸನ್ನಿಧಾನದಲ್ಲಿ ನಡೆಸಬಹುದು. ಮುಂಚೆ ಅದೇ ರಾಜನ ರಜೋಯಿಸದಲ್ಲಿ ದಿನಕ್ಕೆ ನೂರಾರು, ಸಾವಿರಾರು ಪ್ರಾಣಿಗಳನ್ನು ಆಹಾರಕ್ಕಾಗಿ ಕಡಿಯಲಾಗುತ್ತಿತ್ತು. ಆದರೆ ಈಗ ರಾಜನ ಉಗ್ರ ಆಜ್ಞೆಯಂತೆ ದಿನಕ್ಕೆ ಕೇವಲ ಮೂರು ಪ್ರಾಣಿಗಳನ್ನು ಮಾತ್ರ ಕಡಿಯಲಾಗುತ್ತಿದೆ; ಎರಡು ನವಿಲುಗಳು ಮತ್ತು ಒಂದು ಜಿಂಕೆ. ಮುಂದಿನ ದಿನಗಳಲ್ಲಿ ಅದನ್ನೂ ನಿಲ್ಲಿಸಲಾಗುವುದು.

ಶಿಲಾಶಾಸನ 5ರಲ್ಲಿ ಪವಿತ್ರವಾದ ರಾಜಾಜ್ಞೆಯನ್ನು ಹೀಗೆ ತಿಳಿಸಲಾಗಿದೆ : ನನ್ನ ಇಪ್ಪತ್ತಾರು ವರ್ಷಗಳ ರಾಜ್ಯಪಾಲನೆಯಲ್ಲಿ ಈ ಕೆಳಗಿನ ಪ್ರಾಣಿಗಳ ವಧೆಯನ್ನು ನಿಷೇಧಿಸಲಾಗಿದೆ. ಗಿಳಿಗಳು, ಬಾತುಕೋಳಿ, ಬಾವಲಿ, ರಾಣಿ ಇರುವೆ, ಆಮೆ, ಎಲುಬಿಲ್ಲದ ಮೀನು, ಮುಳ್ಳುಹಂದಿ, ಅಳಿಲು, ಬಾರಸಿಂಗ, ಬ್ರಾಮಿಕೋಳಿ, ಮಂಗ, ಘೇಂಡಾಮೃಗ, ಪಾರಿವಾಳ ಮತ್ತಿತರ ಚತುಷ್ಪಾದೀ ಪ್ರಾಣಿಗಳು.

ಮನು ಕೂಡ ಹಲವು ಪ್ರಾಣಿಗಳ ಆಹುತಿಯನ್ನು ನಿಷೇಧಿಸಿರುವುದಾಗಿ ತನ್ನ ನಿಯಮಗಳಲ್ಲಿ ತಿಳಿಸಿರುತ್ತಾನೆ. ಅಶೋಕನು ಗೋಹತ್ಯೆಯನ್ನು ನಿಷೇಧಿಸಿದ್ದನೆ ಎನ್ನುವ ಪ್ರಶ್ನೆಗೆ ಪ್ರೊ. ವಿನ್ಸಂಟ್ ಸ್ಮಿತ್, ಅಶೋಕನು ಗೋಹತ್ಯೆಯನ್ನು ನಿಷೇಧಿಸಿಲ್ಲ. ಅಶೋಕನ ಶಾಸನಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಗೋಹತ್ಯೆಯು ಅಶೋಕನ ಕಾಲದಲ್ಲಿ ಮುಂದುವರಿದಿತ್ತು. ಪ್ರೊ. ರಾಧಾ ಕುಮುದ್ ಮುಖರ್ಜಿ, ಶಿಲಾಶಾಸನ 5ರಲ್ಲಿ ತಿಳಿಸಿರುವಂತೆ ಮತ್ತಿತರ ಚತುಷ್ಪಾದೀ ಪ್ರಾಣಿಗಳನ್ನು ಕಡಿಯದಂತೆ ಆಜ್ಞೆ ನೀಡಿರುವುದನ್ನು ಗಮನಕ್ಕೆ ತರುತ್ತ ಹಸುವನ್ನು ಅಶೋಕನ ಕಾಲದಲ್ಲಿ ಕೊಲ್ಲುತ್ತಿರಲಿಲ್ಲ ಎನ್ನುತ್ತಾರೆ. ಆದರೆ ಈ ಶಾಸನದಲ್ಲಿ ಎಲ್ಲಾ ನಾಲ್ಕು ಕಾಲಿನ ಪ್ರಾಣಿಗಳೆಂದು ತಿಳಿಸಿಲ್ಲ; ಕೆಲವು ನಾಲ್ಕು ಕಾಲಿನ ಪ್ರಾಣಿಗಳನ್ನು ಉಪಯೋಗಿಸುತ್ತಿಲ್ಲ ಅಥವಾ ತಿನ್ನುತ್ತಿಲ್ಲ ಎಂದು ವಿವರಿಸಿಲ್ಲ. ಹಸು ಬಗ್ಗೆ ಪ್ರತ್ಯೇಕವಾದ ಉಲ್ಲೇಖಗಳಿಲ್ಲ ಎನ್ನುತ್ತಾನೆ ವಿನ್ಸಂಟ್ ಸ್ಮಿತ್.

ಅಂದರೆ ಅಶೋಕನು ಗೋಹತ್ಯೆಯನ್ನು ನಿಷೇಧಿಸಿಲ್ಲ. ಅಶೋಕನ ಕಾಲದಲ್ಲಿ ಹಸುವಿನ ಬಗ್ಗೆ ಪ್ರತ್ಯೇಕ ಪ್ರೀತಿ ಇರಲಿಲ್ಲ ಎನ್ನುವುದು ಇಲ್ಲಿನ ತಾತ್ಪರ್ಯ. ಅಶೋಕನು ಬೌದ್ಧ ಧರ್ಮವನ್ನು ಸ್ವೀಕರಿಸಿದ ಮೇಲೆ ಯಾವುದೇ ಪ್ರಾಣಿಗಳನ್ನಾಗಲಿ, ಮನುಷ್ಯರನ್ನಾಗಲಿ ಸಾಯಿಸುವುದು ಅನಗತ್ಯವೆಂದು ತಿಳಿದುಕೊಂಡಿದ್ದ. ಹಾಗೆ ಅದನ್ನು ರಾಜನ ಆಜ್ಞೆಯಂತೆ ಶಿಲಾಶಾಸನಗಳ ಮೂಲಕ ಬರೆಸಲಾಯಿತು. ಮನು ಕೂಡ ಗೋಹತ್ಯೆಯನ್ನು ಪೂರ್ಣವಾಗಿ ನಿಷೇಧಿಸಿರಲಿಲ್ಲ. ಆದರೆ ಕೆಲವು ಪರಿಸ್ಥಿತಿಗಳಲ್ಲಿ ಗೋಮಾಂಸದ ಭಕ್ಷಣೆಯ ಬಗ್ಗೆ ನಿರ್ಬಂಧ ವಿಧಿಸಿದ್ದನು.

ಹಾಗಾದರೆ ಯಾವ ಕಾರಣಕ್ಕಾಗಿ ಬ್ರಾಹ್ಮಣೇತರರು ಗೋಮಾಂಸ ಭಕ್ಷಿಸುವುದನ್ನು ತ್ಯಜಿಸಿದ್ದರು? ಇದಕ್ಕೆ ಯಾವುದೋ ಒಂದು ಗಟ್ಟಿಯಾದ ಕಾರಣ ಇರಲೇಬೇಕು. ಇದಕ್ಕೆ ಮುಖ್ಯ ಕಾರಣ ಬ್ರಾಹ್ಮಣೇತರರು ಬ್ರಾಹ್ಮಣರನ್ನು ಅನುಕರಿಸಿದರು ಎನ್ನುವುದು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲ್‌ಸ್ತರದಲ್ಲಿರುವವರನ್ನು ಕೆಳಸ್ತರದಲ್ಲಿರುವ ಜನರು ಅನುಕರಿಸುವುದು ಸಮಾಜದ ಒಂದು ಸಾಮೂಹಿಕ ಸನ್ನಿ ಎನ್ನುತ್ತಾರೆ ಫ್ರೆಂಚ್ ದೇಶದ ಸಮಾಜಶಾಸ್ತ್ರಜ್ಞ ಗಾಬ್ರಿಯಲ್ ಗಾರ್ಡೆ. ಇದನ್ನು ನಾವು ಪ್ರಸ್ತುತ ಸಮಾಜದಲ್ಲೂ ನೋಡಬಹುದಾಗಿದೆ. ಚಿರತೆಯನ್ನು ನೋಡಿದ ನರಿ ಪಾತಗಳನ್ನು ಇಟ್ಟುಕೊಂಡಂತೆ ಮಧ್ಯಮವರ್ಗದ ಎಷ್ಟೋ ಕುಟುಂಬಗಳು ಮೇಲ್ವರ್ಗದವರನ್ನು ಅನುಕರಿಸಲು ಹೋಗಿ ಸಾಲದ ಹೊರೆಯಿಂದ ನರಳಾಡುವುದನ್ನು ನಾವಿಂದು ನೋಡುತ್ತಿದ್ದೇವೆ. ಗೋಮಾಂಸ ತಿನ್ನುವುದನ್ನು ಬಿಟ್ಟ ಬ್ರಾಹ್ಮಣರು ಗೋಪೂಜೆ ಮಾಡಲು ಪ್ರಾರಂಭಿಸಿದರು. ಇದನ್ನು ನೋಡಿದ ಬ್ರಾಹ್ಮಣೇತರರು ಸಮಾಜದಲ್ಲಿ ಮೇಲ್‌ಸ್ತರದಲ್ಲಿದ್ದ ಬ್ರಾಹ್ಮಣರನ್ನು ಅನುಕರಿಸಲು ಗೋಮಾಂಸ ತಿನ್ನುವುದನ್ನು ತ್ಯಜಿಸಿ ಗೋಪೂಜೆ ಮಾಡಲು ಪ್ರಾರಂಭಿಸಿಬಿಟ್ಟರು. ಬ್ರಾಹ್ಮಣರು ಒಂದು ಕಾಲದಲ್ಲಿ ಗೋಪೂಜೆಯ ಬಗ್ಗೆ ಹೆಚ್ಚಾಗಿ ಪ್ರಚಾರವನ್ನು ಕೈಗೊಂಡಿದ್ದಾಗಿ ತಿಳಿದುಬರುತ್ತದೆ. ಗಾಯತ್ರಿ ಪುರಾಣ ಇದಕ್ಕೊಂದು ಉದಾಹರಣೆ.

## ಬ್ರಾಹ್ಮಣರು ಯಾವ ಕಾಲದಿಂದ ಶಾಕಾಹಾರಿಗಳಾದರು?

ಬ್ರಾಹ್ಮಣರು ಒಂದು ಕಾಲದಲ್ಲಿ ಶ್ರೇಷ್ಠ ಗೋಮಾಂಸ ಭಕ್ಷಕರಾಗಿದ್ದು, ಅದನ್ನು ಮೊದಲಿಗೆ ಬಿಟ್ಟು ಅನಂತರ ಎಲ್ಲಾ ರೀತಿಯ ಮಾಂಸವನ್ನು ತ್ಯಜಿಸಿ ಶಾಕಾಹಾರಿಗಳಾದರು. ಬ್ರಾಹ್ಮಣೇತರರು ಗೋಮಾಂಸ ಭಕ್ಷಿಸುತ್ತಿದ್ದರೂ ದಿನವೂ ಅವರಿಗೆ ಮಾಂಸ ಲಭಿಸುತ್ತಿರಲಿಲ್ಲ. ಒಂದು ಕಾಲಕ್ಕೆ ಎತ್ತು ಬೆಲೆಯುಳ್ಳ ಪ್ರಾಣಿಯಾಗಿದ್ದು ಆಹಾರಕ್ಕಾಗಿ ದಿನವೂ ಬ್ರಾಹ್ಮಣೇತರರು ಕಡಿಯಲು ಸಾಧ್ಯವಿರಲಿಲ್ಲ. ಹಬ್ಬ ಹರಿದಿನಗಳಲ್ಲಿ ಮಾತ್ರ ಅವರಿಗೆ ದೊರಕುತ್ತಿತ್ತು. ಬ್ರಾಹ್ಮಣರ ವಿಷಯ ಹಾಗಿರಲಿಲ್ಲ; ಅವರು ಸಮಾಜದಲ್ಲಿ ಪುರೋಹಿತರಾಗಿ ಗೌರವ ಘನತೆಗಳನ್ನು ಹೊಂದಿದ್ದು ಪ್ರತಿದಿನ ಒಂದಲ್ಲ ಒಂದು ಪೂಜೆಗೆ ಗೋವಿನ ವಧೆ ಮಾಡುತ್ತಿದ್ದರು. ಹಾಗಾಗಿ ಬ್ರಾಹ್ಮಣರಿಗೆ ಪ್ರತಿದಿನವೂ ಗೋಮಾಂಸದ ಹಬ್ಬವೇ ಆಗಿತ್ತು. ಬ್ರಾಹ್ಮಣರ ಯಾಗ, ಯಜ್ಞಗಳೆಂದರೆ ಪ್ರಾಣಿಗಳ ಆಹುತಿ ಮತ್ತು ಮಾಂಸ ತಿನ್ನುವುದು. ಬ್ರಾಹ್ಮಣರು ಪ್ರಾಣಿಗಳನ್ನು ಕೊಲ್ಲುವುದಕ್ಕೆ ವಿಧಿ ವಿಧಾನಗಳನ್ನೇ ಸೃಷ್ಟಿಸಿದ್ದರು. ಇವರ ವಿವರಗಳನ್ನು ಆತ್ರೇಯ ಬ್ರಾಹ್ಮಣದಲ್ಲಿ ನೋಡಬಹುದು.

ಪ್ರಾಣಿಗಳನ್ನು ಆಹುತಿ ನೀಡುವ ಕಂಬದ ಹೆಸರು ಯೂಪ. ಯೂಪವನ್ನು ಸ್ಥಾಪಿಸಿದ ನಂತರ ಪ್ರಾಣಿಗಳನ್ನು ಅದಕ್ಕೆ ಕಟ್ಟಿ ಕಡಿಯಲಾಗುತ್ತಿತ್ತು. ಯೂಪದ ಅಗತ್ಯದ ಬಗ್ಗೆ ಆತ್ರೇಯ ಬ್ರಾಹ್ಮಣದಲ್ಲಿ ಹೀಗೆ ವಿವರಿಸಲಾಗಿದೆ. ಯೂಪ ಒಂದು ಆಯುಧವಾಗಿದ್ದು, ಅದರ ಅಷ್ಟ ದಿಕ್ಕುಗಳೂ ಚೂಪಾಗಿದ್ದು, ಅದು ಶತ್ರುವನ್ನು ಒಂದೇ ಏಟಿಗೆ ಸಾಯಿಸುತ್ತದೆ. ಯೂಪವನ್ನು ಖದಿರ ಮರದಿಂದ ತಯಾರಿಸಲಾಗಿದ್ದು, ದೇವತೆಗಳು ಖದಿರ ಮರದಿಂದಲೇ ದಿವ್ಯ ಪ್ರಪಂಚವನ್ನು ಗೆದ್ದುಕೊಳ್ಳುವರು. ಯಾರೇ ಆಗಲಿ ಕೊಬ್ಬಿದ ಬಿಲ್ವ ಮರದಂತೆ ಬೆಳೆಯಬೇಕಾದರೆ ಬಿಲ್ವ ಮರದಿಂದ ಯೂಪಗಳನ್ನು ತಯಾರಿಸಬೇಕು. ಬಿಲ್ವ ಮರ ವರ್ಷಕ್ಕೊಮ್ಮೆ ಹೂವು, ಕಾಯಿ ಮತ್ತು ಹಣ್ಣುಗಳನ್ನು ಬಿಡುವುದರಿಂದ ಅದು ಫಲಪ್ರಧಾನ ಸಂಕೇತ. ಅದು ಬೇರಿನಿಂದ ಟಿಸಿಲುವರೆಗೆ ಸಮೃದ್ಧವಾಗಿ ಬೆಳೆಯುತ್ತದೆ. ಆದುದರಿಂದ ಅದು ಪುಷ್ಟವಾದ ಬೆಳವಣಿಗೆಯ ಚಿಹ್ನೆ. ಬಿಲ್ವ ಮರದಿಂದ ಯೂಪ ತಯಾರಿಸುವವರ ಮಕ್ಕಳು ಮತ್ತು ಅವರ ಸಾಕು ಪ್ರಾಣಿಗಳು ಸಮೃದ್ಧವಾಗಿ ವೃದ್ಧಿಸುತ್ತವೆ.

ಯೂಪವನ್ನು ಸ್ಥಾಪಿಸಿ, ಇನ್ನಿತರ ಕಾರ್ಯ ವಿಧಾನಗಳನ್ನು ಮುಗಿಸಿದ ಮೇಲೆ ಬೆಂಕಿಯನ್ನು, ಆಹುತಿ ನೀಡುವ ಪ್ರಾಣಿಗಳ ಸುತ್ತಲು ಸುತ್ತಿ ಪುರೋಹಿತನಿಗೆ ಆಹುತಿ ನೀಡಲು ಆಹ್ವಾನಿಸುತ್ತಾರೆ. ಪುರೋಹಿತನ ತಾಯಿ ತಂದೆ, ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ಬಂಧು ಬಳಗ ಎಲ್ಲರೂ ಸೇರಿ ಆಹುತಿ ನೀಡುವರು. ಹದಿನೇಳು ಬ್ರಾಹ್ಮಣ ಪುರೋಹಿತರು ಯಜ್ಞದಲ್ಲಿ ಪಾಲ್ಗೊಳ್ಳಲು ಅರ್ಹತೆ ಹೊಂದಿರುವುದಾಗಿ ಆತ್ರೇಯ ಬ್ರಾಹ್ಮಣದಲ್ಲಿ ತಿಳಿಸಲಾಗಿದೆ.

ಪ್ರಾಣಿಗಳನ್ನು ಕೊಲ್ಲುವುದಕ್ಕೆ ಮುಂಚೆ ಅದರ ಕಾಲುಗಳನ್ನು ಉತ್ತರಕ್ಕಿಟ್ಟು ಕಣ್ಣುಗಳನ್ನು ಸೂರ್ಯನ ಕಡೆಗೆ ತಿರುಗಿಸಬೇಕು. ಅದರ ಶ್ವಾಸವನ್ನು ಗಾಳಿಯಲ್ಲಿ ಲೀನವಾಗಿಸಿ ದೇಹವನ್ನು ಭೂಮಿಗಿಡಬೇಕು. ಅನಂತರ ಹಲವು ವಿಧಿ ವಿಧಾನಗಳಾದ ಮೇಲೆ ಬ್ರಾಹ್ಮಣರು ಆಹುತಿ ನೀಡಿದ ಪ್ರಾಣಿಗಳ ಮಾಂಸವನ್ನು ಹಂಚಿಕೊಳ್ಳಲು ಪ್ರಾರಂಭಿಸುತ್ತಾರೆ.

> ಎರಡು ದವಡೆ ಎಲುಬುಗಳ ಜೊತೆಗೆ ನಾಲಿಗೆಯನ್ನು ಪ್ರಸ್ತೋತೃವಿಗೆ, ಹದ್ದಿನ ಆಕಾರದ ಎದೆಭಾಗ ಉದ್ಗಾತೃವಿಗೆ; ರಸನೇಂದ್ರಿಯದ ಜೊತೆಗೆ ಗಂಟಲನ್ನು ಪ್ರತಿಹತರನಿಗೆ; ಸೊಂಟದ ಬಲಭಾಗದ ಬಲತೊಡೆ ಹೋತಾರನಿಗೆ; ಎಡಭಾಗ ಬ್ರಹ್ಮನಿಗೆ, ಬಲತೊಡೆ ಮೈತ್ರಾ ವರುಣನಿಗೆ; ಎಡತೊಡೆಯನ್ನು ಬ್ರಾಹ್ಮಣಾಚ್ಛಂಸಿಗೆ. ಬಲತೊಡೆಯನ್ನು ಭುಜದ ಜೊತೆಗೆ ಅಧ್ವರ್ಯುವಿಗೆ; ಎಡತೊಡೆಯನ್ನು ಭುಜದ ಜೊತೆಗೆ ಮಂತ್ರ ಹೇಳುವುದರಲ್ಲಿ ಪಾಲ್ಗೊಂಡವರಿಗೆ; ಎಡಹೆಗಲನ್ನು ಪ್ರತಿಶತರಿಗೆ; ಕೆಳಭಾಗದ ಬಲ ತೋಳನ್ನು ನೇಶ್ತರನಿಗೆ; ಕೆಳಭಾಗದ ಎಡತೋಳನ್ನು ಪೋತಾರನಿಗೆ; ಬಲತೊಡೆಯ ಮೇಲ್ಭಾಗವನ್ನು ಅಚ್ಛಾವಕನಿಗೆ; ಎಡತೊಡೆಯ ಮೇಲ್ಭಾಗವನ್ನು ಅಗ್ನೀಧ್ರನಿಗೆ; ಬಲತೋಳಿನ ಮೇಲ್ಭಾಗವನ್ನು ಆತ್ರೇಯನಿಗೆ; ಎಡಭಾಗವನ್ನು ಸದಸ್ಯನಿಗೆ ನೀಡಬೇಕು. ಬೆನ್ನುಮೂಳೆ ಮತ್ತು ಮೂತ್ರಕೋಶವನ್ನು ಗೃಹಪತಿಗೆ, ಅಂದರೆ ಯಜ್ಞಕರ್ತೃವಿಗೆ ನೀಡಬೇಕು. ಆತಿಥ್ಯ ನೀಡುವ ಗೃಹಪತಿಗೆ ಎಡಪಾದವನ್ನು, ಆ ಗೃಹಪತಿಯ ಪತ್ನಿಗೆ ಮೇಲ್ಬುಟ. ಬಾಲಪತ್ನಿಯರಿಗೆ ಕೆಳತುಟಿಯನ್ನು ನೀಡಬೇಕು.

ಆದರೆ ಅವರು ಅದನ್ನು ಬ್ರಾಹ್ಮಣನಿಗೆ ಕೊಡಬೇಕು. ಕತ್ತಿನ ಭಾಗವನ್ನು ಮತ್ತು ಮೃದ್ವಸ್ಥಿಗಳನ್ನು ಗ್ರವಸ್ತುತನಿಗೆ ನೀಡಬೇಕು; ತಲೆ ಮತ್ತು ಚರ್ಮ ಸುಬ್ರಹ್ಮಣ್ಯನಿಗೆ; ಮಿಕ್ಕದ್ದು ಕಟುಕನಿಗೆ; ಆದರೆ ಅವನು ಬ್ರಾಹ್ಮಣನಾಗಿಲ್ಲದಿದ್ದ ಪಕ್ಷದಲ್ಲಿ ಅದನ್ನು ಬ್ರಾಹ್ಮಣನಿಗೆ ನೀಡಬೇಕು.

ಒಟ್ಟನಲ್ಲಿ ಆಹುತಿ ನೀಡಿದ ಪ್ರಾಣಿಗಳ ಪೂರ್ಣಮಾಂಸವನ್ನು ಬ್ರಾಹ್ಮಣರೇ ಹಂಚಿಕೊಳ್ಳುತ್ತಿದ್ದರು. ಪ್ರಾಣಿಗಳನ್ನು ವಧಿಸುವ ಕೆಲಸವನ್ನು ಬ್ರಾಹ್ಮಣರೇ ಮಾಡುತ್ತಿದ್ದು, ಆಹುತಿಗೆ ಪ್ರಾಣಿಗಳನ್ನು ನೀಡಿದವರಿಗೆ ಅಳಿದುಳಿದ ಚೂರು ಪಾರು ಮಾಂಸ ದೊರಕುತ್ತಿತ್ತು. ಹೀಗೆ ದೇವರ ಹೆಸರಿನಲ್ಲಿ ಯಜ್ಞಗಳನ್ನು ನಡೆಸುವ ಮೂಲಕ ಪ್ರಾಣಿಗಳ ವಧೆ ನಡೆಯುತ್ತಿತ್ತು.

*(ಡಾ. ಬಿ. ಆರ್. ಅಂಬೇಡ್ಕರ್, ಯಾರು ಶೂದ್ರರಾಗಿದ್ದರು, ಸಂಪುಟ. 7, ಪುಟ 477, 478)*

ಬ್ರಾಹ್ಮಣರು ಯಾವ ಕಾಲದಿಂದ ಗೋಮಾಂಸ ಭಕ್ಷಣೆಯನ್ನು ತ್ಯಜಿಸಿದರು? ಎನ್ನುವುದನ್ನು ಸ್ವಲ್ಪ ಗಮನಿಸೋಣ. ಅಶೋಕನು ಗೋಮಾಂಸ ಭಕ್ಷಣೆಯನ್ನು ತ್ಯಜಿಸುವಂತೆ ಆಜ್ಞೆಯನ್ನು ಮಾಡಿರಲಿಲ್ಲ. ಒಂದು ವೇಳೆ ಬುದ್ಧನ ಅನುಯಾಯಿ ಅಶೋಕನು ಹಾಗೆ ಮಾಡಿದ್ದರೂ ಬ್ರಾಹ್ಮಣರು ಅದನ್ನು ಒಪ್ಪುತ್ತಿರಲಿಲ್ಲ. ಮನು ಗೋಮಾಂಸ ಭಕ್ಷಣೆಯನ್ನು ತ್ಯಜಿಸಲು ಆಹ್ವಾನ ನೀಡಿದ್ದನೆ ಎನ್ನುವುದನ್ನು ತಿಳಿದು ಕೊಳ್ಳಲು ಮನುಸ್ಮೃತಿಯಲ್ಲಿ ನೀಡಿರುವ ಕೆಲವು ವಿವರಗಳನ್ನು ಪರಿಶೀಲಿಸಬಹುದಾಗಿದೆ. ಮನುಸ್ಮೃತಿ ಶ್ಲೋಕ 5.47ರಂತೆ ಅವರು ಯಾವುದೇ ಪ್ರಾಣಿಯನ್ನು ಗಾಯಗೊಳಿಸದೆ ಇದ್ದ ಪಕ್ಷದಲ್ಲಿ ಮನಸ್ಸಿನಲ್ಲಿ ಏನು ಬಯಸುವರೊ ಅದನ್ನು ಪಡೆಯುವರು. ಶ್ಲೋಕ 5.48ರ ಪ್ರಕಾರ ಯಾವುದೇ ಪ್ರಾಣಿಯನ್ನು ಗಾಯಗೊಳಿಸದೆ ಮಾಂಸ ದೊರೆಯಲಾರದು. ತಮ್ಮ ಭಾವನೆಗಳಿಗೆ ಗಾಯವಾಗುವುದೆಂದರೆ ಸ್ವರ್ಗದಿಂದ ಆಶೀರ್ವಾದ ಸಿಕ್ಕಿದಂತೆ. ಆದುದರಿಂದ ಮಾಂಸ ತಿನ್ನುವುದನ್ನು ತ್ಯಜಿಸಿ, ಶ್ಲೋಕ 5.49ರಲ್ಲಿ ಪ್ರಾಣಿಗಳನ್ನು ಕ್ರೂರವಾಗಿ ಕೊಂದು ಮಾಂಸ ತಿನ್ನುವುದಕ್ಕಿಂತ ಮಾಂಸ ತಿನ್ನದೇ ಇರುವುದೇ ಒಳ್ಳೆಯದು. ಶ್ಲೋಕ 5.46ರ ಪ್ರಕಾರ ಯಾರು ಪ್ರಾಣಿಗಳನ್ನು ಕೊಲ್ಲುವುದಿಲ್ಲವೋ ಅವರು ಎಲ್ಲರಿಗಿಂತ ಶ್ರೇಷ್ಠ ಸ್ಥಾನವನ್ನು ಪಡೆಯುವರು. ಈ ಮೇಲಿನ ನಾಲ್ಕು ಶ್ಲೋಕಗಳಿಂದ ಬ್ರಾಹ್ಮಣರು ಗೋಮಾಂಸ ತಿನ್ನುವುದನ್ನು ಏಕೆ ಬಿಟ್ಟರು ಎನ್ನುವುದು ಸ್ವಲ್ಪಮಟ್ಟಿಗೆ ಅರ್ಥವಾದರೂ ಈ ಶ್ಲೋಕಗಳು ಸರಿಯಾದ ಆಧಾರಗಳನ್ನು ನೀಡುವುದಿಲ್ಲ.

ಶ್ಲೋಕ 5.28: ಪ್ರಜಾಪತಿ ಸಮಸ್ತವನ್ನೂ ಚಲಿಸುವ ಮತ್ತು ಚಲಿಸದ ಪ್ರಾಣಿಗಳಿಗೆ ಜೀವಸೃಷ್ಟಿಗೆ ಆಹಾರವನ್ನು ಸಹ ಸೃಷ್ಟಿಸಿರುವವನು; ಶ್ಲೋಕ 5.30: ದಿನಾ ಯಾವುದೇ ರೀತಿಯಿಂದ ಆಹಾರ ಪಡೆಯುವವನು ಯಾವುದೇ ಪಾಪವನ್ನು ಮಾಡಲಾರ. ಸೃಷ್ಟಿಕರ್ತನೇ ತಿನ್ನಬೇಕಾಗಿರುವ ಆಹಾರವನ್ನೂ ಸೃಷ್ಟಿಸಿದ್ದಾನೆ. ಶ್ಲೋಕ 5.36: ಮಾಂಸ ತಿನ್ನುವುದಾಗಲಿ, ಮಧು ಕುಡಿಯುವುದಾಗಲಿ, ಸಂಭೋಗ ನಡೆಸುವುದಾಗಲಿ ಪಾಪವಲ್ಲ. ಶ್ಲೋಕ 5.32: ಮಾಂಸವನ್ನು ಎಲ್ಲಿಂದಾದರೂ ತಂದಿರಲಿ, ಪ್ರಾಣಿಯನ್ನು ಕೊಂದಿರಲಿ ಅಥವಾ ಬೇರೆಯವರಿಂದ ಪಡೆದಿರಲಿ, ಮಾಂಸವನ್ನು ತಿನ್ನುವವನು ದೇವರನ್ನು ಗೌರವಿಸಿದಂತೆ, ಪಾಪಕ್ಕೆ ಒಳಗಾಗುವುದಿಲ್ಲ: ಶ್ಲೋಕ 5.40: ಗಿಡ, ಮರ, ಆಕಳು, ಪಕ್ಷಿಗಳು ಇನ್ನಿತರ ಪ್ರಾಣಿಗಳು ಯಜ್ಞದಿಂದ ನಾಶವಾಗಿ ಮತ್ತೆ ಅವು ಶ್ರೇಷ್ಠವಾದ

ನರಜನ್ಮವನ್ನು ಪಡೆಯುತ್ತವೆ. ಶ್ಲೋಕ 5.31: ಯಜ್ಞಗಳಿಂದ ಪಡೆದ ಮಾಂಸ ತಿನ್ನಲು ಯೋಗ್ಯವಾದುದು; ಇದು ದೇವರುಗಳು ಮಾಡಿದ ನಿಯಮ. ಬೇರೆ ಸಂದರ್ಭಗಳಿಂದ ದೊರಕಿದ ಮಾಂಸ ತಿನ್ನಲು ಯೋಗ್ಯವಲ್ಲ. ಅದು ರಾಕ್ಷಸರಿಗೆ ಸೇರಬೇಕು. ಶ್ಲೋಕ 5.35: ಮನುಷ್ಯ ಪವಿತ್ರ ಯಜ್ಞಗಳಲ್ಲಿ ಪಾಲ್ಗೊಂಡು ಮಾಂಸ ತಿನ್ನಲು ನಿರಾಕರಿಸಿದರೆ ಸತ್ತನಂತರ ಕನಿಷ್ಠ 21 ಜನ್ಮಗಳು ಪ್ರಾಣಿಯಾಗಿ ಜನಿಸುವನು.

ಮಾಂಸ ತಿನ್ನುವುದನ್ನು ಬಿಟ್ಟುಬಿಡುವಂತೆ ಮನು ಆದೇಶ ನೀಡಿರುವ ವಿಷಯ ಕಾಣುವುದಿಲ್ಲ. ಮನುಸ್ಮೃತಿಯಲ್ಲಿ ಗೋಹತ್ಯೆ ಮಾಡುವುದನ್ನು ನಿಷೇಧಿಸಿರುವ ಉಲ್ಲೇಖಗಳು ದೊರಕುವುದಿಲ್ಲ. ಒಟ್ಟಿನಲ್ಲಿ ಹಸುವನ್ನು ಪವಿತ್ರ ಪ್ರಾಣಿ ಎಂದು ಎಲ್ಲೂ ಘೋಷಿಸಿಲ್ಲ. ಜೊತೆಗೆ ಹಸು ಕೊಳಕು ಪ್ರಾಣಿ, ಅದನ್ನು ಸ್ಪರ್ಶಿಸುವುದರಿಂದ ಮನುಷ್ಯ ಮಲಿನಗೊಳ್ಳುವನು ಎಂದಿದ್ದಾನೆ.

ಮೇಲಿನ ವಿವರಗಳನ್ನು ಅವಲೋಕಿಸಿದಾಗ ಬ್ರಾಹ್ಮಣರು ಮನುವಿನ ಕಾಲದಲ್ಲಿ ಗೋಮಾಂಸವನ್ನು ಭಕ್ಷಿಸುತ್ತಿದ್ದುದಾಗಿ ತಿಳಿದುಬರುತ್ತದೆ. ಅನಂತರ ಯಾವ ಕಾರಣಕ್ಕಾಗಿ ಗೋಮಾಂಸ ಭಕ್ಷಣೆಯನ್ನು ಮತ್ತು ಇತರ ಮಾಂಸ ಭಕ್ಷಣೆಯನ್ನು ತ್ಯಜಿಸಿ ಪೂರ್ಣವಾಗಿ ಶಾಕಾಹಾರಿಗಳಾದರು? ಹಿಂದೂಗಳ ಧರ್ಮಕರ್ತ, ಹಿಂದೂ ನಿಯಮಗಳ ಸೃಷ್ಟಿಕರ್ತ ಮನುವಿನ ಬೋಧನೆಯ ಪ್ರಕಾರ ಗೋಮಾಂಸ ತಿನ್ನುವುದನ್ನು ಹಿಂದೂಗಳಂತೂ ತ್ಯಜಿಸಿರಲಿಲ್ಲ.

ಅದ್ವೈತ ತತ್ವಜ್ಞಾನದ ಪ್ರಕಾರ ಗೋವು ಪವಿತ್ರ. ಹಾಗೆ ಎಲ್ಲಾ ಪ್ರಾಣಿಗಳೂ ಮತ್ತು ಮನುಷ್ಯರೂ ಕೂಡ ಪವಿತ್ರ. ಈ ವಿವರಣೆ ಅಷ್ಟಾಗಿ ತೃಪ್ತಿ ನೀಡುವುದಿಲ್ಲ. ಇನ್ನೊಂದು ವಿಶ್ಲೇಷಣೆಯಂತೆ ಉತ್ತಮ ಆತ್ಮವನ್ನು ಪಡೆಯುವುದರಿಂದ ಬ್ರಾಹ್ಮಣನ ಶ್ರೇಷ್ಠತೆ ಹೆಚ್ಚುತ್ತದೆ ಎನ್ನುವುದು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಉತ್ತಮ ಜ್ಞಾನ ಹೊಂದಿದ ಮಗುವನ್ನು ಪಡೆಯಬೇಕಾದರೆ ತಂದೆಯಾದವನು ಹೋರಿ ಮತ್ತು ಗೂಳಿಗಳನ್ನು ಕಡಿದು ಮಾಂಸದ ಜೊತೆಗೆ ಅನ್ನತರ್ಪಣವನ್ನು ಜನರಿಗೆ ನೀಡಬೇಕೆಂದು ಹೇಳಲಾಗಿದೆ. ಇದರ ಪ್ರಕಾರ ಮನುವಿನ ಕಾಲದವರೆಗೆ ಬ್ರಾಹ್ಮಣರು ಗೋಮಾಂಸ ಭಕ್ಷಣೆ ತ್ಯಜಿಸಿದ ಯಾವ ಸೂಚನೆಗಳೂ ದೊರಕುವುದಿಲ್ಲ. ಉಪನಿಷತ್ತಿನಿಂದ ಮನುಸ್ಮೃತಿಯವರೆಗೆ ಸುಮಾರು ನಾನೂರು ವರ್ಷಗಳ ನಡುವೆಯೂ ಬ್ರಾಹ್ಮಣರು ಗೋಮಾಂಸವನ್ನು ಭಕ್ಷಿಸುತ್ತಿದ್ದರು ಎನ್ನುವುದಕ್ಕೆ ಮೇಲಿನ ವಿವರಗಳು ಆಧಾರವನ್ನು ಒದಗಿಸುತ್ತವೆ.

ಬ್ರಾಹ್ಮಣರು ಗೋಮಾಂಸ ಭಕ್ಷಣೆಯನ್ನು ಬಿಟ್ಟು ಗೋಪೂಜೆಯನ್ನು ಸಲ್ಲಿಸಲು ಪ್ರಾರಂಭಿಸಿದ್ದು ಬೌದ್ಧಧರ್ಮ ಮತ್ತು ಹಿಂದೂಧರ್ಮಗಳ ಮಧ್ಯದ ಘರ್ಷಣೆಯಿಂದಲೇ ಇರಬೇಕು. ಬ್ರಾಹ್ಮಣರು, ಬೌದ್ಧರ ಮೇಲೆ ತಮ್ಮ ಅಧಿಕಾರ ಮತ್ತು ಶ್ರೇಷ್ಠತೆಯನ್ನು ತೋರಿಸಿಕೊಳ್ಳಲು ಮೇಲಿನ ಕ್ರಮವನ್ನು ಕೈಗೊಂಡಿರಬೇಕು. ಭಾರತದ ಚರಿತ್ರೆಯಲ್ಲಿ ಬೌದ್ಧ ಧರ್ಮ ಆಳವಾಗಿ ಬೇರೂರತೊಡಗಿದಾಗ ಹಿಂದೂವಾದಿಗಳು ಚಿಂತಾಕ್ರಾಂತರಾಗಿರಬೇಕು. ಇದರ ವಿವರಣೆಗಳನ್ನು ಪೂರ್ಣವಾಗಿ ಇಲ್ಲಿ ವಿಶ್ಲೇಷಿಸಲು ಅಸಾಧ್ಯವಾದ ಕಾರಣ ಕೆಲವು ಮುಖ್ಯವಾದ ವಿವರಣೆಗಳನ್ನು ಮಾತ್ರ ನೀಡಲಾಗಿದೆ.

ಭಾರತದಾದ್ಯಂತ ಬೌದ್ಧಧರ್ಮ ಒಂದು ಕಾಲದಲ್ಲಿ ಪ್ರಚಲಿತವಾಗಿ ಹರಡಿಕೊಂಡಿದ್ದು, ಅದು ಬ್ರಾಹ್ಮಣರ ಶ್ರೇಷ್ಠತೆಯನ್ನು ಎಲ್ಲಾ ಕೋನಗಳಿಂದಲೂ ಹಿಂದೆಂದಿಗಿಂತಲೂ

ಹೆಚ್ಚಾಗಿ ಪ್ರಶ್ನಿಸುತ್ತ ಆಕ್ರಮಣ ಮಾಡತೊಡಗಿತು. ಬ್ರಾಹ್ಮಣ್ಯಕ್ಕೆ ಕುತ್ತು ಒದಗಿದ ಕಾರಣದಿಂದ ಬ್ರಾಹ್ಮಣರು ಜನಗಳ ಮಧ್ಯೆ ಮತ್ತು ರಾಜರ ಆಸ್ಥಾನಗಳಲ್ಲಿ ತಮ್ಮ ಘನತೆ ಮತ್ತು ಅಧಿಕಾರಗಳನ್ನು ಕಳೆದುಕೊಳ್ಳತೊಡಗಿದರು. ಜನರ ಮಧ್ಯೆ ಬೌದ್ಧಧರ್ಮ ಆಳವಾಗಿ ಬೇರೂರುತ್ತಿದ್ದಾಗ ಬ್ರಾಹ್ಮಣರು ಕೂಡ ಬೌದ್ಧಧರ್ಮದ ಪದ್ಧತಿಗಳನ್ನು ಅಳವಡಿಸಿಕೊಳ್ಳುವಂತಾಗಿತ್ತು. ಬುದ್ಧನು ಸಾವನ್ನಪ್ಪಿದ ನಂತರ ಬೌದ್ಧ ಅನುಯಾಯಿಗಳು ಬುದ್ಧನ ಶಿಲೆಗಳನ್ನು ಮತ್ತು ಸ್ತೂಪಗಳನ್ನು ನಿರ್ಮಿಸತೊಡಗಿದರು. ಇದನ್ನು ಸಹಿಸದ ಬ್ರಾಹ್ಮಣರು ವಿಷ್ಣು, ಬ್ರಹ್ಮ, ಶಿವ, ರಾಮ ಮತ್ತು ಕೃಷ್ಣರ ಮೂರ್ತಿಗಳನ್ನು ಸ್ಥಾಪಿಸಿ ದೇವಾಲಯಗಳನ್ನು ನಿರ್ಮಿಸತೊಡಗಿದರು. ಬೌದ್ಧಧರ್ಮದ ಕಡೆಗೆ ವಾಲುತ್ತಿದ್ದ ಜನರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವುದೇ ಇವರ ಉದ್ದೇಶವಾಗಿತ್ತು. ಮೂಲವಾಗಿ ಹಿಂದೂಗಳು ದೇವಾಲಯಗಳನ್ನು ಸ್ಥಾಪಿಸಲು ಪ್ರಾರಂಭಿಸಿದ್ದೆ ಬೌದ್ಧರನ್ನು ಅನುಕರಿಸುವ ಸಲುವಾಗಿ ಎಂದು ತಿಳಿದುಬರುತ್ತದೆ.

ಬ್ರಾಹ್ಮಣರು ಬೌದ್ಧ ಭಿಕ್ಷುಗಳ ಶ್ರೇಷ್ಠತೆಯನ್ನು ಮೀರಿ ಬೆಳೆಯಬೇಕಾದರೆ ಗೋಮಾಂಸ ಹಾಗೂ ಇತರ ಮಾಂಸಗಳ ಭಕ್ಷಣೆಯನ್ನು ಬಿಟ್ಟು ಶಾಕಾಹಾರಿಗಳಾಗ ಬೇಕಾಯಿತು. ಬ್ರಾಹ್ಮಣರು ಶಾಕಾಹಾರಿಗಳಾಗದಿದ್ದ ಪಕ್ಷದಲ್ಲಿ ಗೋಹತ್ಯೆಯಿಂದ ಸಮಾಜದಲ್ಲಿ ಕಳೆದುಕೊಂಡಿದ್ದ ಗೌರವವನ್ನು ಮರಳಿ ಪಡೆಯಲಾಗುತ್ತಿರಲಿಲ್ಲ. ಪ್ರಾಣಿಗಳ ವಧೆಯನ್ನು ಬೌದ್ಧರು ಪೂರ್ಣವಾಗಿ ವಿರೋಧಿಸುತ್ತಿದ್ದಂತೆ, ವ್ಯವಸಾಯ ಸಮಾಜದಲ್ಲಿ ಅವರಿಗೆ ಎಲ್ಲಿಲ್ಲದ ಗೌರವ ದೊರಕತೊಡಗಿತು. ಬೌದ್ಧ ಭಿಕ್ಷುಗಳು ಪ್ರಾಣಿಗಳನ್ನು ಯಜ್ಞಗಳಲ್ಲಿ ಬಲಿಕೊಡುವುದನ್ನು ಮಾತ್ರ ವಿರೋಧಿಸುತ್ತಿದ್ದರೇ ವಿನಾ ಶಾಕಾಹಾರಿಗಳಾಗಿರಲಿಲ್ಲ. ಬ್ರಾಹ್ಮಣರು ಶಾಕಾಹಾರಿಗಳಾಗಿ ಪರಿವರ್ತನೆಗೊಂಡಿದ್ದರಿಂದ ಬೌದ್ಧ ಭಿಕ್ಷುಗಳಿಗಿಂತ ಒಂದು ಹೆಜ್ಜೆ ಮುಂದೆ ಹೋದಂತಾಯಿತು. ಅಂದರೆ ಜನಸಾಮಾನ್ಯರ ಕಣ್ಣಲ್ಲಿ ಬೌದ್ಧ ಭಿಕ್ಷುಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗುವ ಉದ್ದೇಶದಿಂದ ಬ್ರಾಹ್ಮಣರು ಪೂರ್ಣ ಶಾಕಾಹಾರಿಗಳಾದರು. ಇಂದು ಪ್ರಪಂಚದ ಎಲ್ಲಾ ಜನಾಂಗಗಳು ಮಾಂಸಾಹಾರಿಗಳಾಗಿದ್ದರೆ, ಹಿಂದೂಗಳಲ್ಲಿನ ಬ್ರಾಹ್ಮಣರು ಮಾತ್ರ ಸಸ್ಯಾಹಾರಿಗಳು. ಆದರೂ ಉತ್ತರ ಭಾರತದ ಹಲವು ಭಾಗಗಳಲ್ಲಿರುವ ಬ್ರಾಹ್ಮಣರು ಮಾಂಸಾಹಾರಿಗಳಾಗಿದ್ದಾರೆ. ಕಾಶ್ಮೀರಿ ಬ್ರಾಹ್ಮಣರು, ಯು.ಪಿ. ಬ್ರಾಹ್ಮಣರು, ಬಂಗಾಲಿ ಬ್ರಾಹ್ಮಣರು, ಕರ್ನಾಟಕ ಪಶ್ಚಿಮ ಕಡಲತೀರದ ಕೊಂಕಣಿ ಬ್ರಾಹ್ಮಣರು ಮಾಂಸಾಹಾರಿಗಳಾಗಿದ್ದಾರೆ.

ಗೋಹತ್ಯೆ ಮಹಾಪಾಪ ಎನ್ನುವ ಪ್ರಜ್ಞೆಯನ್ನು ಬ್ರಾಹ್ಮಣರು ಹುಟ್ಟುಹಾಕಿ ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆದುಕೊಂಡರು. ಹಲವು ಸಂಶೋಧಕರು ತಿಳಿದಂತೆ ಅಶೋಕನು ಗೋಹತ್ಯೆಯನ್ನು ನಿಷೇಧಿಸಿದ್ದ ಎನ್ನುವುದು ಸರಿಯಲ್ಲ. ಬೌದ್ಧ ಧರ್ಮಿಗಳು ನಂಬಿದಂತೆ ಪ್ರಾಣಿಗಳ ವಧೆ ಪಾಪ, ಆದರೆ ಗೋಹತ್ಯೆ ಮಾತ್ರ ವಿಶೇಷವಾಗಿ ಪಾಪ ಎನ್ನುವ ನಂಬಿಕೆ ಅವರಲ್ಲಿರಲಿಲ್ಲ. ಆದುದರಿಂದ ಅಶೋಕನೂ ಕೂಡ ಗೋಹತ್ಯೆಯ ವಿಶೇಷವಾದ ಪಾಪ ಎನ್ನುವ ಮನೋಭಾವವನ್ನು ಹೊಂದಿರಲಿಲ್ಲ. ಹಿಂದೂ ಧರ್ಮದ ಚಾಂಪಿಯನ್ನರೆನ್ನುವ ಗುಪ್ತರು ಗೋಹತ್ಯೆ ಮಹಾಪಾಪ ಎಂಬ ನಿಯಮ ಮಾಡಿದ್ದರು. ಯಜ್ಞಗಳಲ್ಲಿ ಮಾತ್ರ ಎತ್ತುಗಳನ್ನು

ಬಲಿನೀಡಲು ಅಪ್ಪಣೆ ನೀಡಿರುವ ವಿಷಯ ಆಶ್ಚರ್ಯ ಹುಟ್ಟಿಸುವಂತಹದು ಎನ್ನುತ್ತಾರೆ ಡಿ. ಆರ್. ಭಂಡಾರ್‌ಕರ್.

ವೇದಗಳ ಪ್ರಕಾರ ಯಜ್ಞ ಮತ್ತು ಪ್ರಾಣಿಬಲಿ ಅವಶ್ಯಕವಾಗಿದ್ದರೂ ಬೌದ್ಧ ಧರ್ಮದ ಶ್ರೇಷ್ಠತೆಯನ್ನು ಹಿಮ್ಮೆಟ್ಟಿಸಲು ಪ್ರಾಣಿಬಲಿಯನ್ನು ತ್ಯಜಿಸಲಾಯಿತು. ಇದು ಬೌದ್ಧರ ವಿರುದ್ಧ ಶ್ರೇಷ್ಠತೆಯನ್ನು ಸಾರಲು ಬ್ರಾಹ್ಮಣರಿಗೆ ಅವಶ್ಯವೂ ಆಗಿತ್ತು. ಮುಂದಿನ ದಿನಗಳಲ್ಲಿ ಇತರ ಹಿಂದೂಗಳು ಪೂರ್ಣವಾಗಿ ಶಾಕಾಹಾರಿಗಳಾಗದೆ ಹೋದರೂ, ಮುಖ್ಯವಾಗಿ ಬ್ರಾಹ್ಮಣರನ್ನು ಅನುಸರಿಸಲು ಗೋಪೂಜೆಯನ್ನು ಮಾಡುತ್ತ ಗೋಮಾಂಸದ ಭಕ್ಷಣೆಯನ್ನು ತ್ಯಜಿಸಿದರು. ಬ್ರಾಹ್ಮಣೇತರರು ಗೋಮಾಂಸ ಭಕ್ಷಣೆಯನ್ನು ಮಾತ್ರ ತ್ಯಜಿಸಿ ಇನ್ನಿತರ ಪ್ರಾಣಿಗಳ ಮಾಂಸವನ್ನು ತಿನ್ನುವುದಕ್ಕೆ ಯಾವ ರೀತಿಯಲ್ಲೂ ಅಡ್ಡಿಯಿಲ್ಲದ ಕಾರಣದಿಂದ ಅದು ಎಂದಿನಂತೆ ಮುಂದುವರಿಯಿತು.

## ಅಧ್ಯಾಯ-11

ನಾನು ಒಂದು ಸಮಾಜದ ಪ್ರಗತಿಯನ್ನು ಅಳೆಯಲು ಮಹಿಳೆಯರ ಪ್ರಗತಿಯನ್ನು ಗಣನೆಗೆ ತೆಗೆದುಕೊಳ್ಳುತ್ತೇನೆ

-ಅಂಬೇಡ್ಕರ್.

# ಹಿಂದೂ ಹಳ್ಳಿಯ ವ್ಯವಸ್ಥೆ ಮತ್ತು ಅಸ್ಪೃಶ್ಯತೆ

ಅಸ್ಪೃಶ್ಯನಾದವನು ತನ್ನ ಮುಂಗೈ ಮೇಲಾಗಲಿ, ಕೊರಳಲ್ಲಾಗಲಿ ಒಂದು ಕರಿಯ ದಾರವನ್ನು ಕಟ್ಟಿಕೊಳ್ಳಬೇಕು. ಹಿಂದೂಗಳು ಅರಿಯದೆ ಅವನನ್ನು ಮುಟ್ಟಿ ಮೈಲಿಗೆಗೆ ಗುರಿಯಾಗದೆ ಇರುವುದಕ್ಕೆ ಇದೊಂದು ಗುರುತು. ಹಾಗೆಯೇ ಅವನು ತನ್ನ ಸೊಂಟಕ್ಕೊಂದು ಕಸಪೊರಕೆಯನ್ನು ಕಟ್ಟಿಕೊಂಡು ಬೀದಿಯಲ್ಲಿ ಓಡಾಡಬೇಕು. ತಾನು ನಡೆದು ಹೋದಂತೆಲ್ಲ ಹಿಂದಿನಿಂದ ಆ ಪೊರಕೆಯಿಂದ ತನ್ನ ಹೆಜ್ಜೆ ಗುರುತುಗಳನ್ನು ಗುಡಿಸುತ್ತಾ ಮುಂದಕ್ಕೆ ಹೋಗಬೇಕು. ಇಲ್ಲದೇ ಹೋದರೆ ಆತನು ಮೆಟ್ಟಿಹೋದ ಹೊಲೆದೂಳು ಯಾರಾದರೊಬ್ಬ ಉಚ್ಚಜಾತಿಯವನ ಪಾದಗಳಿಗೆ ತಗುಲಿದರೆ ಮೈಲಿಗೆ ಆಗಿಬಿಡುತ್ತದೆ ಎನ್ನುವುದೇ ಇದರ ಮೂಲ ಉದ್ದೇಶ. ಅಸ್ಪೃಶ್ಯನಾದವನು ತನ್ನ ಕೊರಳಲ್ಲಿ ಒಂದು ಮಣ್ಣು ಮಡಿಕೆಯನ್ನು ಸಹ ಕಟ್ಟಿಕೊಂಡಿರಬೇಕು, ಉಗುಳುವುದಾದರೆ ಆ ಮಡಿಕೆಯಲ್ಲಿಯೇ ಉಗುಳಬೇಕು. ಹೀಗೆ ಮಾಡದೇ ಬೀದಿಯಲ್ಲಿ ಉಗುಳಿಬಿಟ್ಟರೆ ಉಗುಳುಬಿದ್ದ ಆ ಪವಿತ್ರ ನೆಲದ ಮೇಲೆ ಉಚ್ಚ ಜಾತಿಯ ಹಿಂದೂ ಅರಿಯದೆ ಹೆಜ್ಜೆಯಿಟ್ಟರೆ ಮೈಲಿಗೆಯಾಗಿಬಿಡುತ್ತಾನೆ ಎನ್ನುವುದೇ ಈ ಮುನ್ನೆಚ್ಚರಿಕೆಗೆ ಕಾರಣ. ಇದು ಕೇವಲ ಐದಾರು ದಶಕಗಳ ಹಿಂದಿನ ಹಿಂದೂ ಹಳ್ಳಿಯ ಒಂದು ಸಾಮಾನ್ಯ ಚಿತ್ರಣ.

ಇಪ್ಪತ್ತನೇ ಶತಮಾನದ ಆರಂಭದಲ್ಲಿ ದುರ್ಬಲ ವರ್ಗಗಳ ಪರಮ ಸ್ನೇಹಿತನೆಂಬ ಅಬೆ ದುಬ್ವಾ ಚೆನ್ನೈ ಪ್ರಾಂತ್ಯದ ಪರಯ ಜನರನ್ನು ಕುರಿತು ಹೀಗೆ ಹೇಳುತ್ತಾನೆ: 'ಸ್ಥಳೀಯರಿಗೆ ಪರಯರ ವಿಚಾರದಲ್ಲಿ ಅಸಹ್ಯವೆನಿಸುವ ಕಾರಣವೇನೆಂದರೆ ಅವರು ತಿನ್ನುವ ಆಹಾರ. ಕೊಳೆತ ಮಾಂಸದ ವಾಸನೆಗೆ ಆಕರ್ಷಿತರಾಗುವ ಇವರು ಮಾಂಸಕ್ಕಾಗಿ ನಾಯಿ, ನರಿ, ಕಾಗೆ ಮುಂತಾದ ಮಾಂಸಾಹಾರಿ ಪ್ರಾಣಿಗಳೊಂದಿಗೆ ಸ್ಪರ್ಧೆಗಿಳಿಯುತ್ತಾರೆ. ಅರ್ಧ ಕೊಳೆತ ಆ ಮಾಂಸವನ್ನು ತಮ್ಮ ಗುಡಿಸಿಲುಗಳಿಗೆ ತೆಗೆದುಕೊಂಡು ಬಂದು ಅದಕ್ಕೆ ಯಾವ ಮಸಾಲೆಯನ್ನೂ ಸೇರಿಸದೇ ಜೊತೆಗೆ ಅನ್ನವೂ ಇಲ್ಲದೆ ಹಾಗೆಯೇ ತಿಂದುಹಾಕುತ್ತಾರೆ. ಆ ಪ್ರಾಣಿ ಯಾವ ರೋಗದಿಂದ ಸತ್ತಿದೆ ಎಂಬ ಅರಿವೂ ಅವರಿಗೆ ಇರುವುದಿಲ್ಲ. ಜೊತೆಗೆ ಅದನ್ನು ಬಿಸಿಲಿನಲ್ಲಿ ಒಣಗಿಸಿಟ್ಟು

ಆಹಾರವಿಲ್ಲದಿದ್ದಾಗ ಅದನ್ನೇ ತಿನ್ನುತ್ತಾರೆ. ಮಾಂಸದ ತೋರಣಗಳು ಅವರ ಗುಡಿಸಿಲುಗಳಲ್ಲಿ ನೇತಾಡುತ್ತಿರುತ್ತವೆ, ಇದರ ವಾಸನೆ ಪರಯರಿಗೆ ಅಸಹ್ಯವೆನಿಸುವುದಿಲ್ಲ. ಹಳ್ಳಿಯ ಸಮೀಪದಲ್ಲಿ ಹಾದುಹೋಗುವ ಜನರು ಆ ವಾಸನೆಯನ್ನು ಗ್ರಹಿಸಿ ಅಲ್ಲಿ ವಾಸಿಸುವ ಜನರು ಯಾವ ಜಾತಿಯವರು ಎಂಬುದನ್ನು ಸುಲಭವಾಗಿ ತಿಳಿದುಕೊಳ್ಳುತ್ತಾರೆ. ಇವರು ಕೊಳೆತ ಮಾಂಸವನ್ನು ತಿನ್ನುವುದಕ್ಕೆ ಕಾರಣ ಅವರಿಗೆ ತಿನ್ನಲು ಬೇರೆ ಏನೂ ಇಲ್ಲ. ಅವರು ಅಸ್ಪೃಶ್ಯರೆಂಬ ಕಾರಣ ಅವರಿಗೆ ಹೊಟ್ಟೆ ಹೊರೆಯಲು ಯಾವ ವೃತ್ತಿಯೂ ದೊರೆಯುತ್ತಿಲ್ಲ. ಎಲ್ಲಾ ಕಸುಬುಗಳು ಅವರ ಪಾಲಿಗೆ ಇಲ್ಲದಂತಾಗಿವೆ. ಅವರು ಕೈಗೊಳ್ಳಬೇಕಾದ ವ್ಯಾಪಾರ ಯಾವುದೂ ಇಲ್ಲ. ಭೂಮಿಯಲ್ಲಿ ದುಡಿದು ಜೀವಿಸೋಣವೆಂದರೆ ಅವರಿಗೆ ಭೂಮಿಯೇ ಇಲ್ಲ.' ಇದು ಅಬೆ ದುಬ್ವಾ ನೀಡಿರುವ ಒಂದು ವಿಶ್ಲೇಷಣೆ.

ಇಪ್ಪತ್ತನೇ ಶತಮಾನದ ಅಂತ್ಯದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗದ ಅಧ್ಯಕ್ಷ ಎಚ್. ಹನುಮಂತಪ್ಪನವರ 1994–95, 95–96ನೇ ಸಾಲಿನ ವರದಿಯ ಸಾರಾಂಶ ಹೀಗಿದೆ: ಸಂವಿಧಾನ ನಿಷೇಧಿಸಿರುವ ಅಸ್ಪೃಶ್ಯತೆಯ ಆಚರಣೆ ನಾನಾ ಭಾಗಗಳಲ್ಲಿ ಇಂದಿಗೂ ಜೀವಂತವಾಗಿದೆ. ತಮಿಳುನಾಡಿನಲ್ಲಿ ಈ ನಿಮಿಷದಲ್ಲಿಯೂ ಪರಿಶಿಷ್ಟ ಜಾತಿಯ ಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳನ್ನು ನಡೆಸಲಾಗುತ್ತಿದೆ. ಇಂತಹ ಶಾಲೆಗಳ ಸಂಖ್ಯೆ ಒಂದೆರಡಲ್ಲ, 1231. 'ಆದಿದ್ರಾವಿಡರ್ ಪಲ್ಲಿಕೂಡಂ' ಎಂದೇ ಈ ಶಾಲೆಗಳನ್ನು ಕರೆಯಲಾಗುತ್ತಿದ್ದು ಪರಿಶಿಷ್ಟರ ಇತರೆ ಅಭಿವೃದ್ಧಿ ಯೋಜನೆಗಳಿಗಾಗಿ ಬಳಸಬೇಕಿರುವ ಹಣವನ್ನು ಈ ಶಾಲೆಗಳಿಗಾಗಿ ಉಪಯೋಗಿಸಲಾಗುತ್ತಿದೆ. ವರದಿಯ ಪ್ರಕಾರ ವಿವಾಹದ ಸಂದರ್ಭದಲ್ಲಿಯೂ ಕೂಡ ಹಳ್ಳಿಗಳಲ್ಲಿ ಪರಿಶಿಷ್ಟ ಜಾತಿಯ ಮದುವಣಿಗರು ಕುದುರೆಯನ್ನೇರಿ ಮೆರವಣಿಗೆ ಹೋಗುವಂತಿಲ್ಲ.

ದೇಶದಲ್ಲಿ 2011ರ ಜನಗಣತಿಯ ಪ್ರಕಾರ 1,80,657 ಕುಟುಂಬಗಳು (ಸುಮಾರು 13 ಲಕ್ಷ ಜನರು) ತೆರೆದ ಶೌಚಾಲಯ ಅಥವಾ ಪಾಯಿಖಾನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರಿಗೆ ಯಾವುದೇ ಬದುಕಿನ ಆಧಾರ (ಬೇರೆ ಕೆಲಸ, ನೆಲ) ಇಲ್ಲದೆ ಇಂತಹ ಹೀನ ಕೆಲಸದಲ್ಲಿ ತಲೆತಲಾಂತರಗಳಿಂದ ತೊಡಗಿಕೊಂಡಿದ್ದಾರೆ. 1993ರಲ್ಲಿ ಪೊರಕೆ ಮತ್ತು ತಗಡುಗಳ ಮೂಲಕ ಕೈಗಳಲ್ಲಿ ಯಾವುದೇ ಸುರಕ್ಷಿತ ಕವಚಗಳನ್ನೂ ಹಾಕಿಕೊಳ್ಳದೆ ಶೌಚಾಲಯಗಳಲ್ಲಿ ಕೆಲಸ ಮಾಡುವುದನ್ನು ಸರಕಾರ ನಿಷೇಧಿಸಿದೆ. ಆದರೆ ಅದು ಇಂದಿಗೂ ಹಾಗೆಯೇ ಮುಂದುವರಿದಿದೆ. ಚರಟವನ್ನು ಬಕೆಟ್/ಬಾಂಡ್ಲಿಗಳಲ್ಲಿ ಕೆಲವು ಕಿ.ಮೀ.ಗಳ ದೂರ ತಲೆಯ ಮೇಲೆ ಹೊತ್ತುಕೊಂಡು ಸಾಗಿಸುವುದು ಉಂಟು.

ದೇಶಕ್ಕೆ ಸ್ವಾತಂತ್ರ್ಯ ಬಂದಿದ್ದರೂ ಅಸ್ಪೃಶ್ಯರಿಗೆ ಮಾತ್ರ ಸ್ವಾತಂತ್ರ್ಯ ಬರಲೇ ಇಲ್ಲ. ಈ ಅಮಾನವೀಯ ಕೆಲಸದಲ್ಲಿ ತೊಡಗಿಕೊಂಡಿರುವುದರಿಂದ ಇವರ ಮಕ್ಕಳು ಶಾಲೆಗೆ ಹೋಗದೇ ವಿದ್ಯಾಭ್ಯಾಸದಿಂದ ವಂಚಿತರಾಗುತ್ತಿದ್ದಾರೆ. ಮಕ್ಕಳು ಶಾಲೆಗೆ ಹೋದರೂ ಅವರನ್ನು ದೂರ ಕೂರಿಸುವುದು, ಅವರನ್ನು ಇತರ ಮಕ್ಕಳು ಮತ್ತು ಅಧ್ಯಾಪಕರು ಗೇಲಿ ಮಾಡುವುದರಿಂದ ಅವರು ಅವಮಾನಕ್ಕೆ ಒಳಗಾಗಿ ಶಾಲೆಗೆ ಹೋಗದೆ ತಪ್ಪಿಸಿಕೊಳ್ಳುತ್ತಾರೆ. ದೇಶದಲ್ಲಿಯೇ ಹೆಚ್ಚು ಜನರು ಈ ಕೆಲಸದಲ್ಲಿ ತೊಡಗಿಕೊಂಡಿರುವುದು ಮಹಾರಾಷ್ಟ್ರ

(63,713 ಕುಟುಂಬಗಳು)ದಲ್ಲಿ. ಅನಂತರ ಮಧ್ಯಪ್ರದೇಶ, ಉತ್ತರ ಪ್ರದೇಶ, ತ್ರಿಪುರಾ ಮತ್ತು ಕರ್ನಾಟಕ ಪಟ್ಟಿಯಲ್ಲಿ ಮೊದಲ ಐದು ಸ್ಥಾನಗಳಲ್ಲಿವೆ.

ನೂರಕ್ಕೆ 90ರಷ್ಟು ಮಹಿಳೆಯರೆ ಪಾಯಿಖಾನೆಗಳಲ್ಲಿ ಕೆಲಸ ಮಾಡುತ್ತಾರೆ. ತಮ್ಮ ಮಹಿಳಾ ಸಂಘಟನೆಗಳಿಗೆ ಇದು ಮುಖ್ಯ ವಿಷಯವಲ್ಲ. ಅವರಿಗೆ ಇದಕ್ಕಿಂತ ಮುಖ್ಯ ವಿಷಯವೆಂದರೆ ಉಡುಗೆ ತೊಡುಗೆಗಳನ್ನು ತೊಡುವುದರಲ್ಲಿ ಪೂರ್ಣ ಸ್ವಾತಂತ್ರ್ಯ ಬೇಕು ಎನ್ನುವುದು. ಹುಡುಗಿಯರು ಅರೆಕೊರೆ ಬಟ್ಟೆಗಳನ್ನು ತೊಟ್ಟು ಓಡಾಡುವ ಸಮಯದಲ್ಲಿ ಕೀಟಲೇ ಮಾಡುವ ಯುವಕರನ್ನು ಪೊಲೀಸರು ಹಿಡಿದು ಥಳಿಸಬೇಕು ಮತ್ತು ಕಟ್ಟುನಿಟ್ಟಾದ ಕಾನೂನುಗಳನ್ನು ಸರ್ಕಾರ ತರಬೇಕೆನ್ನುವ ವಿಷಯದಲ್ಲಿ ಹೋರಾಟ ನಡೆಸುತ್ತಿದ್ದಾರೆ. ಈಗೀಗಂತು ಹೆಣ್ಣುಮಕ್ಕಳಿಗೆ ಸರ್ಕಾರ ನೀಡಿರುವ ಹಕ್ಕುಗಳನ್ನು ಕೆಲವರು ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಅಂತೂ ದಲಿತ ಹೆಣ್ಣುಮಕ್ಕಳನ್ನು ಈ ಅಮಾನುಷ ಪ್ರವೃತ್ತಿಯಿಂದ ಬಿಡಿಸುವುದಕ್ಕೆ ಯಾವ ಮಹಿಳಾ ಸಂಘಟನೆಗಳೂ ಮುಂದೆ ಬರುತ್ತಿಲ್ಲ. ಸರ್ಕಾರದಿಂದ ಒಂದು ಕಟ್ಟುನಿಟ್ಟಾದ ಕಾನೂನನ್ನು ದೇಶದಾದ್ಯಂತ ಏಕರೂಪವಾಗಿ ಕಾರ್ಯರೂಪಕ್ಕೆ ತರಲು ಇದುವರೆಗೂ ಆಗಿಲ್ಲ. ಅಥವಾ ಮಾಡಲು ಮನಸ್ಸಿಲ್ಲವೊ ಗೊತ್ತಾಗುತ್ತಿಲ್ಲ. ರಾಜ್ಯಗಳ ವಿಧಾನ ಸಭೆಗಳಲ್ಲಿ, ದೆಹಲಿಯ ಪಾರ್ಲಿಮೆಂಟ್‌ನಲ್ಲಿ ಅಸಂಖ್ಯ ದಲಿತ ಪ್ರತಿನಿಧಿಗಳು ಬಿಳಿ ಬಟ್ಟೆಗಳನ್ನು ಹಾಕಿಕೊಂಡು 71 ವರ್ಷಗಳಿಂದ ಭಾಷಣಗಳನ್ನು ಮಾಡುತ್ತಲೇ ಇದ್ದಾರೆ. ಕೋಟಿಗಟ್ಟಲೆ ಲೂಟಿ ಮಾಡಿ ಕುಳಿತುಕೊಂಡಿದ್ದಾರೆ.

ಸವರ್ಣೀಯರು ಹಾದುಹೋಗುವ ಸಂದರ್ಭಗಳಲ್ಲಿ ಪರಿಶಿಷ್ಟರು ತಮ್ಮದೇ 'ಚಾರ್‌ಪಾಯಿ'ಗಳ (ಹಗ್ಗದ ಮಂಚ) ಮೇಲೆ ಕುಳಿತುಕೊಳ್ಳುವಂತಿಲ್ಲ. ಪರಿಶಿಷ್ಟ ಜಾತಿಗಳ ಜನರಿಗೆ ಕ್ಷೌರ ಮಾಡಲು ಆಯುಷ್ಕರ್ಮಿಗಳು ನಿರಾಕರಿಸುತ್ತಾರೆ. ಆದರೆ ಇವರು, ನಮ್ಮ ಜಾತಿಯನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಿ ಮೀಸಲಾತಿ ನೀಡಿ ಎನ್ನುತ್ತಿದ್ದಾರೆ. ಚಹ ಅಂಗಡಿಗಳು ಮತ್ತು ಡಾಬಾಗಳಲ್ಲಿ ಪರಿಶಿಷ್ಟರಿಗೆಂದೇ ಪ್ರತ್ಯೇಕ ತಟ್ಟೆ ಲೋಟಾಗಳನ್ನು ಇಡಲಾಗಿದೆ. ಹಳ್ಳಿಯ ಸಾರ್ವಜನಿಕ ಬಾವಿಗಳಿಂದ ಮತ್ತು ಕೊಳವೆ ಬಾವಿಗಳಿಂದ ಪರಿಶಿಷ್ಟರು ನೀರು ತೆಗೆದುಕೊಳ್ಳುವ ಪರಿಸ್ಥಿತಿಯಲ್ಲಿಲ್ಲ. ತೆಗೆದುಕೊಂಡರೆ ಅವರನ್ನು ಬೆತ್ತಲೆ ಮಾಡಿ ಮೆರವಣಿಗೆ ಮಾಡುವ ಮತ್ತು ಮಾರಣಾಂತಿಕ ಹಲ್ಲೆಗಳು ಈಗಲೂ ನಡೆಯುತ್ತಿವೆ. ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ಆವಾಸ್‌ನಂತಹ ಸರ್ಕಾರೀ ವಸತಿ ಯೋಜನೆಗಳಡಿ ಪರಿಶಿಷ್ಟರಿಗೆ ಪ್ರತ್ಯೇಕವಾಗಿ ಕೇರಿಗಳನ್ನು ನಿರ್ಮಿಸಿ ಅವರನ್ನು ಇನ್ನಷ್ಟು ದೂರ ಇಡಲಾಗುತ್ತಿದೆ. ಜಾತಿ ಗಲಭೆಗಳಂತೂ ಲೆಕ್ಕವೇ ಇಲ್ಲ. ಪಟ್ಟಭದ್ರ ಹಿತಾಸಕ್ತಿಗಳ ಮನಸ್ಸಿನಾಳದಲ್ಲಿ ಬೇರು ಬಿಟ್ಟಿರುವ ಪೂರ್ವಗ್ರಹಗಳೇ ಈ ಎಲ್ಲಾ ಗಲಭೆಗಳಿಗೆ ಕಾರಣವಾಗಿದೆ.

ಈ ಪ್ರವೃತ್ತಿ ದಲಿತರನ್ನು ಸಮಾಜದಿಂದ ದೂರ ಮಾಡುತ್ತಿದ್ದು, ದಲಿತರನ್ನು ಉಗ್ರಗಾಮಿ ಮತ್ತು ವಿಚ್ಛಿದ್ರಕಾರಕ ಮನೋವೃತ್ತಿಗೆ ತಳ್ಳುವ ಅಪಾಯವಿದೆ. ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶ ಹಾಗೂ ತಮಿಳುನಾಡಿನಲ್ಲಿ ಈ ಬೆಳವಣಿಗೆ ಈಗಾಗಲೇ ಗೋಚರಿಸುತ್ತಿದೆ. ಅಷ್ಟೇಕೆ ಒಳ್ಳೆ ಜನರಿರುವ ರಾಜ್ಯ, ಮಾದರಿ ರಾಜ್ಯ ಎನ್ನುವ ಕರ್ನಾಟಕ ಯಾವ ರೀತಿಯಲ್ಲೂ ಹಿಂದೆ ಬಿದ್ದಿಲ್ಲ. ಇಡೀ ದೇಶದಲ್ಲಿಯೇ 100ಕ್ಕೆ ಶೇಕಡ 94

ಗ್ರಾಮೀಣ ದೇವಾಲಯಗಳಲ್ಲಿ ದಲಿತರಿಗೆ ಪ್ರವೇಶ ನೀಡದ ಕಠೋರ ರಾಜ್ಯವಾಗಿದೆ. ದಲಿತರು ಸಂಘಟನೆಗೊಳ್ಳುವ ಅಥವಾ ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವ ಪ್ರಯತ್ನಗಳನ್ನು ತಳೆದಾಗಲೆಲ್ಲ ದಲಿತರ ಹತ್ಯೆ, ಸಾಮೂಹಿಕ ಅತ್ಯಾಚಾರ, ಬಸ್ತಿಗಳ ಲೂಟಿ, ಅಗ್ನಿಸ್ಪರ್ಶದಂತಹ ಪ್ರತೀಕಾರ ಕ್ರಮಗಳಿಗೆ ಜಮೀನ್ದಾರಿ, ಪಾಳೇಗಾರಿ ಶಕ್ತಿಗಳು ಮತ್ತು ಹಿಂದೂ ಸಂಘಟನೆಗಳು ಮುಂದಾಗಿವೆ. ಬಿಹಾರದ 'ರಣವೀರ' ಅಂದರೆ ಉಗ್ರ ಪಡೆ ಇದಕ್ಕಾಗಿಯೆ ಹುಟ್ಟಿಕೊಂಡಿದೆ.

ಸುಳ್ಳು ಜಾತಿ ಪತ್ರಗಳನ್ನು ಪಡೆದು ಬಡಪರಿಶಿಷ್ಟರ ಸವಲತ್ತು ಸೌಲಭ್ಯಗಳನ್ನು ಅಪಹರಿಸುವ ಆತಂಕಕಾರಿ ಬೆಳವಣಿಗೆ ಎಲ್ಲೆಲ್ಲೂ ಕಂಡುಬಂದಿದೆ. ಕಸ ಗುಡಿಸುವವರು, ಜವಾನರು, ಗುಮಾಸ್ತರು ಮುಂತಾದ ಕೆಳದರ್ಜೆಯ ಹುದ್ದೆಗಳಲ್ಲಿ ಸ್ವಲ್ಪಮಟ್ಟಿಗೆ ಪರಿಶಿಷ್ಟರಿಗೆ ಪ್ರಾತಿನಿಧ್ಯ ದೊರೆತಿದೆ. ಆದರೆ ಇತ್ತೀಚೆಗೆ ಅದರಲ್ಲೂ ಇತರ ಜಾತಿಗಳ ಜನರು ಖೋಟಾ ಜಾತಿಪತ್ರಗಳನ್ನು ತೋರಿಸಿ ಸೇರಿಕೊಳ್ಳುತ್ತಿದ್ದಾರೆ. ವಿಶ್ವವಿದ್ಯಾನಿಲಯಗಳು ಮತ್ತು ನ್ಯಾಯಾಲಯಗಳಲ್ಲಿ ಪರಿಶಿಷ್ಟರಿಗೆ ದೊರೆತಿರುವುದು ಬಹುತೇಕ ಸೊನ್ನೆ ಪ್ರಾತಿನಿಧ್ಯ. ಪರಿಶಿಷ್ಟ ವಿದ್ಯಾರ್ಥಿಗಳಿಗಾಗಿ ರೂಪಿಸಿರುವ ವಿದ್ಯಾರ್ಥಿ ವೇತನ, ಹಾಸ್ಟೆಲ್ ಸೌಲಭ್ಯಗಳು, ಪುಸ್ತಕ ಬ್ಯಾಂಕ್ ಮುಂತಾದ ಯೋಜನೆಗಳಿಗೆ ನೀಡಲಾಗುತ್ತಿರುವ ಹಣ ಬಹಳ ಕಡಿಮೆ ಮತ್ತು ಅವುಗಳ ಅನುಷ್ಠಾನ ತೃಪ್ತಿಕರವಾಗಿಲ್ಲ. ಪರಿಶಿಷ್ಟರಿಗೆ ನೀಡುತ್ತಿರುವ ವಿದ್ಯಾರ್ಥಿ ವೇತನ ಅವರ ಮೂಲಭೂತ ಅಗತ್ಯಗಳಿಗೆ ಏನೇನೂ ಸಾಕಾಗುತ್ತಿಲ್ಲ. ಪರಿಶಿಷ್ಟರ ಪಂಗಡಗಳಂತೂ ದಾರಿದ್ರ್ಯ ಮತ್ತು ನಿರಕ್ಷರತೆಯಲ್ಲಿ ಹೂತುಹೋಗಿವೆ. ಹಸಿವು, ಪೌಷ್ಟಿಕಾಂಶದ ಕೊರತೆಯಿಂದಾಗಿ ಪರಿಶಿಷ್ಟ ಜಾತಿ, ಪಂಗಡಗಳ ಮಕ್ಕಳು ಮತ್ತು ಮಹಿಳೆಯರು ಸಾಯುತ್ತಿರುವ ಪ್ರಕರಣಗಳು ವರದಿಯಾಗುತ್ತಲೇ ಇವೆ. ಮಲೇರಿಯಾ, ಕ್ಷಯರೋಗ ಮತ್ತು ನೀರಿನಿಂದ ಬರುವ ಇತರೆ ರೋಗಗಳು ಪರಿಶಿಷ್ಟ ಜಾತಿ, ಪಂಗಡಗಳ ಜನರನ್ನು ಹಿಂಡುತ್ತಿವೆ. ಗುಡ್ಡಗಾಡು ಜನರಿಗೆ ಸಾಮಾಜಿಕ, ಆರ್ಥಿಕ ಸೌಕರ್ಯಗಳನ್ನು ಒದಗಿಸಲಾಗಿಲ್ಲ. ಇದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗದ ಅಧ್ಯಕ್ಷರ 1994-95, 1995-96ನೇ ಸಾಲಿನ ವರದಿಯ ಸಾರಾಂಶ.

ಕಳೆದ 71 ವರ್ಷಗಳಿಂದ ಕೇಂದ್ರದಲ್ಲಿ ಸರ್ಕಾರ ನಡೆಸುತ್ತಿದ್ದ ಪಕ್ಷಗಳು ದೇಶದಾದ್ಯಂತ ಸಾವಿರಾರು ಪರಿಶಿಷ್ಟ ಜಾತಿ ಮತ್ತು ವರ್ಗಗಳ ಬಾಲಕ ಬಾಲಕಿಯರ ವಸತಿ ಶಾಲೆಗಳಿಗೆ ನೀಡುತ್ತಿದ್ದ ಅನುದಾನವನ್ನು ಇಂದಿನ ಸರಕಾರ ಹಠಾತ್ತನೆ ನಿಲ್ಲಿಸಿದೆ, ಕಡಿತಗೊಳಿಸುತ್ತಿದೆ. ಕಾರಣ ಕೇಳಿದರೆ ಅನುದಾನ ಶಾಲೆಗಳನ್ನು ಸರಿಯಾಗಿ ನಡೆಸುತ್ತಿಲ್ಲ ಎನ್ನುವ ಸವಕಲು ಕಾರಣ ನೀಡಿದೆ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರ ಕೆಳಮಟ್ಟದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮಕ್ಕಳಿಗೆ ಕೇಂದ್ರ ಸರಕಾರದಿಂದ ಅನುದಾನ ಪಡೆಯುತ್ತಿದ್ದ ಈ ವಸತಿ ಶಾಲೆಗಳು ತುಸು ನೆಮ್ಮದಿ ನೀಡಿದ್ದವು. ಈ ವಸತಿ ಶಾಲೆಗಳಲ್ಲಿ ಕಲಿತ ಕೆಲವು ಮಕ್ಕಳು ಅರ್ಹತೆಯನ್ನು ಪಡೆದುಕೊಳ್ಳುತ್ತಿದ್ದರು. ಇಂದಿನ ಸರ್ಕಾರ ಅದಕ್ಕೂ ಕುತ್ತು ತಂದಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಬೆಳವಣಿಗೆಯ ಬುಡಕ್ಕೆ ಅದು ಕೊಡಲಿ ಹಾಕಿದೆ. ಪ್ರಸ್ತುತದ ಬೆಳವಣಿಗೆಗಳು 1994-95, 1995-96ರ ಸಾಲಿನ ವರದಿಯ ಸಾರಾಂಶಕ್ಕಿಂತ ಏನೇನೂ ಮುಂದುವರಿದಿಲ್ಲ.

ಪ್ರಸ್ತುತ ಮಹಾನಗರಗಳಲ್ಲಿ ಯಾವುದೇ ಹೋಟಲಿನಲ್ಲಾಗಲಿ, ಸಿನಿಮಾ

ಹಾಲಿನಲ್ಲಾಗಲಿ, ಬಸ್ಸುಗಳು ಮತ್ತು ಪಾಯಿಖಾನೆಗಳಲ್ಲಾಗಲಿ ಜಾತಿ, ಅಸ್ಪೃಶ್ಯತೆ ಕಾಣಿಸುತ್ತಿಲ್ಲ. ಆದರೆ ಕಚೇರಿ, ಕಾರ್ಖಾನೆಗಳಲ್ಲಿ, ಬಾಡಿಗೆಗೆ ಮನೆ ಬೇಕಾದಲ್ಲಿ, ಪ್ರೀತಿ, ಪ್ರೇಮ, ಮದುವೆ ಸಂದರ್ಭಗಳಲ್ಲಿ ಜಾತಿ ದಿಗ್ಗನೆ ಎದ್ದು ನಿಲ್ಲುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಪೂರ್ವಕಾಲದ ಪಳೆಯುಳಿಕೆಗಳಂತೆ ಇಂದಿಗೂ ಜಾತಿ, ಅಸ್ಪೃಶ್ಯತೆಯ ವ್ಯವಸ್ಥೆ ಎಲ್ಲಾ ಸ್ತರಗಳಲ್ಲೂ ಹಾಗೇ ಉಳಿದುಕೊಂಡಿವೆ. ಹೆಚ್ಚೆಂದರೆ ಪೂರ್ವ ಕಾಲದಲ್ಲಿದ್ದಂತೆ ಸತ್ತ ಹೆಣಗಳ ಮೇಲಿನ ಬಟ್ಟೆಗಳನ್ನೇ ಉಪಯೋಗಿಸಬೇಕೆನ್ನುವ ನಿರ್ಬಂಧವಾಗಲಿ, ಉಚ್ಚಜಾತಿಯವರಿಂದ ಬೀದಿಗಳಲ್ಲಿ ಓಡಾಡುವಾಗ ಸೊಂಟದಲ್ಲಿ ಕಸಪೊರಕೆ, ಕೊರಳಲ್ಲಿ ಮಡಕೆ ಕಟ್ಟಿಕೊಂಡು ಓಡಾಡಬೇಕೆನ್ನುವ ನಿರ್ಬಂಧಗಳು ಇಲ್ಲ ಎಂದು ಧಾರಾಳವಾಗಿಯೇ ಹೇಳಬಹುದು.

ಹಸಿವು, ಬಡತನ, ಮೂಢನಂಬಿಕೆಗಳು ಹಾಗೇ ಉಳಿದುಕೊಂಡಿದ್ದು, ದಲಿತರು ಸಾಮಾಜಿಕ ಪರಿವರ್ತನೆಗಾಗಿ ಯಾವುದೇ ರೀತಿಯ ಬದಲಾವಣೆಯನ್ನು ಅಪೇಕ್ಷಿಸಿದರೂ ಉಚ್ಚಜಾತಿಯವರು, ಬಲಿತ ಶೂದ್ರರ ಸಮೇತ ಅಸ್ಪೃಶ್ಯರ ಮೇಲೆ ಎಂತಹ ಹೀನ ಕೃತ್ಯವನ್ನಾದರೂ ನಡೆಸುತ್ತಾರೆ. ಗುಡಿಸಲುಗಳಿಗೆ ಬೆಂಕಿ ಹಚ್ಚುವುದು, ಸಾಮೂಹಿಕ ಹತ್ಯೆ, ಯಾವುದಕ್ಕೂ ಹಿಂಜರಿಯುವುದಿಲ್ಲ. ಇತ್ತೀಚೆಗೆ ಸವರ್ಣೀಯರಿಗಿಂತ ಶೂದ್ರರ ದಬ್ಬಾಳಿಕೆಗಳೇ ದಲಿತರ ಮೇಲೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿವೆ. ಪ್ರಸ್ತುತ ದೇಶವನ್ನು ಅವರೆ ಗುತ್ತಿಗೆಗೆ ತೆಗೆದುಕೊಂಡಂತಿದೆ. ದಕ್ಷಿಣ ಭಾರತದಲ್ಲಿರುವ ಕಮ್ಮ, ರೆಡ್ಡಿ, ಲಿಂಗಾಯಿತ, ಗೌಡ, ನಾಯರ್, ಮೊದಲಿಯಾರ್, ಗೌಂಡರ್ ಇತ್ಯಾದಿ ಶೂದ್ರ ಜಾತಿಗಳು ಉತ್ತರದಲ್ಲಿರುವ ಕಾಯಸ್ಥ ಜಾತಿಗಳಿಗೆ ಸಮಾನವಾದ ಜಾತಿಗಳು. ಒಟ್ಟಿನಲ್ಲಿ ದಲಿತರಿಗೆ ಕಿರುಕುಳ ಕೊಡುವ ವಿಷಯದಲ್ಲಿ ಎಲ್ಲರೂ ಒಟ್ಟಾಗಿ ಕೈಜೋಡಿಸುತ್ತಾರೆ. ನ್ಯಾಯಾಲಯ, ದೇವಾಲಯ, ಕಚೇರಿ, ಕಾರ್ಖಾನೆ, ಪೋಲೀಸ್ ಠಾಣೆ, ಹಣ, ಅಹಂಕಾರ ಎಲ್ಲವೂ ಆ ಪ್ರಬಲ ಜಾತಿ ಗುಂಪುಗಳ ಪಿತ್ರಾರ್ಜಿತ ಸ್ವತ್ತಾಗಿದೆ. ಮೇಲ್ಜಾತಿಯವರೇ ಹೆಚ್ಚು ಸಂಖ್ಯೆ ಇರುವ ದೇಶದಲ್ಲಿ ಪೊಲೀಸರು ಮತ್ತು ನ್ಯಾಯಾಧೀಶರು ಅವರುಗಳೇ ಆಗಿದ್ದಾರೆ. ದುರ್ದೈವವೆಂದರೆ ಅವರು ಜಾತಿಯ ಪಕ್ಷಪಾತಿಗಳಾಗಿರುತ್ತಾರೆ. ನ್ಯಾಯ, ನೀತಿ ಎನ್ನುವುದು ಅವರ ಕಿವಿಗಳಿಗೆ ಕೇಳಿಸುವುದೇ ಇಲ್ಲ. ಜಾತಿ ಮಾತ್ರವೇ ಅವರಿಗೆ ಗೊತ್ತಿರುತ್ತದೆ ಎಂದಿದ್ದಾರೆ ಅಂಬೇಡ್ಕರ್ ಅವರು. ಇದು ನಿನ್ನೆ ಮೊನ್ನೆಯ ಬೆಳವಣಿಗೆಯಲ್ಲ. ನೂರಾರು ವರ್ಷಗಳ ಶೋಷಣೆಯ ಇತಿಹಾಸ ಇದಕ್ಕುಂಟು. ಕೆಲವು ಜಾತಿಗಳಂತೂ ವೈಭವದ ಹೊಸ್ತಿಲಲ್ಲಿ ಮೆರೆಯುತ್ತಿವೆ. ಮಾರವಾಡಿ ಮತ್ತು ಬನಿಯಾಗಳು ಆರ್ಥಿಕವಾಗಿ ದೇಶವನ್ನೇ ಆಳುತ್ತಿದ್ದಾರೆ. ಸಾರಸ್ವತ ಬ್ರಾಹ್ಮಣರು ಶ್ರೇಷ್ಠ ಜ್ಞಾನಿಗಳೆಂದೇ ಹೇಳಿಕೊಳ್ಳುತ್ತಾರೆ.

ಇನ್ನು ಬ್ರಾಹ್ಮಣರ ಶ್ರೇಷ್ಠತೆಯನ್ನು ಯಾರೂ ಪ್ರಶ್ನಿಸುವಂತೆಯೆ ಇಲ್ಲ. ಈ ಮಹಾನ್ ದೇಶದ ಪ್ರೀತಿಯ ಪ್ರಧಾನ ಮಂತ್ರಿ ಪಂಡಿತ್ ನೆಹರು ಅವರ ಕಾಲದಲ್ಲಿ, ದೇಶದ ಮೊದಲ ಪ್ರಜೆ, ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದ್ ಅವರು ಕಾಶಿಯ ಬೀದಿಗಳಲ್ಲಿ ಇನ್ನೂರು ಜನ ಬ್ರಾಹ್ಮಣರ ಕಾಲುಗಳನ್ನು ಸಾರ್ವಜನಿಕವಾಗಿ ತೊಳೆದರು. ಬಾಬು ಜಗಜೀವನ್ ರಾಂ ಅವರು ಪ್ರತಿಷ್ಠಾಪನೆ ಮಾಡಿದ್ದ ವಿಗ್ರಹವು ಅಸ್ಪೃಶ್ಯನಿಂದ ಮೈಲಿಗೆಯಾಯಿತೆಂದು ಅದನ್ನು ಗಂಗಾಜಲದಲ್ಲಿ ಮತ್ತೊಮ್ಮೆ ತೊಳೆದು ಮರುಸ್ಥಾಪನೆ

ಮಾಡಿದ ಸವರ್ಣೀಯರು 'ಹಿಂದೂ ನಾವೆಲ್ಲ ಒಂದು' ಎಂದು ಯಾವ ಎಗ್ಗೂ ಇಲ್ಲದೆ ಕೂಗಾಡುತ್ತಾರೆ.

1998ರ ಜೂನ್ ತಿಂಗಳು ಕಮ್ಯುನಿಸ್ಟರ ತಂಡವೊಂದು ಅಯೋಧ್ಯೆಗೆ ಭೇಟಿ ನೀಡಿ ಮಂದಿರ ನಿರ್ಮಾಣಕ್ಕೆ ಸಂಬಂಧಿಸಿದ ಕೆಲಸ ನಡೆಯುತ್ತಿದೆಯೇ ಎಂದು ಪರಿಶೀಲಿಸಿತು. ತಂಡದ ಸದಸ್ಯರು ಅಲ್ಲೆಲ್ಲ ಅಡ್ಡಾಡಿ ಹೋದ ಮೇಲೆ ವಿಶ್ವಹಿಂದೂ ಪರಿಷತ್ತಿನ ಸಂತರು ಸುಮಾರು ಎರಡು ಕಿಲೋಮೀಟರುಗಳ ಸುತ್ತಳತೆಯಲ್ಲಿ ಗಂಗೋದಕ ಹಾಕಿ ಶುದ್ಧೀಕರಣ ಮಾಡಿದರು. ವಿಪರ್ಯಾಸವೆಂದರೆ ಎರಡೂ ತಂಡಗಳಲ್ಲಿ ಸವರ್ಣೀಯ ಜಾತಿಗೆ ಸೇರಿದವರೇ ಇದ್ದರು.

ಈ ಶುದ್ಧೀಕರಣದ ಮಲಿನ ಮನಸ್ಸು ಕೇವಲ ಗಂಗೋದಕಕ್ಕೆ ಸೀಮಿತಗೊಂಡಿದ್ದರೆ ಸುಮ್ಮನಾಗಬಹುದಿತ್ತು. ಆದರೆ ಈ ಮತೀಯವಾದಿಗಳ ಶುದ್ಧೀಕರಣದ ವಿಚಾರ ಹೇಗೆ ಹಬ್ಬುತ್ತಿದೆಯೆಂದರೆ ಅದು ಭಾರತದ ಚರಿತ್ರೆಯನ್ನೇ ಶುದ್ಧಿಗೊಳಿಸಿ ತನ್ನದೇ ಆದ ಚರಿತ್ರೆ ಬರೆಯಲು ಹವಣಿಸುತ್ತಿದೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಲೋಹಿಯಾ ಮುಂತಾದವರಿಂದ ಚರಿತ್ರೆಯ ಪುಟಗಳನ್ನು ಶುದ್ಧೀಕರಿಸಿ ಅಲ್ಲಿ ಸಾವರ್‌ಕರ್, ಗೋಲ್ವಾಲ್ಕರ್, ಗೋಡ್ಸೆಗಳನ್ನು ಪ್ರತಿಷ್ಠಾಪನೆ ಮಾಡಲು ಬಯಸುತ್ತಿದೆ. ಹಾಗೇ ನೋಡಿದರೆ ಬ್ರಿಟಿಷರು ಬರೆದ ಭಾರತದ ಚರಿತ್ರೆಯೂ ಹಲವು ಲೋಪಗಳಿಂದ ಕೂಡಿರುವುದೇ ಆಗಿದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಚರಿತ್ರೆ ಯಾವಾಗಲೂ ಗೆದ್ದವರದೇ ಆಗಿರುತ್ತದೆ.

ಹಿಂದೂ ಸಮಾಜದಲ್ಲಿನ ಎಲ್ಲಾ ವಿಶೇಷವಾದ ಕೆಲಸಗಳನ್ನು ಉಚ್ಚಜಾತಿಯವರು ಹಂಚಿಕೊಂಡಿದ್ದು ಅಸ್ಪೃಶ್ಯರಿಗೆ ಉಳಿದಿರುವುದು ಕೇವಲ ಅಸಡ್ಡೆಗೊಳಪಟ್ಟಿರುವ ಮತ್ತು ಯಾರೂ ಮಾಡಲಾರದ ಕೆಲಸಗಳು. ಪಾಯಿಖಾನೆ ತೊಳೆಯುವುದು, ಸತ್ತೋದ ಪ್ರಾಣಿಗಳನ್ನು ಹೂಳುವುದು, ಜೀತದಾಳುಗಳಾಗಿ ದುಡಿಯುವುದು, ಹೊಲಗದ್ದೆಗಳಲ್ಲಿ ದುಡಿಯುವುದು ಮತ್ತು ಮಣ್ಣಿನ ಕೆಲಸಗಳು. ಈ ಕೆಲಸಗಳಲ್ಲೂ ಅವರಿಗೆ ಹೊಟ್ಟೆ ತುಂಬುವಂತಹ ಕೂಲಿಯಾಗಲಿ, ದವಸ ಧಾನ್ಯವಾಗಲಿ ದೊರಕುವುದಿಲ್ಲ. ಕೂಲಿ ದೊರಕಿದ ದಿನ ಗಂಜಿ, ಇಲ್ಲದ ದಿನ ಉಪವಾಸ. ಪ್ರಪಂಚದಲ್ಲಿಯೆ ಅತಿ ಕಡಿಮೆ ಕೂಲಿ ಸಿಗುವುದು ಈ ಮಹಾನ್ ದೇಶದಲ್ಲಿಯೇ.

ಹಿಂದೂ ಹಳ್ಳಿ ಕ್ರಿಯಾಯುಕ್ತವಾದ ಒಂದು ಕಾರ್ಖಾನೆ ಇದ್ದಂತೆ. ಹಿಂದೂ ಸಮಾಜದ ವ್ಯವಸ್ಥೆಯು ಸಂಪೂರ್ಣವಾಗಿ ಕಾರ್ಯಪ್ರವೃತ್ತವಾಗಿರುವುದನ್ನು ನಾವಿಲ್ಲಿ ಕಾಣಬಹುದು. ಸಾಮಾನ್ಯ ಹಿಂದೂ ಒಬ್ಬ, ಭಾರತೀಯ ಹಳ್ಳಿಯನ್ನು ಕುರಿತು ಮಾತನಾಡುವಾಗ ಭಾವಪರವಶನಾಗಿರುತ್ತಾನೆ. ಸಾಮೂಹಿಕ ಸಂಘಟನೆಯ ಆದರ್ಶ ಸ್ವರೂಪವೆಂದು ಕೊಚ್ಚಿಕೊಳ್ಳುತ್ತಾನೆ. ಪ್ರಪಂಚದಲ್ಲಿ ಇದಕ್ಕೆ ಸರಿಸಾಟಿಯಾದ ಸಮುದಾಯ ಬೇರೊಂದಿಲ್ಲ ಎಂದು ತನಗೆ ತಾನೇ ಬೀಗುತ್ತಾನೆ.

ಭಾರತೀಯ ಹಳ್ಳಿಯನ್ನು ಸಾಮಾಜಿಕವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಸ್ಪೃಶ್ಯರು (ಸವರ್ಣೀಯರು) ಮತ್ತು ಅಸ್ಪೃಶ್ಯರು. ಸ್ಪೃಶ್ಯರದು ಬಹುಸಂಖ್ಯೆಯುಳ್ಳ ಸಮುದಾಯವಾದರೆ ಅಸ್ಪೃಶ್ಯರದು ಅಲ್ಪಸಂಖ್ಯಾತರ ಸಮುದಾಯ. ಸ್ಪೃಶ್ಯರು ಹಳ್ಳಿಯ ಒಳಗೆ ವಾಸಿಸಿದರೆ ಅಸ್ಪೃಶ್ಯರು ಹಳ್ಳಿಯ ಹೊರಗೆ ಗುಡಿಸಿಲುಗಳಲ್ಲಿ, ಹೊಲಸು ಪ್ರದೇಶಗಳಲ್ಲಿ ವಾಸಿಸುತ್ತಾರೆ. ಇವುಗಳನ್ನು ಹೊಲಗೇರಿ, ಮಾದಿಗಕೇರಿ

ಅಥವಾ ಕೊಳೆಗೇರಿ ಎಂದು ಕರೆಯುತ್ತಾರೆ. ಸ್ಪೃಶ್ಯರು ಆರ್ಥಿಕವಾಗಿ ಪ್ರಬಲವಾದ ಮತ್ತು ಆಳುವ ಸಮುದಾಯವಾದರೆ, ಅಸ್ಪೃಶ್ಯರದು ಬಡವ ಮತ್ತು ಪರಾಧೀನ ಸಮುದಾಯ. ಅದು ಪರಂಪರಾಗತವಾದ ಜೀತಗಾರರ ಸಮುದಾಯ. ಮಹಾತ್ಮ ಗಾಂಧೀ ಯಾವ ಕಾರಣದಿಂದ ಹಳ್ಳಿಗಳು ರಾಮರಾಜ್ಯ ಆಗಬೇಕು ಎಂದಿದ್ದರೊ ತಿಳಿಯದು! ಆದರೆ ಇಂದು ಭಾರತದ ಹಳ್ಳಿಗಳು ನಾಶವಾಗುತ್ತಿರುವುದಕ್ಕೆ ಜಾತಿ, ಅಸ್ಪೃಶ್ಯತೆಯೂ ಒಂದು ಮುಖ್ಯ ಕಾರಣವಾಗಿದೆ.

ಭಾರತದ ಹಳ್ಳಿಹಳ್ಳಿಯಲ್ಲೂ, ಸ್ಪೃಶ್ಯರ ಒಂದು ಕಾನೂನು ಕಟ್ಟಳೆ ಇದ್ದು ಅದನ್ನು ಅಸ್ಪೃಶ್ಯರು ತಪ್ಪದೇ ಈಗಲೂ ಅನುಸರಿಸಬೇಕಾಗಿದೆ. ಅವರು ವಾಸಿಸುವ ದಿಕ್ಕು ನಾಲ್ಕು ದಿಕ್ಕುಗಳಲ್ಲಿ ಅಮಂಗಳವಾದ ದಕ್ಷಿಣ ದಿಕ್ಕಾಗಿರುತ್ತದೆ. ಮೇಲ್ಜಾತಿಯವರಿಗೆ ಮೈಲಿಗೆ ಉಂಟಾಗುವುದರಿಂದ ಅವರು ದೂರದಿಂದಲೇ ಓಡಾಡಬೇಕು. ಯಾವುದೇ ಸಂಪತ್ತನ್ನು ಹೊಂದಿರಬಾರದು. ಹೆಂಚಿನ ಹೊದಿಕೆ ಇರುವ ಮನೆಯನ್ನು ಕಟ್ಟಿಕೊಳ್ಳಬಾರದು. ಶುಭ್ರವಾದ ವಸ್ತ್ರಗಳನ್ನು, ಪಾದರಕ್ಷೆಗಳನ್ನು ಮತ್ತು ಆಭರಣಗಳನ್ನು ಧರಿಸಬಾರದು. ಅವರ ಮಕ್ಕಳಿಗೆ ತಿರಸ್ಕಾರ ಸೂಚಕವಾದ ಹೆಸರುಗಳನ್ನೇ ಇಡಬೇಕು. ಸವರ್ಣೀಯರ ಎದುರಿಗೆ ಕುರ್ಚಿಯಲ್ಲಿ ಕುಳಿತುಕೊಳ್ಳಬಾರದು. ಕುದುರೆ ಅಥವಾ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಹೋಗಬಾರದು. ಸುಸಂಸ್ಕೃತ ಭಾಷೆಯನ್ನು ಮಾತನಾಡಬಾರದು, ಸ್ಪೃಶ್ಯರಂತೆ ಬಹಿರಂಗ ಮತಲಾಂಛನಗಳನ್ನು ಧರಿಸುವುದು ಕೂಡ ಅಪರಾಧ. ಒಟ್ಟಿನಲ್ಲಿ ಎಲ್ಲಾ ರೀತಿಯಲ್ಲೂ ಕೆಳದರ್ಜೆಯ ಸ್ಥಾನಕ್ಕೆ ಒಪ್ಪುವಂತೆ ಅವರು ನಡೆದುಕೊಳ್ಳಬೇಕು. ಇದಲ್ಲದೆ ಸ್ಪೃಶ್ಯರು ಹೇಳುವ ಅನೇಕ ಕೆಲಸಗಳನ್ನು ಅಸ್ಪೃಶ್ಯರು ತಮ್ಮ ಕರ್ತವ್ಯವೆಂದು ಭಾವಿಸಿ ವಿನಮ್ರವಾಗಿ ಪುಕ್ಕಟೆ ಮಾಡಬೇಕು. ಮೇಲಿನ ನಿಬಂಧನೆಗಳು ಸ್ವಲ್ಪ ಅತಿ ಎನ್ನುವಂತೆ ಕಂಡರೂ ಭಾರತದ ಪ್ರತಿ ಹಳ್ಳಿಯಲ್ಲಿರುವ ಅಸ್ಪೃಶ್ಯರು ಇದೇ ರೀತಿಯಲ್ಲಿ ಇಂದಿಗೂ ನಡೆದುಕೊಳ್ಳುತ್ತಿದ್ದಾರೆ.

ಹಿಂದೂ ಸಮಾಜದ ಕೆಲವರು ಅಸ್ಪೃಶ್ಯತೆ ಮತ್ತು ಜಾತಿಪದ್ಧತಿಗಳು ಪ್ರತ್ಯೇಕವಾದುದು ಎಂದು ನಂಬಿದ್ದಾರೆ. ಈ ತಾತ್ವಿಕ ತಳಹದಿಯ ಮೇಲೆ ಅವರು ಜಾತಿಪದ್ಧತಿಯನ್ನು ವಿರೋಧಿಸದೆಯೇ ಅಸ್ಪೃಶ್ಯತೆಯನ್ನು ನಿವಾರಿಸಲು ಸಾಧ್ಯ ಎಂದು ವಾದಿಸುತ್ತಾರೆ. ಮಹಾತ್ಮ ಗಾಂಧಿಯೂ ಇದೇ ಧೋರಣೆಯನ್ನು ತಳೆದಿದ್ದರು. ಇದಕ್ಕೆ ಪೂರಕವಾಗಿ ಮನುಧರ್ಮದಲ್ಲಿ ಇರುವುದೇ ನಾಲ್ಕು ವರ್ಣಗಳು, ಐದನೆಯ ವರ್ಣ ಇಲ್ಲ ಎನ್ನುವುದು ಅವರ ವಾದ. ಐದನೆಯ ವರ್ಣ ಇಲ್ಲದಿರುವುದರಿಂದ ಅಸ್ಪೃಶ್ಯರೂ ನಾಲ್ಕನೇ ವರ್ಣಕ್ಕೆ ಸೇರುತ್ತಾರೆ. ಆಗ ಅವರೂ ಶೂದ್ರರೇ ಎಂದಾಗುತ್ತಾರೆ. ಶೂದ್ರರನ್ನು ಮುಟ್ಟಲು ನಿಷೇಧವಿಲ್ಲದಿರುವುದರಿಂದ ಅಸ್ಪೃಶ್ಯರನ್ನು ಮುಟ್ಟಲು ನಿಷೇಧವೆಲ್ಲಿದೆ ಎನ್ನುತ್ತಾರೆ ಹಿಂದೂ ಬುದ್ಧಿವಂತರು. ಆದರೆ ಮನು ಈ ನಾಲ್ಕು ವರ್ಣಗಳ ಹೊರಗಿರುವ ಜನರನ್ನು ಬಾಹ್ಯರು ಅಥವಾ ವರ್ಣಬಾಹ್ಯರು ಎಂದು ವರ್ಗೀಕರಿಸಿ ತನ್ನ ಉದ್ದೇಶವನ್ನು ಸಮರ್ಥವಾಗಿಯೇ ನಿಭಾಯಿಸಿದ್ದಾನೆ.

ಮನುಸ್ಮೃತಿಯಲ್ಲಿನ ನಿಬಂಧನೆಗಳೆಂದರೆ: ವಿಜಾತಿಯವರೊಂದಿಗೆ ಸಹ ಭೋಜನ ಕೂಡದು. ವಿಜಾತಿಯವರೊಂದಿಗೆ ವಿವಾಹ ಕೂಡದು. ಕೆಲವು ಜನವರ್ಗಗಳನ್ನು ದೈಹಿಕವಾಗಿ ಸ್ಪರ್ಶಿಸಕೂಡದು. ಮೊದಲ ಎರಡು ನಿಬಂಧನೆಗಳಿಂದ ಜಾತಿಗಳು

ಹುಟ್ಟಿದರೆ ಮೂರನೆಯ ನಿಬಂಧನೆಯಿಂದ ಅಸ್ಪೃಶ್ಯತೆ ಹುಟ್ಟುತ್ತದೆ. ಮನೋವೈಜ್ಞಾನಿಕವಾಗಿ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆ ಎರಡೂ ಒಂದೇ ತತ್ವದ ಮೇಲೆ ರೂಪಿತವಾದ ಎರಡು ವ್ಯವಸ್ಥೆಗಳು. ಜಾತಿವಾದಿ ಹಿಂದೂಗಳು ಅಸ್ಪೃಶ್ಯತೆಯನ್ನು ಆಚರಿಸುತ್ತಾರೆ. ಏಕೆಂದರೆ ಅವರು ಜಾತಿಪದ್ಧತಿಯನ್ನು ನಂಬುವವರು. ಈ ಕಾರಣದಿಂದ ಜಾತಿಪದ್ಧತಿಯನ್ನು ನಾಶ ಮಾಡದೇ ಅಸ್ಪೃಶ್ಯತೆಯನ್ನು ನಿವಾರಿಸುವುದು ಪೂರ್ಣ ನಿರರ್ಥಕವಾದ ಕೆಲಸವಾಗಿದೆ ಎನ್ನುತ್ತಾರೆ ಅಂಬೇಡ್ಕರ್.

1930ರಲ್ಲಿ ರಂಗೂನಿನ ಒಂದು ಸಭೆಯಲ್ಲಿ ಮಹಾತ್ಮ ಗಾಂಧಿಯವರು ಹೀಗೆ ಹೇಳಿದರು. 'ಸಂಪ್ರತಿ ಜಗತ್ತಿನಲ್ಲಿಯೇ ಬೇರೆ ಬೇರೆ ಧರ್ಮಗಳ ನಡುವೆ ತಮ್ಮ ಜೀವ ಉಳಿಸಿಕೊಳ್ಳುವುದಕ್ಕಾಗಿ ನಡೆಯುತ್ತಿರುವ ಸ್ಪರ್ಧೆಯಲ್ಲಿ ಹಿಂದೂ ಧರ್ಮವು ಒಂದೋ ನಾಶಹೊಂದಬೇಕು, ಇಲ್ಲವೇ ಅಸ್ಪೃಶ್ಯತೆ ಸಂಪೂರ್ಣ ನಿರ್ಮೂಲವಾದರೂ ಆಗಬೇಕು. ಅಸ್ಪೃಶ್ಯತೆ ಸಂಪೂರ್ಣ ನಿರ್ಮೂಲವಾದರೆ ಮಾತ್ರ ವ್ಯವಹಾರದಲ್ಲಿ ಅದ್ವೈತವಾದಿ ಹಿಂದೂ ಧರ್ಮಕ್ಕೆ ಪ್ರತಿಷ್ಠೆ ಬಂದೀತು'. ಬಹುಶಃ ಜಾತಿಗಳು ಉಳಿದುಕೊಂಡು, ಅಸ್ಪೃಶ್ಯತೆ ನಾಶವಾದರೂ ಹಿಂದೂ ಧರ್ಮಕ್ಕೆ ಸ್ವಲ್ಪವಾದರೂ ಮಾನ್ಯತೆ ದೊರಕಬಹುದು. ಹಿಂದೂ ಧರ್ಮದಲ್ಲಿ ಅಸ್ಪೃಶ್ಯತೆ ಇರುವವರೆಗೂ ಇದು ನಾಶದ ಭೀತಿಯಿಂದ ತಪ್ಪಿಸಿಕೊಳ್ಳಲಾರದು.

ಅಸ್ಪೃಶ್ಯತೆ ನಾಶವಾಗಬೇಕಾದರೆ ಅದಕ್ಕೆ ಮೂಲ ಕಾರಣವಾದ ವರ್ಣಾಶ್ರಮವೂ ನಾಶವಾಗಬೇಕೆಂದು ಮಹಾತ್ಮ ಗಾಂಧಿ ಎಂದೂ ಹೇಳಲಿಲ್ಲ. ಈ ಪ್ರಶ್ನೆ ಅಸ್ಪೃಶ್ಯರಲ್ಲಿ ಇಂದಿಗೂ ಹಾಗೇ ಉಳಿದುಕೊಂಡಿದ್ದು ಮಹಾತ್ಮರ ಸತ್ಯಾನ್ವೇಷಣೆಯನ್ನು ಪ್ರಶ್ನಿಸುತ್ತಲೇ ಇದೆ. ತಾರತಮ್ಯವುಳ್ಳ ಹಿಂದೂ ಸಮಾಜದ ಅಸಮಾನತೆಯ ವ್ಯವಸ್ಥೆಯಲ್ಲಿ ಉಚ್ಚ ಉತ್ತಮರು (ಬ್ರಾಹ್ಮಣರು), ಅವರ ಕೆಳಗೆ ಉಚ್ಚ ಮಧ್ಯಮರು (ಕ್ಷತ್ರಿಯ, ವೈಶ್ಯರು) ಹಾಗೂ ನೀಚರು (ಶೂದ್ರರು) ಮತ್ತು ನೀಚರ ಕೆಳಗೆ ನೀಚ ಕನಿಷ್ಠರು (ಅಸ್ಪೃಶ್ಯರು) ಇದ್ದಾರೆ. ಅತ್ಯಂತ ಮೇಲಿರುವ ವರ್ಗದ ಬಗ್ಗೆ ಒಂದು ಮೆಟ್ಟಿಲು ಕೆಳಗಿನ ವರ್ಗಕ್ಕೆ ಅಸಮಾಧಾನವಿದ್ದರೂ ಅವರು ತಮ್ಮ ಕೆಳಗಿನ ವರ್ಗವನ್ನು ನೋಡಿ ಸಮಾಧಾನ ಪಟ್ಟುಕೊಳ್ಳುತ್ತಾರೆ. ಆದರೆ ಅತ್ಯಂತ ಕೆಳಸ್ಥಾನದಲ್ಲಿರುವ ಅಸ್ಪೃಶ್ಯರ ಜೊತೆಗೆ ಸೇರಲು ಯಾರೂ ಬಯಸದ ಕಾರಣ ಈ ಶ್ರೇಣೀಕೃತ ಸಮಾಜ ಹಾಗೇ ಇರಲು ಇಷ್ಟಪಡುತ್ತದೆ. ಅಸ್ಪೃಶ್ಯತೆ ಮಾಯವಾಗಬೇಕೆಂದರೆ ಜಾತಿಪದ್ಧತಿ ಪೂರ್ಣ ನಾಶವಾಗಬೇಕು. ಜಾತಿಪದ್ಧತಿ ನಾಶವಾಗದೆ ಈ ವ್ಯವಸ್ಥೆಯಲ್ಲಿ ಅಸ್ಪೃಶ್ಯತೆಯು ನಾಶವಾಗುವುದಾದರೂ ಹೇಗೆ?

ಇತ್ತೀಚೆಗೆ 2014ರಲ್ಲಿ ಕರ್ನಾಟಕದಲ್ಲಿ ಜಾತಿವಾರು ಜನಗಣತಿ ಮಾಡಲು ಶಾಲಾ ಸಿಬ್ಬಂದಿ ಬೆಂಗಳೂರಿನಲ್ಲಿ ಮನೆಗಳಿಗೆ ಭೇಟಿ ನೀಡಿತ್ತು. ಅಂತಹ ಸಮಯದಲ್ಲಿ ಅವರ ಮುಂದೆ ಪತ್ನಿ ಒಂದು ಜಾತಿಯ ಹೆಸರು ಹೇಳಿದರೆ, ಪತಿ ಇನ್ನೊಂದು ಜಾತಿಯ ಹೆಸರು ಹೇಳಿ ಜಗಳಗಳೇ ನಡೆದ ಸಂಗತಿಗಳು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಅಂದರೆ ಸಾಮಾನ್ಯವಾಗಿ ಕೆಳಜಾತಿಗಳ ಹೆಸರುಗಳನ್ನು ಮುಚ್ಚಿಡಲು ತಮ್ಮ ಮೂಲ ಜಾತಿಗಿಂತ ಒಂದು ಹಂತ ಹೆಚ್ಚಿನ ಜಾತಿ ಹೇಳಿಕೊಳ್ಳುವುದು ಸರ್ವೇಸಾಮಾನ್ಯವಾಗಿಬಿಟ್ಟಿದೆ. ಅಸ್ಪೃಶ್ಯರು, ಪರಿಶಿಷ್ಟ ವರ್ಗ ಅಥವಾ ಓಬಿಸಿಯ ಒಂದು ಜಾತಿಯ ಹೆಸರು ಹೇಳಿಕೊಂಡರೆ ಪರಿಶಿಷ್ಟ ವರ್ಗದವರು ನಾವು ಕ್ಷತ್ರಿಯರು ಎನ್ನುತ್ತಾರೆ ಅಥವಾ ಶೂದ್ರ ಜಾತಿಗಳ ಹೆಸರುಗಳಾದ ರೆಡ್ಡಿ, ಗೌಡ, ಒಕ್ಕಲಿಗ ಎಂದು ಹೇಳಿಕೊಳ್ಳುತ್ತಾರೆ. ಉನ್ನತ

ಜಾತಿಗಳ ಜನರಿಗೆ ತಮ್ಮ ಜಾತಿಯ ಹೆಸರು ಅಥವಾ ಉಪನಾಮ ಹೇಳಿಕೊಳ್ಳುವುದರಲ್ಲಿ ಎಲ್ಲಿಲ್ಲದ ಹೆಮ್ಮೆ, ಸಂತೋಷ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನ ತಮ್ಮ ಸರ್ಟಿಫಿಕೇಟ್‌ಗಳಲ್ಲಿ ಮೀಸಲಾತಿಗೆ ಮೂಲ ಹೆಸರುಗಳನ್ನೇ ಇಟ್ಟುಕೊಂಡು, ಜನಗಣತಿಯಲ್ಲಿ ಗೌರವಕ್ಕಾಗಿ ಬೇರೆ ಜಾತಿಯ ಹೆಸರು ಹೇಳಿದರೆ, ಒಟ್ಟು ಜನಸಂಖ್ಯೆಯಲ್ಲಿ ಅವರ ಪ್ರಾತಿನಿಧ್ಯ ಕಡಿಮೆಯಾಗುತ್ತದೆ; ಮತ್ತು ಮುಂದಿನ ದಿನಗಳಲ್ಲಿ ಅವರ ಮೀಸಲಾತಿಗೆ ಧಕ್ಕೆಯಾಗುತ್ತದೆ ಎನ್ನುವ ಪರಿಜ್ಞಾನವೂ ಇಲ್ಲದೇ ಇರುವುದು ನಾಚಿಕೆಗೇಡಿನ ವಿಷಯವಾಗಿದೆ. ಇಂತಹ ವಿಷಯಗಳಿಗೆ ಅಂಬೇಡ್ಕರ್ ಹೇಳಿದ್ದು: 'ಸ್ವಾಭಿಮಾನವಿಲ್ಲದ ಜನಾಂಗ ಬದುಕುವುದಕ್ಕಿಂತ ಸಾಯುವುದೇ ಮೇಲು' ಎಂದು. ಆದರೆ ನಗರ, ಪಟ್ಟಣಗಳಲ್ಲಿ ಅಸ್ಪೃಶ್ಯರು ತಮ್ಮ ನಿಜವಾದ ಜಾತಿ ಹೇಳಿದರೆ ಬರುವ ತೊಂದರೆಗಳು ಅನೇಕ. ಮೊದಲಿಗೆ ಅವರಿಗೆ ಬಾಡಿಗೆ ಮನೆಯೇ ದೊರಕುವುದಿಲ್ಲ. ಒಬ್ಬ ಅಸ್ಪೃಶ್ಯನಿಗೆ ಮಾತ್ರ ಅದರ ನೋವು ಗೊತ್ತಿರುತ್ತದೆ. ದಲಿತ ಮಹಿಳೆಯರಂತೂ ಈ ವಿಷಯದಲ್ಲಿ ತೀರಾ ಮುಜುಗರಕ್ಕೆ ಒಳಗಾಗಬೇಕಾಗುತ್ತದೆ. ಮಹಿಳೆಯರಂತೂ ಜಾತಿಯನ್ನು ತಿಳಿದು ಕೊಳ್ಳದೆ ಮುಂದಿನ ಯಾವುದೇ ರೀತಿಯ ಸಂಬಂಧಗಳನ್ನು ಇನ್ನೊಂದು ಮಹಿಳೆಯ ಜೊತೆಗೆ ಬೆಳೆಸುವುದೇ ಇಲ್ಲ. ಇದು ಆಧುನಿಕ ಪ್ರಪಂಚದ ಸಾಮಾಜಿಕ ಬೆಳವಣಿಗೆ.

## ನಿಜವಾದ ದೇವರುಗಳನ್ನು ಪೂಜಿಸುತ್ತ

ಅರುಣ್ ಶೌರಿ ಎಂಬ ಮಹಾನ್ ಲೇಖಕ 1997ರಲ್ಲಿ ಬರೆದ `Worshipping False gods' ಎಂಬ ಕೃತಿಯಲ್ಲಿ ಅಂಬೇಡ್ಕರ್ ಅವರನ್ನು ಚರಿತ್ರಹೀನನನ್ನಾಗಿ ಚಿತ್ರಿಸಿದ್ದರು. ಈ ಕೃತಿಯಲ್ಲಿನ ಅವರ ಮುಖ್ಯ ಅಪವಾದವೆಂದರೆ ಇಡೀ ದೇಶ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಪಡೆಯಲು ಹೋರಾಡುತ್ತಿದ್ದರೆ ಅಂಬೇಡ್ಕರ್ ಒಂದೇ ಒಂದು ಸಲವು ಬ್ರಿಟಿಷರ ವಿರುದ್ಧ ಯಾವುದೇ ಹೇಳಿಕೆ ನೀಡಲಿಲ್ಲ ಮತ್ತು ಯಾವುದೇ ಹೋರಾಟದಲ್ಲಿ ಪಾಲ್ಗೊಳ್ಳಲಿಲ್ಲ. ಸ್ವಾತಂತ್ರ್ಯ ಹೋರಾಟಕ್ಕೆ ಅಂಬೇಡ್ಕರ್ ಅವರ ಕೊಡುಗೆ ಶೂನ್ಯ. ಇದನ್ನು ಎಲ್ಲಿ ಬೇಕಾದರೂ ನಾನು ಸವಾಲು ಮಾಡುತ್ತೇನೆ ಎಂದಿದ್ದರು. ಅರುಣ್ ಶೌರಿ ಎಷ್ಟು ಸುಳ್ಳು ಹೇಳಬಲ್ಲರು ಎಂಬುದನ್ನು ನೀವು ತಿಳಿಯಬೇಕಾದರೆ ಪುಟ 8 (ಬ್ರಿಟಿಷರಿಗೆ ಅಂಬೇಡ್ಕರ್ ನೀಡಿದ ಎಚ್ಚರಿಕೆ) ನೋಡಬಹುದು. ಬ್ರಿಟಿಷರು ಭಾರತ ಬಿಟ್ಟು ಈಹೊತ್ತಲ್ಲ ನಾಳೆ ತೊಲಗುವುದಂತೂ ಗ್ಯಾರಂಟಿ. ಆದರೆ 5 ಸಾವಿರ ವರ್ಷಗಳಿಂದ ಸವರ್ಣೀಯರ ಕೈಯಲ್ಲಿ ಸ್ವಾತಂತ್ರ್ಯ ಕಳೆದುಕೊಂಡಿರುವ ಅಸ್ಪೃಶ್ಯರಿಗೆ ಮುಕ್ತಿ ಸಿಗುವುದು ಯಾವಾಗ? ಭಾರತ ಸ್ವಾತಂತ್ರ್ಯ ಪಡೆಯುವುದಕ್ಕಿಂತ ಇದು ಮುಖ್ಯ ಎನ್ನುವುದನ್ನು ಅಂಬೇಡ್ಕರ್ ಅವರು ಹಿಂದೂಗಳಿಗೆ ಪದೇಪದೇ ಹೇಳುತ್ತಲೇ ಇದ್ದರು. ಚರಿತ್ರೆಯನ್ನು ಸರಿಯಾಗಿ ಓದದ ಅಥವಾ ಜಾಣ ಕುರುಡರಾಗಿದ್ದ ಶೌರಿ ಸಾಹೇಬರು `Worshipping False gods' ಕೃತಿಯಲ್ಲಿ ಅಂಬೇಡ್ಕರ್ ಅವರು ವಿರುದ್ಧ ವಿವಾದ ಸೃಷ್ಟಿಸಿ ಹಿಂದೂಗಳ ಮನಸ್ಸಿನಲ್ಲಿ ಡಾರ್ಲಿಂಗ್ ಎನಿಸಿಕೊಳ್ಳುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ಇದರ ಜೊತೆಗೆ ತನ್ನ ಕೃತಿಯನ್ನು ಮಾರಿಕೊಳ್ಳುವ ಉದ್ದೇಶವೂ ಇತ್ತು.

ಬ್ರಿಟಿಷರು ಭಾರತ ಬಿಟ್ಟು ಹೋಗುವುದಕ್ಕೆ ಮುಂಚೆ ಅಸ್ಪೃಶ್ಯರಿಗೆ ಹಿಂದೂಗಳಿಂದ ಸ್ವಾತಂತ್ರ್ಯ ದೊರಕಬೇಕಾಗಿತ್ತು. ಅಂದರೆ ದಲಿತರಿಗೆ ಮೀಸಲಾತಿಯ ಮೂಲಕ ಒಂದಿಷ್ಟು ಲಾಭವನ್ನು ಗಳಿಸಿಕೊಡಲು ಅವರು ಹೋರಾಡುತ್ತಿದ್ದರು. ಉಳಿದ ನಿಮ್ನವರ್ಗದ ನಾಯಕರೆಲ್ಲ ಆಗಲೇ ಕಾಂಗ್ರೆಸ್ ನಾಯಿಗಳಾಗಿಬಿಟ್ಟದ್ದ ಕಾರಣ ಅಂಬೇಡ್ಕರ್ ಒಬ್ಬರೇ ಇದನ್ನು ಸಾಧಿಸಬೇಕಾಗಿತ್ತು. ಅಸ್ಪೃಶ್ಯರಿಗೆ ಅದನ್ನು ಅವರು ಕೊನೆಗೂ ಗಳಿಸಿಕೊಟ್ಟರೂ ಕೂಡ. ಇದೆಲ್ಲದರ ಜೊತೆಗೆ ಈಗ ಈ ದೇಶ ಇಷ್ಟು ಒಗ್ಗಟ್ಟಾಗಿರುವುದಕ್ಕೆ ಅಂಬೇಡ್ಕರ್ ಮುಖ್ಯ ಕಾರಣರಾಗಿದ್ದಾರೆ. ಅಂಥ ಸಂವಿಧಾನವನ್ನು ಅವರು ನಮಗೆ ಕೊಟ್ಟಿದ್ದಾರೆ. ಇಲ್ಲವೆಂದರೆ ಭಾರತ ಯಾವಾಗಲೋ ಚದುರಿಹೋಗುತ್ತಿತ್ತು. ಅಂತೂ ಶೌರಿಯವರು ಎಬ್ಬಿಸಿದ ವಿವಾದ ಸ್ವಲ್ಪ ದಿನಗಳಾದ ಮೇಲೆ ತಣ್ಣಗೆ ಮೂಲೆ ಸೇರಿತು. ಅವರು ಎಬ್ಬಿಸಿದ ರಾಡಿ ಅವರ ಮುಖಕ್ಕೆ ಮೆತ್ತಿಕೊಂಡು ಅದು ಇದುವರೆಗೂ ಹೋಗಿಲ್ಲ. ಇಂಥ ವಿವಾದಗಳು ಎಷ್ಟೇ ಹುಟ್ಟಿಕೊಂಡರೂ ಅಂಬೇಡ್ಕರ್ ಅವರ ವರ್ಚಸ್ಸಿಗೆ ಯಾವ ಧಕ್ಕೆಯೂ ಆಗುವುದಿಲ್ಲ. ಮುಂದೆಯೂ ಆಗುವುದಿಲ್ಲ. ದಿನಗಳು ಕಳೆದಂತೆ ಅವರ ವರ್ಚಸ್ಸು ಇನ್ನೂ ಹೆಚ್ಚಾಗುತ್ತಲೇ ಇದೆ.

ಸಂವಿಧಾನ ರಚನೆಯಾಗಿ 65 ವರ್ಷಗಳಾದ ಮೇಲೆ ನವೆಂಬರ್ 26, 2015ರಲ್ಲಿ ನರೇಂದ್ರ ಮೋದಿ ಸರ್ಕಾರ ಸಂವಿಧಾನ ದಿನವನ್ನು ಅಂಬೇಡ್ಕರ್ ಅವರ ಗೌರವಾರ್ಥವಾಗಿ ಆಚರಿಸಿತು. ಅಕ್ಟೋಬರ್ 11, 2015ರಂದು ನರೇಂದ್ರ ಮೋದಿಯವರು 400 ಕೋಟಿ ರೂಪಾಯಿಗಳ ವೆಚ್ಚದ ಅಂಬೇಡ್ಕರ್ ಸ್ಮಾರಕ ಭವನದ ಶಿಲಾನ್ಯಾಸವನ್ನು ಮುಂಬೈನಲ್ಲಿ ಮಾಡಿದರು. ಇದು ಅಂಬೇಡ್ಕರ್ ಅವರ 125ನೇ ಜಯಂತಿಯ ವರ್ಷ. ದೀರ್ಘವಾಗಿ ದೇಶವನ್ನು ಆಳಿದ ಕಾಂಗ್ರೆಸ್ ಸರ್ಕಾರ ಈ ಕೆಲಸವನ್ನು ಯಾವಾಗಲೋ ಮಾಡಬೇಕಾಗಿತ್ತು. ಭಾರತದಲ್ಲಿರುವ ರಾಜಕೀಯ ಪಕ್ಷಗಳು ನಿಜವಾಗಿಯೂ ರಾಜಕೀಯ ಪಕ್ಷಗಳೇ ಆಗಿವೆ.

ನಿಜವಾದ ದೇವರುಗಳನ್ನು ಪೂಜಿಸುತ್ತ ಎಂಬ ಈ ವಿಷಯವನ್ನು ಬರೆಯುವುದಕ್ಕೆ ಕಾರಣ ಆಗ ಅಂಬೇಡ್ಕರರನ್ನು ತೆಗಳಿದ್ದ ಅದೇ ಶೌರಿ 18 ವರ್ಷಗಳ ನಂತರ ಜ್ಞಾನೋದಯವಾದಂತೆ ಅಂಬೇಡ್ಕರ್ ದೇಶಕ್ಕೆ ಕೊಟ್ಟ ಕೊಡುಗೆಯನ್ನು ಕೊಂಡಾಡಿದ್ದಾರೆ. ಇದು ಹೇಗೆ ಸಾಧ್ಯ? ಶೌರಿಯಂಥ ಮಹಾನುಭಾವರಿಗೆ ಮಾತ್ರ ಸಾಧ್ಯವಿರಬೇಕು!

## ಅಧ್ಯಾಯ–12

ನಾವು ಭಾರತೀಯರು, ಮೊದಲನೆಯದಾಗಿ ಮತ್ತು ಕೊನೆಯದಾಗಿ
–ಅಂಬೇಡ್ಕರ್.

# ಮೀಸಲಾತಿಯ ಪ್ರಾತಿನಿಧ್ಯಕ್ಕೆ ಅಂಬೇಡ್ಕರ್ ಹೋರಾಟ

ಹಿಂದೂಗಳ ಪಾಲಿಗೆ ಬಂದ ಒಟ್ಟು ಸ್ಥಾನಗಳಲ್ಲಿ ಅಸ್ಪೃಶ್ಯರ ಪಾಲಿನ ಸ್ಥಾನಮಾನಗಳನ್ನು ಅಸ್ಪೃಶ್ಯರಿಗೆ ಕೊಡಬೇಕೆಂದು ಆ ಜನರ ಮುಂದಾಳುಗಳು ಒತ್ತಾಯ ಮಾಡಲು ಪ್ರಾರಂಭಿಸಿದ್ದರು. ಅಸ್ಪೃಶ್ಯರ ಪ್ರತ್ಯೇಕತೆಯನ್ನು ಗಮನದಲ್ಲಿಟ್ಟುಕೊಂಡು ದುಂಡುಮೇಜಿನ ಸಭೆಯಲ್ಲಿ ಅಸ್ಪೃಶ್ಯರ ಪರವಾಗಿ ವಾದಿಸಲು ಅಂಬೇಡ್ಕರ್ ಅವರನ್ನು ಮುಂದಾಳಾಗಿ ಕಳುಹಿಸಲಾಯಿತು. ಹೊಸ ಸಂವಿಧಾನದ ಪ್ರಕಾರ ಎಲ್ಲ ಶಾಸನ ಸಭೆಗಳಲ್ಲೂ ಅಸ್ಪೃಶ್ಯರ ಜನಸಂಖ್ಯೆಗೆ ಅನುಗುಣವಾಗಿ ಅವರ ಪ್ರಾತಿನಿಧ್ಯವಿರಬೇಕೆಂದು ದುಂಡುಮೇಜು ಸಭೆಯ ಅಲ್ಪಸಂಖ್ಯಾತರ ಉಪಸಮಿತಿಯು ಒಪ್ಪಿಗೆ ಕೊಟ್ಟಿತು. ಹಾಗಾಗಿ ಅಸ್ಪೃಶ್ಯರ ಜನಸಂಖ್ಯೆಯ ವಿಷಯ ಅತ್ಯಂತ ಮಹತ್ವವನ್ನು ಪಡೆದುಕೊಂಡಿತು. ಅಸ್ಪೃಶ್ಯರ ಸಂಖ್ಯೆ ಕಡಿಮೆಯಾದಷ್ಟು ಸ್ಪೃಶ್ಯ ಹಿಂದೂಗಳಿಗೆ ದೊರೆಯುವ ರಾಜಕೀಯ ಪ್ರಾತಿನಿಧ್ಯ ಹೆಚ್ಚಾಗುತ್ತಿತ್ತು. 1932ಕ್ಕ ಮುಂಚೆ ಸ್ಪೃಶ್ಯರು, ಅಸ್ಪೃಶ್ಯರ ಜನಸಂಖ್ಯೆಯ ವಿಚಾರದಲ್ಲಿ ವಿರೋಧವನ್ನು ಮಾಡದೇ ಇದ್ದು ಮತ್ತೆ 1932ರ ನಂತರ ಅಸ್ಪೃಶ್ಯರೆಂಬುವವರು ಇಲ್ಲವೇ ಇಲ್ಲ ಎಂಬುದಾಗಿ ಹೇಳಿಕೆಗಳನ್ನು ನೀಡತೊಡಗಿದರು.

ಸವರ್ಣೀಯ ಹಿಂದೂಗಳ ಇನ್ನೊಂದು ವಾದವೆಂದರೆ ಅಸ್ಪೃಶ್ಯತೆಯನ್ನು ನಿರ್ಣಯಿಸುವ ಪ್ರಮಾಣಗಳು ರಾಷ್ಟ್ರಾದ್ಯಂತ ಒಂದೇ ರೀತಿಯಾಗಿ ಇರಬೇಕು ಎಂಬುದು. ಇದು ಹಲವು ಗೊಂದಲಗಳನ್ನು ಸೃಷ್ಟಿಸುವ ಸಮಸ್ಯೆಯಾಗಿತ್ತು. ಏಕೆಂದರೆ ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಸಾಮಾಜಿಕ ನಿಬಂಧನೆಗಳಿಂದ ಸ್ಪೃಶ್ಯರು, ಅಸ್ಪೃಶ್ಯರನ್ನು ಭಿನ್ನ ಭಿನ್ನ ರೀತಿಯಲ್ಲಿ ಪ್ರತ್ಯೇಕಿಸಿದ್ದರು. ಇದರ ನಡುವೆ ಹಿಂದುಳಿದ ಜನಾಂಗಗಳು ಮತ್ತು ಅಸ್ಪೃಶ್ಯರ ನಡುವೆ ಕಲಹ ಹುಟ್ಟಿಕೊಂಡಿತು. ದಲಿತವರ್ಗ ಎಂಬ ಶ್ರೇಣಿಯಲ್ಲಿ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಅಸ್ಪೃಶ್ಯರಲ್ಲದ ಇತರ ವರ್ಗದ ಜನರನ್ನೂ ಸೇರಿಸಬೇಕೆಂದು ಹಿಂದುಳಿದ ಜನಾಂಗಗಳ ನಾಯಕರು ಸ್ಪರ್ಧೆಗಿಳಿದರು. ಆದರೆ ಈ ವಾದವನ್ನು ಅಸ್ಪೃಶ್ಯರು ಮತ್ತು ಸವರ್ಣೀಯ ಹಿಂದೂಗಳು ಒಪ್ಪಲಿಲ್ಲ. ಇದರಿಂದ ಕುಪಿತಗೊಂಡ ಮಹಮ್ಮದೀಯರಿಂದ ಅಸ್ಪೃಶ್ಯರಿಗೆ

ಯಾವ ನೆರವೂ ದೊರಕಲಿಲ್ಲ. ಕೊನೆಯದಾಗಿ ಅಸ್ಪೃಶ್ಯರು ತಮ್ಮ ಸಂಖ್ಯಾ ನಿರ್ಣಯಕ್ಕೆ ತಾವು ಮಾತ್ರವೇ ಹೋರಾಡಬೇಕಾಯಿತು. ಹಲವು ವಾದ ವಿವಾದಗಳ ನಂತರ ಅಸ್ಪೃಶ್ಯರ ಜನಸಂಖ್ಯೆಯ ವಿಚಾರವನ್ನು ಬಗೆಹರಿಸಲಾಯಿತು.

ಮೊದಲನೇ ದುಂಡುಮೇಜು ಪರಿಷತ್ತಿನ ಅಧಿವೇಶನದಲ್ಲಿ ಕೆಲವು ಸಮಸ್ಯೆಗಳಿಗೆ ಪರಿಹಾರ ದೊರೆಯದ ಕಾರಣ ಎರಡನೇ ಅಧಿವೇಶನಕ್ಕೆ ಕಾಂಗ್ರೆಸ್ಸಿನ ಪರವಾಗಿ ಮಹಾತ್ಮ ಗಾಂಧೀಜಿಯವರು ಸೇರಿಕೊಂಡಿದ್ದರು. ಗಾಂಧೀಜಿಯವರು ಪ್ರತಿಯೊಬ್ಬ ಭಾರತೀಯ ಪ್ರತಿನಿಧಿಯನ್ನೂ ಪರಿಹಾಸ್ಯ ಮಾಡುತ್ತ, ಮಹಮ್ಮದೀಯ ಮತ್ತು ದಲಿತ ವರ್ಗದ ಪ್ರತಿನಿಧಿಗಳನ್ನೂ ಸಹ ಹಂಗಿಸುತ್ತ ಇವರ್‍ಯಾರೂ ಅವರ ನಿಜವಾದ ಪ್ರತಿನಿಧಿಗಳಲ್ಲ, ನಾನೇ ಅವರೆಲ್ಲರ ನಿಜವಾದ ಪ್ರತಿನಿಧಿ ಎಂದು ಹೇಳಿಕೊಂಡರು. ಕೊನೆಗೆ ಯಾವ ಸಮಸ್ಯೆಗೂ ಪರಿಹಾರ ಸೂಚಿಸಲಾಗದ ಮಹಾತ್ಮರು ಭಾರತಕ್ಕೆ ಹಿಂದಿರುಗಬೇಕಾಯಿತು.

ಮುಂಬೈನ ಬಲ್ಲಾರ್ಡ್ ಹಡಗು ಕಟ್ಟೆಯ ಹೊರಗೆ ಕಾಂಗ್ರೆಸ್ ಅನುಯಾಯಿಗಳು ಗಾಂಧೀಜಿಗೆ ಭವ್ಯ ಸ್ವಾಗತವನ್ನು ನೀಡಲು ಸಜ್ಜಾಗಿದ್ದರೆ, ಇನ್ನೊಂದು ಕಡೆ ಅಸ್ಪೃಶ್ಯರ ಸ್ವಯಂಸೇವಕರು ಗಾಂಧೀಜಿಗೆ ವಿರುದ್ಧವಾಗಿ ಘೋಷಣೆಗಳನ್ನು ಕೂಗುತ್ತ ಕಪ್ಪು ಬಾವುಟಗಳನ್ನು ಪ್ರದರ್ಶಿಸಿದರು. ಮೊಟ್ಟ ಮೊದಲಿಗೆ ತಮ್ಮ ವಿರುದ್ಧವಾಗಿಯೇ ಕಪ್ಪು ಬಾವುಟಗಳ ಪ್ರದರ್ಶನವನ್ನು ನೋಡಿದ ಗಾಂಧೀಜಿಯವರು ಪ್ರಶ್ನೆಯೊಂದಕ್ಕೆ 'ತಾನು ಅಸ್ಪೃಶ್ಯರೊಂದಿಗೆ ಮೂಳೆ ಮಾಂಸದೊಡನೆ ಭೌತಿಕವಾಗಿ ಐಕ್ಯವಾಗಿರುವುದರಿಂದ ತನಗೇನೂ ಕೋಪವಿಲ್ಲ' ಎಂದರು.

ಗಾಂಧೀಜಿ ಮತ್ತು ಕಾಂಗ್ರೆಸ್ಸಿನ ಮೇಲೆ ಕೋಪಗೊಂಡಿದ್ದ ಅಸ್ಪೃಶ್ಯರು ಆ ದಿನ ಹಂಚಿದ ಕರಪತ್ರದಲ್ಲಿ ಈ ರೀತಿಯಾಗಿ ಹೇಳಿಕೆ ಕೊಟ್ಟಿದ್ದರು: 'ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಅಸ್ಪೃಶ್ಯತಾ ನಿವಾರಣೆ ಎಂಬುದು ಸೇರಿದ್ದರೂ ಯಾವ ಪ್ರಗತಿಯೂ ಆಗಿಲ್ಲ. ಅಸ್ಪೃಶ್ಯತೆಯ ನಿವಾರಣೆಗೆ ನಾವು ಮಾಡಿದ ಪ್ರಯತ್ನಕ್ಕೆ ಕಾಂಗ್ರೆಸ್ಸಿಗರೇ ಪರಮ ವಿರೋಧಿಗಳಾಗಿದ್ದಾರೆ. ದುಂಡುಮೇಜು ಪರಿಷತ್ತಿನಲ್ಲಿ ದಲಿತ ಜನಾಂಗದ ನಂಬಿಕಸ್ಥ ಪ್ರತಿನಿಧಿಯಾದ ಅಂಬೇಡ್ಕರ್ ಅವರು ಪ್ರತಿಪಾದಿಸಿದ ಹಕ್ಕುಗಳ ವಿಚಾರದಲ್ಲಿ ಗಾಂಧೀಜಿಯವರ ಪ್ರತಿಕ್ರಿಯೆ ಅತ್ಯಂತ ಅವಿವೇಕದ, ಹಟಮಾರಿತನದ ಹಾಗೂ ಅಸ್ವಾಭಾವಿಕವಾದ ಸ್ವರೂಪದ್ದಾಗಿದ್ದಿತು. ಕಾಂಗ್ರೆಸ್ ಪರವಾಗಿ ಗಾಂಧೀಜಿ, ಮಹಮ್ಮದೀಯರು ಮತ್ತು ಸಿಖ್ಖರಿಗೆ ಐತಿಹಾಸಿಕ ಕಾರಣಗಳಿಂದ ಪ್ರತ್ಯೇಕ ಪ್ರಾತಿನಿಧ್ಯವನ್ನು ನೀಡಲು ಒಪ್ಪಿದ್ದರೂ ದಲಿತ ವರ್ಗದವರಿಗೆ ಸಾರ್ವತ್ರಿಕ ಚುನಾವಣೆಯಲ್ಲಿ ಮೀಸಲಾತಿ ಸ್ಥಾನಗಳಿರಬೇಕೆನ್ನುವ ಬೇಡಿಕೆಗಳನ್ನು ತಿರಸ್ಕರಿಸಿರುವುದು ಸೂಕ್ತವಲ್ಲ. ಮೀಸಲಾತಿ ಇಲ್ಲದಿದ್ದರೆ ಸವರ್ಣೀಯ ಹಿಂದೂಗಳ ಕೃಪೆಯಲ್ಲಿರಬೇಕಾದ ದಲಿತರ ಸ್ಥಿತಿ ಹೇಗಿರುತ್ತದೆ ಎಂಬುದು ಗಾಂಧೀಜಿ ಅವರಿಗೆ ತಿಳಿಯದ ವಿಚಾರವಲ್ಲ.'

ಮುಂಬೈ ಪ್ರಾಂತದ ಅಸ್ಪೃಶ್ಯರು ಮಹಾಡ್ ನಗರದಲ್ಲಿ ಸಾರ್ವಜನಿಕ ಕೆರೆಯಿಂದ (ಚೌಧಾರ್ ತಳೆ) ನೀರನ್ನು ತರುವ ಮತ್ತು ನಾಸಿಕ್‌ನ ಹಿಂದೂ ದೇವಾಲಯಕ್ಕೆ ಪ್ರವೇಶ ಮಾಡುವ ಹಕ್ಕಿಗಾಗಿ ಸತ್ಯಾಗ್ರಹ ಹೂಡಿದ್ದರು. ಸವರ್ಣೀಯ ಹಿಂದೂಗಳಿಗೆ ವಿರುದ್ಧವಾಗಿ ಅಸ್ಪೃಶ್ಯರು ನಡೆಸಿದ ಈ ಸತ್ಯಾಗ್ರಹವನ್ನು ಗಾಂಧೀಜಿಯವರು ಖಂಡಿಸಿದರು. ಭಾರತ ಸ್ವಾತಂತ್ರ್ಯವನ್ನು ಗಳಿಸಲು ಹಿಂದೂಗಳು ಬ್ರಿಟಿಷರ ವಿರುದ್ಧ ಸತ್ಯಾಗ್ರಹದ ಅಸ್ತ್ರವನ್ನು

ಬಳಸುವುದು ಗಾಂಧೀಜಿಯ ದೃಷ್ಟಿಯಲ್ಲಿ ನ್ಯಾಯ ಸಮ್ಮತವೆಂದಾದರೆ, ಅಸ್ಪೃಶ್ಯರು ಬ್ರಿಟಿಷರ ಆಡಳಿತಕ್ಕಿಂತ ಘೋರವಾದ ಹಿಂದೂಗಳ ಕೃತ್ಯಗಳಿಂದ ಬಿಡುಗಡೆಯಾಗಲು ಸವರ್ಣೀಯ ಹಿಂದೂಗಳ ಎದುರು ಸತ್ಯಾಗ್ರಹ ಮಾರ್ಗವನ್ನು ಅನುಸರಿಸುವುದು ಏಕೆ ನ್ಯಾಯ ಸಮ್ಮತವಲ್ಲ ಎಂಬುದು ಅಸ್ಪೃಶ್ಯರ ವಾದವಾಗಿತ್ತು. ಅದೇನೆ ಆಗಲಿ ಸತ್ಯಾಗ್ರಹವನ್ನು ಮಾಡಲೂ ಕೂಡ ಅಸ್ಪೃಶ್ಯರು ಅನರ್ಹರು ಎನ್ನುವುದೇ ಗಾಂಧೀಜಿಯವರ ವಾದವಾಗಿತ್ತು.

ಹಿಂದೂಗಳ ವಿರುದ್ಧದ ಈ ಸತ್ಯಾಗ್ರಹದಲ್ಲಿ ಹಿಂದೂಗಳಲ್ಲದವರಾದ ಮಹಮ್ಮದೀಯರು, ಕ್ರೈಸ್ತರು, ಪಾರ್ಸಿಗಳು, ಸಿಖ್ಖರು ಯಾರೂ ಅಸ್ಪೃಶ್ಯರ ನೆರವಿಗೆ ಬಾರದಂತೆ ಗಾಂಧೀಜಿ ನೋಡಿಕೊಂಡರು. ಗಾಂಧೀಜಿಯವರ ವಾದ ಎಷ್ಟು ಅಸಂಗತವಾಗಿತ್ತೆಂದರೆ ಅಸ್ಪೃಶ್ಯತೆಯೆಂಬುದು ಸವರ್ಣೀಯ ಹಿಂದೂಗಳು ಎಸಗಿರುವ ಒಂದು ಪಾಪ, ಅದಕ್ಕಾಗಿ ಹಿಂದೂಗಳು ಮಾತ್ರ ಪಶ್ಚಾತ್ತಾಪ ಪಡಬೇಕು ಎಂದು ವಾದಿಸಿದರು. ಅಂದರೆ ಹಿಂದೂಗಳು ಮಾತ್ರ ಸತ್ಯಾಗ್ರಹ ಮಾಡಬೇಕೇ ಹೊರತು ಬೇರೆ ಯಾರೂ ಅಲ್ಲ. ಒಟ್ಟಿನಲ್ಲಿ ಅಸ್ಪೃಶ್ಯರಿಗೆ ಹಿಂದೂಗಳಲ್ಲದವರಿಂದ ದೊರಕಬೇಕಾಗಿದ್ದ ಬೆಂಬಲವನ್ನು ಅವರು ಪೂರ್ಣವಾಗಿ ದುರ್ಬಲಗೊಳಿಸಿ ಚಿವುಟಿಹಾಕಿದರು.

ಅಸ್ಪೃಶ್ಯರು ಪ್ರತ್ಯೇಕ ಪ್ರಾತಿನಿಧ್ಯವನ್ನು ಬಯಸಿದ ವಿಚಾರದಲ್ಲಿ ಗಾಂಧೀಜಿಯವರು ಕೆಂಡಾಮಂಡಲವಾಗಿ ದಲಿತ ವರ್ಗದ ಪ್ರತಿನಿಧಿಗಳನ್ನು ಖಂಡತುಂಡವಾಗಿ ವಿರೋಧಿಸಲು ಪ್ರಾರಂಭಿಸಿದರು. ಮಹಮ್ಮದೀಯರು, ಸಿಖ್ಖರು, ಕ್ರೈಸ್ತರು, ಐರೋಪ್ಯರು ಮತ್ತು ಆಂಗ್ಲೋ ಇಂಡಿಯನ್ನರು ಇಂಥದ್ದೆ ಬೇಡಿಕೆಗಳನ್ನು ಮುಂದಿಟ್ಟಾಗ ಅದನ್ನು ಒಪ್ಪಿದ ಗಾಂಧೀಜಿಯವರು ಅಸ್ಪೃಶ್ಯರ ಬಗ್ಗೆ ಮಾತ್ರ ಕಿಡಿಕಾರಿದರು. ಅಸ್ಪೃಶ್ಯರ ಬೇಡಿಕೆಗಳನ್ನು ಅಸ್ಪೃಶ್ಯರ ಹಿತದೃಷ್ಟಿಯಿಂದಲೇ ನಾನು ಪ್ರಾಮಾಣಿಕವಾಗಿ ವಿರೋಧಿಸುತ್ತೇನೆ ಎಂಬುದನ್ನು ಅವರು ಒತ್ತಿ ಒತ್ತಿ ಹೇಳತೊಡಗಿದರು. ದುಂಡು ಮೇಜು ಪರಿಷತ್ತಿನ ಅಲ್ಪಸಂಖ್ಯಾತರ ಉಪಸಮಿತಿಯಲ್ಲಿ ಮತ್ತೊಂದು ವಿವಾದವನ್ನು ಸಹ ಮುಂದಿಟ್ಟರು. ಅದೇನೆಂದರೆ ಅಲ್ಪಸಂಖ್ಯಾತರು ಮಂಡಿಸಿದ ಬೇಡಿಕೆಯನ್ನೇನೊ ನಾನು ಅರ್ಥ ಮಾಡಿಕೊಳ್ಳಬಲ್ಲೆ ಆದರೆ ಅಸ್ಪೃಶ್ಯರು ಮಂಡಿಸಿದ ಹಕ್ಕೊತ್ತಾಯ ನನಗೆ ಅತ್ಯಂತ ಕ್ರೂರವಾಗಿ ಕಾಣುತ್ತದೆ. ಅದರಿಂದಾಗಿ ಅವರು ಶಾಶ್ವತವಾಗಿ ಹಿಂದೂಗಳಿಂದ ಪ್ರತ್ಯೇಕಗೊಂಡಂತಾಗುತ್ತದೆ. ಅಸ್ಪೃಶ್ಯತೆಯಿಂದ ನಾಚಿಕೆಪಡಬೇಕಾದವರು ಅಸ್ಪೃಶ್ಯರಲ್ಲ, ಸವರ್ಣೀಯ ಹಿಂದೂಗಳು ಎಂಬ ಅಂಶವನ್ನು ಭಾರತದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ನಾನು ಪ್ರಚಾರ ಮಾಡುತ್ತೇನೆ. ಅಸ್ಪೃಶ್ಯತೆಯೆಂಬ ದುಷ್ಟ ಪದ್ಧತಿಯನ್ನು ತೊಡೆದುಹಾಕಲು ಹಿಂದೂ ಸುಧಾರಕರ ಗುಂಪು ಈಗ ಸಜ್ಜಾಗಿದೆ. ನನ್ನಲ್ಲಿರುವ ಎಲ್ಲ ಸಾಮರ್ಥ್ಯವನ್ನು ವಿನಿಯೋಗಿಸಿಯಾದರೂ ಈ ಬೇಡಿಕೆಯನ್ನು ನಾನೊಬ್ಬನೇ ವಿರೋಧಿಸುತ್ತೇನೆ. ಇದಕ್ಕಾಗಿ ನನ್ನ ಜೀವನವನ್ನೇ ಪಣವಿಟ್ಟಾದರೂ ಸರಿ ಎಂದು ಗಾಂಧೀಜಿಯವರು ತಮ್ಮ ಸ್ಪಷ್ಟ ಮಾತುಗಳಲ್ಲಿ ಹೇಳಿಕೆ ಕೊಟ್ಟರು.

ಇನ್ನೊಂದು ಕಡೆ ಅಂಬೇಡ್ಕರ್ ತಿಳಿಸುವಂತೆ, ಗಾಂಧೀಜಿಯವರು ತಮ್ಮ ಮಿತ್ರರೊಬ್ಬರ ಮನೆಯಲ್ಲಿ ನಡೆದ ಸಭೆಯೊಂದರಲ್ಲಿ ತಮ್ಮ ಅಸಮಾಧಾನವನ್ನು ಹೀಗೆ ತೋಡಿಕೊಂಡರಂತೆ. 'ಅಸ್ಪೃಶ್ಯರನ್ನು ನಾನು ಚೆನ್ನಾಗಿ ಬಲ್ಲೆ. ಅವರಿಗೆ ಪ್ರತ್ಯೇಕ ಪ್ರಾತಿನಿಧ್ಯ

ಬೇಕೆಂದು ಒಪ್ಪುವುದು ಅವರನ್ನು ಕೊಂದಂತಾಗುತ್ತದೆ. ಸದ್ಯದಲ್ಲಿ ಅವರು ಮೇಲ್ಜಾತಿಯವರ ಅಧೀನದಲ್ಲಿದ್ದಾರೆ. ಉತ್ತಮ ಜಾತಿಯವರು ತಮ್ಮ ಅಧೀನದಲ್ಲಿರುವ ಅಸ್ಪೃಶ್ಯರನ್ನು ತುಳಿದು ಅವರ ಮೇಲೆ ಸೇಡು ತೀರಿಸಿಕೊಳ್ಳುವ ಸಾಧ್ಯತೆಯಿರುವುದರಿಂದ ಅದನ್ನು ತಪ್ಪಿಸಲು ನಾನು ಅವರಿಗೆ ಪ್ರತ್ಯೇಕ ಪ್ರಾತಿನಿಧ್ಯ ಬೇಡವೆಂದು ಹೋರಾಡುತ್ತಿದ್ದೇನೆ' ಎಂದರಂತೆ.

ಅಸ್ಪೃಶ್ಯರ ಬೇಡಿಕೆಗಳನ್ನು ಮನ್ನಿಸಲು ಎಲ್ಲರೂ ಒಪ್ಪಿದರೆ ನಾನು ಅದನ್ನು ವಿರೋಧಿಸುವುದಿಲ್ಲ ಎಂದು ಹೇಳಿದ್ದ ಗಾಂಧೀಜಿ ಅನಂತರ ಅಸ್ಪೃಶ್ಯರ ಬೇಡಿಕೆಗಳಿಗೆ ಮಾನ್ಯತೆ ನೀಡಬೇಡಿ ಎಂದು ಎಲ್ಲರಿಗೂ ಹೇಳತೊಡಗಿದರು. ಅಸ್ಪೃಶ್ಯರ ವಿರುದ್ಧವಾಗಿ ಮಹಮ್ಮದೀಯರನ್ನು ಎತ್ತಿಕಟ್ಟಲು ಅವರ ಹದಿನಾಲ್ಕು ಬೇಡಿಕೆಗಳನ್ನು ಹಿಂದೂ ಮಹಾಸಭೆಯವರು ಮತ್ತು ಸೈಮನ್ ಕಮಿಷನ್ ನಿರಾಕರಿಸಿದ್ದರೆ ಮಹಾತ್ಮ ಗಾಂಧೀಜಿ ಮಾತ್ರ ಒಪ್ಪಿಕೊಂಡುಬಿಟ್ಟಿದ್ದರು. ಆಗಾಖಾನರು ಇಳಿದುಕೊಂಡಿದ್ದ ದೆಹಲಿಯ ರಿಟ್ಜ್ ಹೋಟಲಿಗೆ ಖುರಾನಿನ ಪ್ರತಿಯೊಂದಿಗೆ ಹೊರಟ ಗಾಂಧೀಜಿಯವರು, ಮುಸ್ಲಿಂ ಪ್ರತಿನಿಧಿಗಳನ್ನು ಅಸ್ಪೃಶ್ಯರಿಗೆ ಪ್ರತ್ಯೇಕ ಪ್ರಾತಿನಿಧ್ಯ ಬೇಕೆಂದು ಒಪ್ಪಿ ನೀವು ಹಿಂದೂ ಜನಾಂಗವನ್ನು ಏಕೆ ಒಡೆಯುತ್ತಿದ್ದೀರಿ? ಇಂತಹ ಕೃತ್ಯವೆಸಗಲು ನಿಮ್ಮ ಖುರಾನಿನಲ್ಲಿ ಮನ್ನಣೆಯಿದೆಯೆ? ಇದ್ದರೆ ಅದು ಎಲ್ಲಿ ಹೇಳಿದೆ ನನಗೆ ತೋರಿಸಿ? ತೋರಿಸಲಾಗದಿದ್ದರೆ ನೀವು ನಿಮ್ಮ ಸೋದರ ಸಮಾಜದ ಮೇಲೆ ಮಾಡುತ್ತಿರುವ ಈ ಪಾಪವನ್ನು ಏಕೆ ನಿಲ್ಲಿಸಬಾರದು ಎಂದು ಪ್ರಶ್ನಿಸಿದರಂತೆ. ಇಂತಹ ಉಪಾಯಗಳನ್ನು ದ್ರೋಹ ಎಂದು ಕರೆಯದಿದ್ದರೆ ಮತ್ಯಾವುದನ್ನು ದ್ರೋಹ ಎಂದು ಕರೆಯಬೇಕೆಂಬುದು ನನಗೆ ತಿಳಿಯದು ಎನ್ನುವ ಅಂಬೇಡ್ಕರ್ ಮುಂದಕ್ಕೆ ಹೀಗೆ ವಿಶ್ಲೇಷಿಸುತ್ತಾರೆ.

ಆ ಸತ್ತ ಪ್ರಾಣಿಯನ್ನು (ಅಸ್ಪೃಶ್ಯರನ್ನು) ಹಿಂದೂಗಳು, ಮಹಮ್ಮದೀಯರು ಮತ್ತು ಸಿಖ್ಖರು ತಮ್ಮಲ್ಲೇ ಹಂಚಿಕೊಳ್ಳಬೇಕೆಂದು ಬಯಸಿದ್ದರು. ಈ ಮೂವರಿಗೂ ಸಾಕಷ್ಟು ರಾಜಕೀಯ ಶಕ್ತಿಯನ್ನು ದೊರಕಿಸಿಕೊಡಲು ಗಾಂಧೀಜಿಯವರು ಸಿದ್ಧರಿದ್ದು, ಸಾಮಾಜಿಕ ತುಳಿತಕ್ಕೆ ಒಳಪಟ್ಟ ಅಸ್ಪೃಶ್ಯರು ತಮ್ಮ ರಕ್ಷಣೆಗಾಗಿ ವಿಶೇಷ ಪ್ರಾತಿನಿಧ್ಯ ಬೇಕೆಂದು ಪ್ರತಿಪಾದಿಸಿದಾಗ ನ್ಯಾಯ ಮತ್ತು ನೀತಿಯ ಪ್ರಜ್ಞೆಯೇ ಇಲ್ಲದೆ ಅವರ ಬೇಡಿಕೆಗಳನ್ನು ನಿರಾಕರಿಸಿದ್ದರು. ಗಾಂಧೀಜಿಯ ಈ ಧೋರಣೆಗಳಿಂದ ಅವರನ್ನು ಪಕ್ಷಪಾತಿಯೆಂದು ಕರೆಯದೆ ಬೇರೆ ಏನೆಂದು ಕರೆಯಲು ಸಾಧ್ಯ? ಎಂದು ಅಂಬೇಡ್ಕರ್ ಪ್ರಶ್ನಿಸಿದ್ದರು.

ಭಾರತೀಯ ದುಂಡು ಮೇಜು ಪರಿಷತ್ತು ಜಾತೀಯತೆ ಎಂಬ ಹೆಬ್ಬಂಡೆಗೆ ಅಪ್ಪಳಿಸಿ ನುಚ್ಚುನೂರಾಯಿತು. ಅಲ್ಪಸಂಖ್ಯಾತ ಮತೀಯರ ಮತ್ತು ಬಹುಸಂಖ್ಯಾತ ಮತೀಯರ ನಡುವೆ ಯಾವ ಒಪ್ಪಂದವೂ ಏರ್ಪಡಲಿಲ್ಲ. ಒಂದು ರೀತಿಯಲ್ಲಿ ಸಮಾವೇಶ ಮಹಾತ್ಮ ಗಾಂಧಿಯವರಿಂದಲೇ ಸಂಪೂರ್ಣವಾಗಿ ಮುರಿದುಬಿದ್ದಿತು. ಸಮಾವೇಶ ಮುರಿದುಬಿದ್ದಮೇಲೆ ಭಾರತಕ್ಕೆ ಬಂದ ಗಾಂಧೀಜಿಯವರನ್ನು ಬ್ರಿಟಿಷ್ ಸರ್ಕಾರ ಕೂಡಲೇ ಜೈಲಿಗೆ ಕಳುಹಿಸಿತು.

ಅಸ್ಪೃಶ್ಯರಿಗೆ ಪ್ರಾತಿನಿಧ್ಯ ನೀಡುವ ಬೇಡಿಕೆಯನ್ನು ತಡೆಗಟ್ಟಬೇಕೆನ್ನುವ ವಿಷಯವನ್ನು ಗಾಂಧೀಜಿಯವರು, ಯರವಾಡ ಜೈಲಿನಲ್ಲಿದ್ದಾಗಲೂ ಮರೆಯಲಿಲ್ಲ. ತಾನು ಜೈಲಿನಲ್ಲಿರುವಾಗ ಬ್ರಿಟಿಷ್ ಸರ್ಕಾರ ಅಸ್ಪೃಶ್ಯರ ಬೇಡಿಕೆಗಳನ್ನು ಎಲ್ಲಿ ಮಾನ್ಯ

ಮಾಡಿಬಿಡುವುದೋ ಎಂದು ಅಂಜಿ ಅಂದಿನ ಭಾರತದ ರಾಜ್ಯಾಂಗ ಕಾರ್ಯದರ್ಶಿಯಾದ ಸರ್ ಸ್ಯಾಮ್ಯುಯೆಲ್ ಹೋರ್ ಅವರಿಗೆ ಪತ್ರ ಬರೆದರು: 'ಪ್ರಿಯ ಸರ್ ಸ್ಯಾಮ್ಯುಯೆಲ್ ಅವರೆ, ಬಹುಶಃ ತಮಗೆ ನೆನಪಿರಬಹುದು. ದುಂಡು ಮೇಜಿನ ಸಮಾವೇಶದಲ್ಲಿ ಅಲ್ಪಸಂಖ್ಯಾತರು ತಮ್ಮ ಬೇಡಿಕೆಗಳನ್ನು ಸಲ್ಲಿಸಿದಾಗ ನಾನು ಹೇಳಿದ್ದೆ, ನನ್ನ ಜೀವನವನ್ನು ಪಣವಾಗಿಟ್ಟಾದರೂ ಶೋಷಿತ (ಅಸ್ಪೃಶ್ಯರಿಗೆ) ವರ್ಗದವರಿಗೆ ಪ್ರತ್ಯೇಕ ಪ್ರಾತಿನಿಧ್ಯದ ಅಧಿಕಾರ ದೊರಕದ ಹಾಗೆ ಹೋರಾಡುತ್ತೇನೆಂದು. ಈ ಮಾತುಗಳು ನಾನು ಚರ್ಚೆಯ ಬಿಸಿ ಕ್ಷಣಗಳಲ್ಲಿ ಅಕಸ್ಮಾತಾಗಿ ಹೇಳಿದ ಮಾತುಗಳಲ್ಲ ಅಥವಾ ಕೇಳಲು ಚೆನ್ನಾಗಿರುತ್ತದೆ ಎನ್ನುವ ಕಾರಣದಿಂದಲೂ ಹೇಳಿದ ಮಾತುಗಳಲ್ಲ. ನಾನು ಹೇಳಿದ ಮಾತುಗಳನ್ನು ಕಾರ್ಯರೂಪಕ್ಕೆ ತರಲು ಭಾರತಕ್ಕೆ ಮರಳಿದ ಕೂಡಲೇ ನನ್ನನ್ನು ಜೈಲಿಗೆ ಕಳುಹಿಸಲಾಯಿತು. ಶೋಷಿತ ವರ್ಗದ ಬೇಡಿಕೆಗಳನ್ನು ಈಡೇರಿಸಿದರೆ ನಾನು ಕೂಡಲೇ ಉಪವಾಸ ಸತ್ಯಾಗ್ರಹ ಕೈಗೊಳ್ಳುತ್ತೇನೆ. ನಾನು ಈಗ ಎತ್ತಿರುವ ವಿಷಯ ಕೇವಲ ಒಂದು ಕಾರ್ಯಕ್ರಮವಲ್ಲ. ಅದು ನನ್ನ ಜೀವನದ ಅವಿಚ್ಛಿನ್ನ ಭಾಗವಾಗಿದೆ. ನನ್ನ ಅಂತರಾತ್ಮದ ಮಾತನ್ನು ನಾನೆಂದೂ ಮೀರಲಾರೆ. ಜನ ನನ್ನನ್ನು ಹುಚ್ಚ ಎಂದರೂ ಸರಿ, ನನ್ನನ್ನು ಜೈಲಿನಿಂದ ಬಿಡುಗಡೆ ಮಾಡಿದರೂ ಸತ್ಯಾಗ್ರಹದ ಕರ್ತವ್ಯದಿಂದ ನಾನು ಹೊರಳುವುದಿಲ್ಲ. ನನ್ನ ಭಯ, ಅನಿಸಿಕೆಗಳು ಸತ್ಯವಾಗಿದ್ದರೆ ಸಾಕೆಂದು ಆಶಿಸುತ್ತೇನೆ. ಶೋಷಿತ ವರ್ಗದವರಿಗೆ ಪ್ರತ್ಯೇಕ ಪ್ರಾತಿನಿಧ್ಯದ ಕಾನೂನು ರಚಿಸುವ ಉದ್ದೇಶವು ಬ್ರಿಟಿಷ್ ಸರ್ಕಾರಕ್ಕೆ ಇಲ್ಲ ಎಂದೇ ಆಶಿಸುತ್ತೇನೆ' – ಗಾಂಧಿ.

ಇದಾದ ನಂತರ ಇನ್ನೂ ಹಲವು ಬೆದರಿಕೆ ಮತ್ತು ವಿರೋಧಗಳಿಗೆ ಬ್ರಿಟಿಷ್ ಸರ್ಕಾರ ಬಗ್ಗದಿದ್ದಾಗ ಮಹಾತ್ಮ ಗಾಂಧೀಜಿ ಅಸ್ಪೃಶ್ಯರಿಗಾಗಿ ಪ್ರತ್ಯೇಕ ಪ್ರಾತಿನಿಧ್ಯದ ಅಧಿಕಾರದ ಆಶ್ವಾಸನೆಯ ವಿರುದ್ಧ 1933ರ ಸೆಪ್ಟೆಂಬರ್, 20ರಂದು ಆಮರಣಾಂತ ಉಪವಾಸವನ್ನು ಪ್ರಾರಂಭ ಮಾಡಿಯೇಬಿಟ್ಟರು. ಒಂದು ಸಮಾಜದ ಮೇಲೆ ಮತ್ತು ತಮ್ಮ ಪ್ರಾಣದ ಮೇಲೆ ತುಂಬ ಆಸೆಯಿಟ್ಟುಕೊಂಡಿದ್ದ ಗಾಂಧೀಜಿಯ ಉಪವಾಸದಿಂದ ಒಂದು ಸಮಸ್ಯೆ ಉಂಟಾಯಿತು. ಗಾಂಧೀಜಿಯವರನ್ನು ಉಳಿಸುವುದು ಹೇಗೆ? ಇದ್ದ ಒಂದೇ ಮಾರ್ಗವೆಂದರೆ ಮತೀಯ ವಿಭಜನೆಯಲ್ಲಿ ಬದಲಾವಣೆ ಮಾಡಿ ಗಾಂಧೀಜಿಯವರ ಅಂತರಾತ್ಮಕ್ಕೆ ನೋವಾಗದ ಹಾಗೆ ಪರಿಹಾರ ಕಾಣಿಸುವುದು. ಆದರೆ ಬ್ರಿಟಿಷ್ ಮಂತ್ರಿಮಂಡಲವು ಅದನ್ನು ಹಿಂತೆಗೆದುಕೊಳ್ಳುವುದಾಗಲಿ ಅಥವಾ ಬದಲಾಯಿಸುವುದಾಗಲಿ ಅಸಾಧ್ಯವೆಂದೂ, ಒಂದು ವೇಳೆ ಅಸ್ಪೃಶ್ಯರು ಮತ್ತು ಸವರ್ಣೀಯ ಹಿಂದೂಗಳು ಪರಸ್ಪರ ಒಪ್ಪಿದರೆ ಆ ಬದಲಿ ಸೂತ್ರವನ್ನು ಅಂಗೀಕರಿಸುವುದೆಂದೂ ಬ್ರಿಟಿಷ್ ಪ್ರಧಾನ ಮಂತ್ರಿಯವರು ಸ್ಪಷ್ಟಪಡಿಸಿದರು. ದುಂಡು ಮೇಜಿನ ಸಮಾವೇಶದಲ್ಲಿ ಅಂಬೇಡ್ಕರ್ ಅಸ್ಪೃಶ್ಯರನ್ನು ಪ್ರತಿನಿಧಿಸಿದ್ದರಿಂದ ಅವರ ಒಪ್ಪಿಗೆ ದೊರಕದೆ ಬೇರೆ ಅಸ್ಪೃಶ್ಯರು ಒಪ್ಪಿಗೆ ನೀಡುವುದಿಲ್ಲವೆಂದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಹಾಗಾಗಿ ಎಲ್ಲರ ಕಣ್ಣಲ್ಲೂ ತಪ್ಪಿತಸ್ಥರಾಗಿದ್ದ ಅಂಬೇಡ್ಕರ್ ಅವರು 'ಅಂದು ನನ್ನಷ್ಟು ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿಕೊಂಡಿದ್ದವರು ಇನ್ಯಾರೂ ಇರಲಿಲ್ಲವೆಂದರೆ ಅತಿಶಯೋಕ್ತಿಯೇನಲ್ಲ' ಎಂದು ನೊಂದು ನುಡಿದಿದ್ದರು.

ಒಂದು ಕಡೆ ಸಾಮಾನ್ಯ ಮನುಷ್ಯನಾಗಿ ಗಾಂಧೀಜಿಯನ್ನು ಸಾವಿನಿಂದ

ತಪ್ಪಿಸಬೇಕಾಗಿತ್ತು. ಇನ್ನೊಂದು ಕಡೆ ಅಸ್ಪೃಶ್ಯರಿಗಾಗಿ ಬ್ರಿಟಿಷ್ ಪ್ರಧಾನಮಂತ್ರಿಯವರು ಕೊಟ್ಟಿರುವ ರಾಜಕೀಯ ಹಕ್ಕುಗಳನ್ನು ಕಾಪಾಡಿಕೊಳ್ಳಬೇಕಾಗಿತ್ತು. ಈ ಎರಡೂ ಹೊಣೆಗಳನ್ನು ಅವರು ಏಕಕಾಲಕ್ಕೆ ನಿರ್ವಹಿಸಬೇಕಾಯಿತು. ಹಲವು ಮುಖಂಡರು ಮತ್ತು ಸಂಘಸಂಸ್ಥೆಗಳು ಕರೆಗೆ ಓಗೊಟ್ಟು ಗಾಂಧೀಜಿಯವರನ್ನು ಉಳಿಸಲು 'ಪೂನಾ ಒಪ್ಪಂದ'ವನ್ನು ಮಾಡಿಕೊಳ್ಳಬೇಕಾಯಿತು. ಈ ಜಂಟಿ ಮತದಾನ ಸೂತ್ರದಿಂದ ಅಸ್ಪೃಶ್ಯರೆಲ್ಲ ಪ್ರತ್ಯೇಕವಾಗಿ ಚುನಾವಣೆಗೆ ನಿಂತು ಗೆಲ್ಲಲು ಸಾಧ್ಯವಾಗದ ಕಾರಣ ಅಂದಿನ ರಾಜಕೀಯ ಪಕ್ಷಗಳಲ್ಲಿ ತೂರಿಕೊಂಡರು.

ಒಂದು ವೇಳೆ ಯಾವ ಪಕ್ಷದ ಆಧಾರವೂ ಇಲ್ಲದಿದ್ದು ಪ್ರತ್ಯೇಕ ಮತದಾರ ಸೂತ್ರವಿದ್ದಿದ್ದರೆ ಚುನಾವಣೆಯಲ್ಲಿ ಗೆಲ್ಲುವ ಅವಕಾಶಗಳಿದ್ದೂ ಅಸ್ಪೃಶ್ಯರು ಸ್ವಂತವಾಗಿಯೇ ನಿಲ್ಲುತ್ತಿದ್ದರು. ಆದರೆ ಹಾಗಾಗದ ಕಾರಣ ಅವರು ಅಂದಿನ ಗೆಲ್ಲುವ ಕುದುರೆ ಕಾಂಗ್ರೆಸ್ ಪಕ್ಷದ ಜೊತೆ ಸೇರಿ ಪುಕ್ಕಲು ನಾಯಿಗಳಂತಾದರು. ಅದು ಇಂದಿಗೂ ಮುಂದುವರಿಯುತ್ತಿದೆ. ಪ್ರತ್ಯೇಕ ಪ್ರಾತಿನಿಧ್ಯ ಅಧಿಕಾರ ವಿಚಾರದ ಹಿಂದಿದ್ದ ಆದರ್ಶಕ್ಕೆ ಗಾಂಧೀಜಿ ಹೆದರಿದ್ದರು. ಇದರಿಂದ ಮುಂದೊಂದು ದಿನ ಹಿಂದೂ ದೊಡ್ಡಿಯಿಂದ ಅಸ್ಪೃಶ್ಯರು ಪ್ರತ್ಯೇಕಗೊಂಡು ಬೇರೆ ದಾರಿ ಹಿಡಿಯುತ್ತಿದ್ದರು ಎನ್ನುವುದು ಗಾಂಧೀಜಿಯವರಿಗೆ ತಿಳಿದಿರಬೇಕು. ಆದ್ದರಿಂದ ಆಮರಣಾಂತ ಉಪವಾಸ ಮಾಡಿ ಅಸ್ಪೃಶ್ಯರ ವಿರುದ್ಧ ಗೆದ್ದುಬಿಟ್ಟರು.

ಮಹಾತ್ಮ ಗಾಂಧೀಜಿಯವರು ಮಾತನಾಡುತ್ತಿದ್ದ ವಿಚಾರಗಳು ಮತ್ತು ಅವರ ಹೃದಯದಲ್ಲಿ ಅಡಗಿದ್ದ ವಿಚಾರಗಳು ಬೇರೆ ಬೇರೆ ಎನ್ನುವುದಕ್ಕೆ ಇದೊಂದು ಒಳ್ಳೆಯ ಉದಾಹರಣೆಯಾಗಬಹುದು. ಡಾ॥ ಖರೆ ತಮ್ಮ ಹೊಸ ಮಧ್ಯ ಪ್ರಾಂತ್ಯದ ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಒಬ್ಬ ಅಸ್ಪೃಶ್ಯ ಪದವೀಧರನನ್ನು ಸೇರಿಸಿಕೊಂಡಾಗ ಗಾಂಧೀಜಿಯವರು ತೀವ್ರವಾಗಿ ಪ್ರತಿಭಟಿಸಿ ಆ ಅಸ್ಪೃಶ್ಯ ಮಂತ್ರಿಯನ್ನು ಕೈಬಿಡುವಂತೆ ಮಾಡಿದರು. ಆಗ ಅಸ್ಪೃಶ್ಯರ ಒಂದು ಗುಂಪು ಗಾಂಧೀಜಿಯವರನ್ನು ವಿವರಣೆ ಕೇಳಿದಾಗ, ಹೀಗಾಗುತ್ತದೆಂದು ಮೊದಲೇ ಊಹಿಸಿದ್ದ ಮಹಾತ್ಮರು ಮೌನವ್ರತ ಆಚರಣೆಯನ್ನು ಶುರು ಮಾಡಿಯೇಬಿಟ್ಟಿದ್ದರು. ಅಸ್ಪೃಶ್ಯರು, ಗಾಂಧೀಜಿ ವಿರುದ್ಧ ಅವರದೇ ಅಸ್ತ್ರವಾದ ಸತ್ಯಾಗ್ರಹವನ್ನು ನಡೆಸತೊಡಗಿದಾಗ ಅವಮಾನ ಸಹಿಸಲಾರದ ಗಾಂಧೀಜಿಯವರು ಶೇಗಾವ್ ಬಿಟ್ಟು ಪಠಾಣರಿಗೆ ಅಹಿಂಸೆಯನ್ನು ಬೋಧಿಸಲು ಪ್ರವಾಸ ಹೊರಟುಬಿಟ್ಟರು. ಕೊನೆಗೂ ಅದರ ಬಗ್ಗೆ ಗಾಂಧೀಜಿ ಉಸಿರೆತ್ತಲೇ ಇಲ್ಲ. ಮಹಾತ್ಮರು ಇಂತಹ ಅನೇಕ ಕೀಳು ಆದರ್ಶಗಳನ್ನು ನೇರವಾಗಿಯೇ ಅಸ್ಪೃಶ್ಯರ ವಿರುದ್ಧ ಪ್ರದರ್ಶಿಸಿದ್ದರು. ಇಷ್ಟೆಲ್ಲ ಪಕ್ಷಪಾತಿಯಾದರೂ, ಜನಸಾಮಾನ್ಯರಾದ ಅಸ್ಪೃಶ್ಯರು ಮಹಾತ್ಮಾ ಗಾಂಧಿಯವರನ್ನು ಬಹಳವಾಗಿ ನೆಚ್ಚಿಕೊಂಡು ಪ್ರೀತಿಸುತ್ತಿದ್ದರು.

## ಅಧ್ಯಾಯ-13

ನಾನು ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಬೋಧಿಸುವ ಧರ್ಮವನ್ನು ಮಾತ್ರ ಇಷ್ಟಪಡುತ್ತೇನೆ

-ಅಂಬೇಡ್ಕರ್.

# ದಲಿತ ಬಹುಜನ ಸಮಾಜ

ಈಗ ದೇಶ ಜಾತಿವಾದಿಗಳ ನಡುವೆ ಸಿಕ್ಕಿಕೊಂಡು ಸಂದಿಗ್ಧ ಸ್ಥಿತಿಯಲ್ಲಿ ನರಳುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಆಧ್ಯಾತ್ಮಿಕತೆಯಲ್ಲಿ ಉನ್ನತ ಸ್ಥಾನ ಪಡೆದಿರುವ ದೇಶ ಭಾರತ ಎಂಬುದಾಗಿ ಹಿಂದೂಗಳು ಕೊಚ್ಚಿಕೊಳ್ಳುತ್ತಾರೆ. ಆದರೆ ಈ ದೇಶಕ್ಕೆ ಬ್ರಿಟಿಷರು ಬಂದ ಮೇಲೆಯೇ ದಲಿತ ಬಹುಜನರಿಗೆ ಅಕ್ಷರ ಮೋಕ್ಷ ದೊರಕಿದ್ದು. ಮುಖ್ಯವಾಗಿ ಮಹಾರಾಷ್ಟ್ರದ ಪ್ರಾಂತ್ಯಗಳಲ್ಲಿ ಮೊದಲಿಗೆ ದಲಿತ ಬಹುಜನ ಸಮಾಜದಲ್ಲಿ ಚಿಂತಕರು ಕಾಣಿಸಿಕೊಂಡರು. ಬ್ರಾಹ್ಮಣ ವಿರೋಧಿ ಚಿಂತನೆಯ ಹರಿಕಾರ ಮಹಾತ್ಮ ಜ್ಯೋತಿಬಾ ಫುಲೆ ಹಾಗೂ ರಾಷ್ಟ್ರವಾದಿ, ಜಾತಿ ವಿರೋಧಿ ಆಂದೋಲನದ ಹರಿಕಾರ ಅಂಬೇಡ್ಕರ್ ಅವರು ದಲಿತ ಬಹುಜನ ಹಿತಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟರು.

ಮೊದಲಿಗೆ ಅಂಬೇಡ್ಕರ್ ಅವರ ಜಾತಿವಿರೋಧಿ ತತ್ವಜ್ಞಾನವು ಹಿಂದೂ ಧರ್ಮದ ಜೀವಸೆಲೆಯಾದ ಬ್ರಾಹ್ಮಣವಾದಿ ಏಕಸ್ವಾಮ್ಯದ ಮೇಲೆಯೇ ಆಕ್ರಮಣಗೈದಿತು. ಅಸ್ಪೃಶ್ಯ ಜಾತಿಯಲ್ಲಿ ಹುಟ್ಟಿ ದಲಿತ ಬಹುಜನ ಸಮಾಜದಲ್ಲಿ ಕ್ರಾಂತಿಯ ಜ್ಯೋತಿಯನ್ನು ಪ್ರಥಮ ಬಾರಿಗೆ ಹಚ್ಚಿದ ಗೌರವ ಅಂಬೇಡ್ಕರ್ ಅವರಿಗೆ ಸಲ್ಲುತ್ತದೆ. ಜಾತೀಕೃತ ಗುಲಾಮಗಿರಿಯ ವಿರುದ್ಧ ದಲಿತ ಬಹುಜನರು ತಿರುಗಿಬೀಳುವಲ್ಲಿ ಅವರು ಮೊದಲು ಸ್ಫೂರ್ತಿಯಾದರು. ಅನಂತರ ನಿಧಾನವಾಗಿ ಖಚಿತವಾಗಿ ಅಧಿಕಾರ ಸಂಬಂಧಗಳನ್ನು ಬದಲಾಯಿಸಲು ಅಂಬೇಡ್ಕರ್ ಗೌತಮ ಬುದ್ಧನ ತತ್ವಜ್ಞಾನವನ್ನು ಆಧಾರವಾಗಿ ಸ್ವೀಕರಿಸಿದರು.

'ರಾಮರಾಜ್ಯ' ಎಂಬ ಬ್ರಾಹ್ಮಣವಾದಿ ಪರಿಕಲ್ಪನೆಯನ್ನು ಮುಂದಿಟ್ಟ ಗಾಂಧಿಮಾರ್ಗವನ್ನು ಧಿಕ್ಕರಿಸಿ ಬ್ರಾಹ್ಮಣ-ಬನಿಯಾ-ನವಕ್ಷತ್ರಿಯರು ನಾಯಕರಾಗಿರುವ ಯಾವ ಪಕ್ಷವನ್ನು ಸೇರೆವು ಎಂದು, ದಲಿತ ಬಹುಜನರ ರಾಜಕೀಯ ತೀರ್ಮಾನದಿಂದ ಹಾಗೂ ಜಾತಿ ವಿರೋಧಿ ಕ್ರಾಂತಿಗೆ ಬೇಕಾದ ರಾಜಕೀಯ ಹಾಗೂ ಬೌದ್ಧಿಕ ನಾಯಕತ್ವವನ್ನು ದಲಿತ ಬಹುಜನರ ಸಮಾಜದಲ್ಲೇ ಸೃಷ್ಟಿಸಲು ಹೊರಟ ಅಂಬೇಡ್ಕರ್ ಅವರ ಪ್ರಯತ್ನದಿಂದ ಹಿಂದೂವಾದ ತತ್ತರಿಸಿತು. ಆದರೆ ಅದನ್ನು ಗಾಂಧೀಜಿಯವರು ತಮ್ಮ

ಸತ್ಯಾಗ್ರಹದಿಂದ ಸಡಿಲಿಸಿ ಪೂನಾ ಒಪ್ಪಂದದಲ್ಲಿ ಮುಳುಗಿಸಿಬಿಟ್ಟರು.

ವಸಾಹತುಶಾಹಿ ಪ್ರಜಾಸತ್ತಾತ್ಮಕ ಆಳ್ವಿಕೆಯ ಹೆಸರಲ್ಲಿ ಕಾಂಗ್ರೆಸ್ ಹಿಂದೂಗಳು ದೆಹಲಿ ಮತ್ತು ಅನ್ಯಪ್ರಾಂತ್ಯಗಳಲ್ಲಿ ಅಧಿಕಾರ ಹಿಡಿದು ಸಂಸದೀಯ ಪ್ರಜಾಪ್ರಭುತ್ವದ ತಾತ್ಪರ್ಯದಲ್ಲಿ ಬ್ರಾಹ್ಮಣವಾದಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದರು. ಅನಂತರ ಕೆಲವೇ ವರ್ಷಗಳಲ್ಲಿ ವಸಾಹತುಶಾಹಿಯ ಅಧಿಕಾರ ತೊಲಗಿ, ಅಲ್ಲಿ ಬ್ರಾಹ್ಮಣವಾದಿ ಅಧಿಕಾರಶಾಹಿಯ ಪ್ರತಿಷ್ಠಾಪನೆಯಾಯಿತು. ಈ ಬ್ರಾಹ್ಮಣಶಾಹಿ ಶಕ್ತಿಗಳು, ವಿಶ್ವದಲ್ಲಿ ರೂಪುಗೊಳ್ಳುತ್ತಿದ್ದ ಬಂಡವಾಳಶಾಹಿಗೆ ತಕ್ಕಂತೆ ತಮ್ಮನ್ನು ಬದಲಾಯಿಸಿಕೊಂಡವು. ಕಾರಣ, ಅವರ ಬದುಕು ಆಂಗ್ಲೀಕರಣಗೊಂಡಿತು. ಅರೆ-ಬಂಡವಾಳಶಾಹಿ ಬ್ರಾಹ್ಮಣವಾದಿ ಬದುಕನ್ನು ಅವರು ಒಪ್ಪಿಕೊಂಡರು. ಆಂಗ್ಲರ ಬದುಕನ್ನು ಅನುಸರಿಸಿದ ಮಾತ್ರಕ್ಕೆ ಅವರ ಜಾತಿವಾದಿ, ಸರ್ವಾಧಿಕಾರಿ ಮನೋಭಾವವೇನೂ ಬದಲಾಗಲಿಲ್ಲ. ದೇಶದ ಎಲ್ಲಾ ಸರ್ವೋಚ್ಚ ಅಧಿಕಾರ ಕೇಂದ್ರಗಳು ಬ್ರಾಹ್ಮಣೀಕರಣಗೊಂಡವು. ಅಧಿಕಾರಶಾಹಿಯ ಅಧಿಕಾರವ್ಯಾಪ್ತಿ ವಿಶಾಲಗೊಂಡಿತು. ಆಂಗ್ಲೀಕರಣಗೊಂಡ ಪರಿಣಾಮವಾಗಿ ಅವರಲ್ಲಿ ಕೆಲವರು ವಿಶ್ವತಂತ್ರಜ್ಞಾನ ಅರ್ಥವ್ಯವಸ್ಥೆಯ ಮಾರುಕಟ್ಟೆಯಲ್ಲಿ ತೂರಿಕೊಂಡರು. ಕೆಲವೇ ವರ್ಷಗಳಲ್ಲಿ ಪ್ರಪಂಚದ ಟಿ.ವಿ. ಮಾಧ್ಯಮ ಬ್ರಾಹ್ಮಣೀಕರಣಗೊಂಡಿತು. ಕನ್ನಡ ಟಿ.ವಿ. ಮಾಧ್ಯಮಗಳ ಬಹಳಷ್ಟು ಚಾನಲ್ ಮುಖ್ಯಸ್ಥರು (ಅಧ್ಯಕ್ಷರು) ಬ್ರಾಹ್ಮಣರೆನ್ನುವ ಮಾತುಗಳು ಟಿವಿ ಮಾಧ್ಯಮಗಳಲ್ಲಿ ಕೇಳಿಬಂದವು. ಅಷ್ಟೇಕೆ ಟಿವಿ ಧಾರಾವಾಹಿಗಳಲ್ಲಿ ನಟಿಸುವ ಬಿಳಿ ಬಣ್ಣದ ಹೆಣ್ಣು ಮಕ್ಕಳು, ಗಂಡು ಮಕ್ಕಳು ಹೆಚ್ಚಾಗಿ ಬ್ರಾಹ್ಮಣರೇ. ಇದು ಹೇಗೆ ಸಂಭವಿಸುತ್ತದೆ? ಎಲ್ಲವೂ ನಮ್ಮ ಕಣ್ಣುಗಳ ಮುಂದೆಯೇ ಇದೆ. ಎಲ್ಲಾ ಪ್ರಜಾಪ್ರಭುತ್ವದ ಮಹಿಮೆ.

ರಾಮಾಯಣ, ಮಹಾಭಾರತ, ಶಿವಪುರಾಣ, ವೇದಾಂತ ಎಲ್ಲವನ್ನೂ ಈಗ ಟಿ.ವಿ.ಗಳು ಬಿತ್ತರಿಸುತ್ತಿವೆ. ಅಲ್ಲಿ ಬರುವ ಟೈಟಲ್ ಕಾರ್ಡ್‌ಗಳು ಏಕಪ್ರಕಾರವಾಗಿವೆ. ಬಿಳಿ ತೋಳಿನ ತೊಗಲು ಬೊಂಬೆಗಳು ಅರೆಬೆತ್ತಲೆಯಾಗಿ ಕುಣಿಯುತ್ತ ಯುವಜನಾಂಗವನ್ನು ಒಂದು ಕಡೆ ಕೆಡಿಸುತ್ತ, ಮತ್ತೊಂದು ಕಡೆ ಹಣದ ಕೊಳ್ಳೆ ಹೊಡೆಯುತ್ತಿವೆ. ಈ ಹಗಲು ದರೋಡೆಯ ಮೆರವಣಿಗೆಗಳನ್ನು ಬೆರಗುಕಣ್ಣುಗಳಿಂದ ನೋಡುತ್ತಿರುವ ಹಿಂದೂ ಪಟ್ಟಭದ್ರ ಶಕ್ತಿಗಳು ಬೀದಿಗೊಂದು, ಕೇರಿಗೊಂದು ಗುಡಿಗಳನ್ನು ಕಟ್ಟುತ್ತ ಪ್ರತಿಯೊಂದು ವಿಷಯಕ್ಕೂ ಯಾಗ, ಯಜ್ಞಗಳನ್ನು ನಡೆಸುತ್ತಾ ಜನರನ್ನು ಮೌಢ್ಯದಲ್ಲಿ ಮುಳುಗಿಸುತ್ತಿವೆ. ವಾಸ್ತು, ಹುಟ್ಟಿದ ನಕ್ಷತ್ರಗಳ ಆಧಾರದ ಮೇಲೆ ಎಲ್ಲಾ ಕೈ ಬೆರಳುಗಳಿಗೂ ಉಂಗುರಗಳನ್ನು ತೊಡಿಸುವುದು ಬೆಳಕಿಗೆ ಬರುತ್ತಿದೆ. ಬೆರಳುಗಳನ್ನು ಎಣಿಸಿ ಹೇಳುತ್ತಿದ್ದ ಭವಿಷ್ಯವನ್ನು ಇಂದು ಕಂಪ್ಯೂಟರ್‌ನಲ್ಲಿ ಹೇಳಲಾಗುತ್ತಿದೆ. ಒಟ್ಟಿನಲ್ಲಿ ಸಮಯಕ್ಕೆ ತಕ್ಕ ಹಾಗೆ ಜನರನ್ನು ಮೂಢನಂಬಿಕೆಗಳಲ್ಲಿ ಮುಳುಗಿಸಿ ಅವರಿಂದ ಹಣವನ್ನು ದೋಚಲಾಗುತ್ತಿದೆ. ಈ ಕೆಲಸಗಳಲ್ಲಿ ಸವರ್ಣೀಯರೂ, ಶೂದ್ರರೂ ಎಲ್ಲರೂ ಸೇರಿಕೊಂಡಿದ್ದಾರೆ. ಒಂದು ಕಡೆ ಆಧುನಿಕತೆ ಹೆಚ್ಚಾದಂತೆ ಇನ್ನೊಂದು ಕಡೆ ಮೂಢನಂಬಿಕೆಗಳು ವಿವಿಧ ರೂಪಗಳನ್ನು ಪಡೆದುಕೊಳ್ಳುತ್ತಿವೆ. ಬ್ರಾಹ್ಮಣರಿಗಿಂತ ಶೂದ್ರರೇ ಈಗ ಹೆಚ್ಚು ಮೂಢಮತಿಗಳಾಗಿದ್ದಾರೆ.

ಗ್ರಾಮೀಣ ಅರ್ಥವ್ಯವಸ್ಥೆಯ ಬಗ್ಗೆ ಹಿಂದೂವಾದಿಗಳಿಗೆ ಕಾಳಜಿಯೇ ಇಲ್ಲ. ಯಾಕೆಂದರೆ

ಗ್ರಾಮೀಣ ಅರ್ಥವ್ಯವಸ್ಥೆಯ ಸ್ವರೂಪ ಬದಲಾಗಿಬಿಟ್ಟರೆ, ದಲಿತ ಬಹುಜನರ ಸ್ಥಿತಿ ಸುಧಾರಿಸಿ, ಅವರು ಹೊಸ ಶಕ್ತಿ ಪಡೆಯುತ್ತಾರೆ. ಆದುದರಿಂದ ಆಂಗ್ಲೀಕರಣಗೊಂಡ ಹಿಂದೂವಾದಿ ವರ್ಗವು ಗ್ರಾಮೀಣ ಅಭಿವೃದ್ಧಿ ವಿರೋಧಿ ಸಮಾಜ ಶಕ್ತಿಯಾಗಿ ರೂಪತಾಳಿ ನಿಂತಿದೆ. ರಾಜಕೀಯ ಪಕ್ಷಗಳು, ನ್ಯಾಯಾಲಯಗಳು, ವಿಶ್ವವಿದ್ಯಾಲಯಗಳು ಮತ್ತು ಆಸ್ಪತ್ರೆಗಳು ವಿಭಿನ್ನ ಅಧಿಕಾರ ಕೇಂದ್ರಗಳಿಂದ ಕಾರ್ಯ ನಿರ್ವಹಿಸುತ್ತಿವೆ. ಹಿಂದೂವಾದಿಗಳು ಭೂಒಡೆತನವನ್ನು ತೀವ್ರಗತಿಯಲ್ಲಿ ಹೊಂದುತ್ತಾಬಂದ ನವಕ್ಷತ್ರಿಯರ ಜೊತೆಗೆ ದುಷ್ಟಕೂಟಗಳನ್ನು ರಚಿಸಿಕೊಂಡಿದೆ. ನವಕ್ಷತ್ರಿಯರು ಆಂಗ್ಲೀಕರಣಗೊಂಡ ನಗರವಾಸಿ ಹಿಂದೂವಾದಿ ಶಕ್ತಿಗಳ ಜೊತೆಗೂಡಿ ಎಲ್ಲಾ ಅಧಿಕಾರ ಕೇಂದ್ರಗಳಿಂದ ದೂರವಿಡಲ್ಪಟ್ಟ ಉತ್ಪಾದನಾನಿರತ ಜಾತಿಗಳ ಮೇಲೆ ಸವಾರಿ ಮಾಡುತ್ತಿದ್ದಾರೆ. ಚರಿತ್ರೆಯಲ್ಲಿ ನವಕ್ಷತ್ರಿಯರು ಪ್ರತಿಕ್ರಿಯಾವಾದಿಗಳಾಗಿದ್ದಾರಷ್ಟೆ ಅಲ್ಲದೇ ಪ್ರಜಾಸತ್ತಾತ್ಮಕ ಆಧುನಿಕತೆಯ ಗಾಳಿ ದೇಶದಲ್ಲಿ ಬೀಸುತ್ತಿರುವ ಈ ಕಾಲದಲ್ಲಿ ಅವರು ನಿರ್ವಹಿಸುತ್ತಿರುವ ಪಾತ್ರ ಅಪಾಯಕಾರಿಯಾಗಿದೆ. ಇಂದಿನ ಬಿಜೆಪಿ ಸರ್ಕಾರ ಬಡಪಾಯಿ ಕೃಷಿಕರು ಒಂದೆರಡು ಲಕ್ಷ ರೂಪಾಯಿ ಸಾಲವನ್ನು ಬಾಯಿ ಬಾಯಿ ಬಡಿದುಕೊಂಡರೂ ಮನ್ನಾ ಮಾಡುತ್ತಿಲ್ಲ. ಆದರೆ ಟಾಟಾ, ಅಂಬಾನಿ, ಮೋದಿ ಅಂತಹವರ ಸಾವಿರಾರು ಲಕ್ಷಗಳನ್ನು ಒಳಗೊಳಗೆ ಮನ್ನಾ ಮಾಡಿದೆ. ಇದಕ್ಕೆ ಒಂದು ಕಾರಣ ಇರಲೇ ಬೇಕು?

1980 ಮತ್ತು 90ರ ದಶಕಗಳಲ್ಲಿ ಅಂಬೇಡ್ಕರ್‌ವಾದಿ ಚಿಂತನೆಯ ಮೂಸೆಯೊಳಗಿಂದ ಮೂಡಿದ ದಲಿತ ಬಹುಜನ ಬುದ್ಧಿಜೀವಿಗಳು, ಬ್ರಾಹ್ಮಣವಾದಿ ಶಕ್ತಿಗಳನ್ನು ಪದಚ್ಯುತಗೊಳಿಸಿ ಎಲ್ಲಾ ಕ್ಷೇತ್ರಗಳಲ್ಲಿನ ಅಧಿಕಾರ ಕೇಂದ್ರಗಳನ್ನು ವಶಪಡಿಸಿಕೊಳ್ಳಲು ಮಂಡಲ್ ಆಯೋಗದ ಸಹಾಯದಿಂದ ಪ್ರಯತ್ನ ನಡೆಸಿದರು. ಇದಕ್ಕೆ ಪರ ಹಾಗೂ ವಿರುದ್ಧ ಹೋರಾಟಗಳು ಅಖಿಲ ಭಾರತ ಮಟ್ಟದಲ್ಲಿ ಕಾಣಿಸಿಕೊಂಡು, ಬ್ರಾಹ್ಮಣವಾದಿ ಹಿಂದೂ ಧರ್ಮವನ್ನು ಮೊದಲಿಗೆ ದುರ್ಬಲಗೊಳಿಸುವ ಪ್ರಯತ್ನ ಅದಾಗಿತ್ತು. ಈ ಅಪೂರ್ವ ಆಂದೋಲನವನ್ನು ಸಹಿಸದ ಹಿಂದುತ್ವವಾದಿಗಳು ಎಚ್ಚೆತ್ತುಕೊಂಡು ದಲಿತೀಕರಣ ಪ್ರಕ್ರಿಯೆ ತಪ್ಪಿಸಲು, ಆ ಹೊತ್ತಿನಲ್ಲಿ ಕೋಮುದಳ್ಳುರಿಯನ್ನು ದೇಶದಾದ್ಯಂತ ಹೊತ್ತಿಸಿಬಿಟ್ಟರು. 1992ರ ಡಿಸೆಂಬರ್ 6ನೇ ತಾರೀಖು ಅಂಬೇಡ್ಕರ್ ಪರಿನಿರ್ವಾಣದ ದಿನ ಬಾಬರಿ ಮಸೀದಿಯನ್ನು ಧ್ವಂಸಗೊಳಿಸಿಬಿಟ್ಟರು. ದಲಿತ ಬಹುಜನರನ್ನು ದಿಕ್ಕು ತಪ್ಪಿಸುವ ಕಾರ್ಯತಂತ್ರ ಅದಾಗಿದ್ದು ಇಡೀ ದೇಶದ ಗಮನವನ್ನು ಬೇರೆ ಕಡೆಗೆ ತಿರುಗಿಸಿಬಿಟ್ಟಿತು.

ಚರಿತ್ರೆಯಲ್ಲಿ ಆಂದೋಲನಗಳು ತಲೆ ಎತ್ತಿದಾಗಲೆಲ್ಲ ಬ್ರಾಹ್ಮಣವಾದಿ ಶಕ್ತಿಗಳು ಅವನ್ನು ಒಡೆದು ಹಾಕಿದವು. ಮೊದಲು ಶೂದ್ರರಾಗಿದ್ದವರಿಗೆ ಕ್ಷತ್ರಿಯ ಪಟ್ಟ ಕಟ್ಟಿ ಮಣೆಹಾಕಿದ ಕಾರಣವೂ ಇದೇ ಆಗಿದೆ. ಇಂತಹ ಕುಟಿಲತೆಯಿಂದ ಬೌದ್ಧ, ಜೈನ, ವೀರಶೈವ ಲಿಂಗಾಯಿತ ಕ್ರಾಂತಿಗಳಂತಹ ಅನೇಕ ಶೂದ್ರ ಕ್ರಾಂತಿಗಳು ವಿಫಲವಾದವು. ದುರಂತವೆಂದರೆ, ತಾವು ಪಡೆದುಕೊಂಡ ಅಧಿಕಾರವನ್ನು ಉಳಿಸಿಕೊಳ್ಳಲು ಹಾಗೂ ಇನ್ನೂ ಹೆಚ್ಚಿನ ಅಧಿಕಾರವನ್ನು ಪಡೆಯಲು ತಮಗೆ ಬ್ರಾಹ್ಮಣಶಾಹಿ ಎಂಬ ಸಾಧನದ ಅವಶ್ಯಕತೆಯಿದೆ ಎಂದು ನವಕ್ಷತ್ರಿಯರು ನಂಬಿ ಕುಳಿತಿದ್ದಾರೆ. ನನಗೆ ಗೊತ್ತಿದ್ದ ಒಬ್ಬ ಕಮ್ಮ ಅಧಿಕಾರಿ, ಕೇಂದ್ರ ಸರಕಾರದಲ್ಲಿ 30 ವರ್ಷಗಳ ಕಾಲ ಅಧಿಕಾರ ನಡೆಸಿದ ಮೇಲೆ

ಇಳಿವಯಸ್ಸಿನಲ್ಲಿ ನಾನು ಬ್ರಾಹ್ಮಣನಾಗಬೇಕಲ್ಲ ಎಂದು ಅಂಗಲಾಚುತ್ತಿದ್ದರು. ಹೀಗೆ ಅನೇಕರನ್ನು ನಾನು ನೋಡಿದ್ದೇನೆ. ಇವರು ಮೇಲ್ಜಾತಿಗೆ ಸೇರಿದ್ದು ಅಸ್ಪೃಶ್ಯತೆಯೆನ್ನುವ ಯಾವ ಸಾಮಾಜಿಕ ಬಹಿಷ್ಕಾರ ಇವರ ಮೇಲೆ ಇಲ್ಲದಿದ್ದರೂ ಇವರೇಕೆ ಹೀಗೆ ಅಂಗಲಾಚುತ್ತಿದ್ದರು ಎನ್ನುವುದು ನನಗೆ ಅರ್ಥವಾಗಲಿಲ್ಲ. ಅಂದರೆ ಬಹಳ ಜನರಿಗೆ ಬೇರೆಯವರಿಗಿಂತ ಸಾಮಾಜಿಕವಾಗಿ ಮೇಲೆ ಇರಬೇಕು ಎನ್ನುವ ಆಸೆ ಹುಟ್ಟಿಕೊಂಡಿದೆ ಎನಿಸುತ್ತದೆ.

ಶೂದ್ರರು, ಅತಿಶೂದ್ರರು ಮತ್ತು ಅಲ್ಪಸಂಖ್ಯಾತರು ರಾಷ್ಟ್ರಪತಿ ಸ್ಪೀಕರ್ ಆಗಿ ನೇಮಕಗೊಂಡರೂ, ಬ್ರಾಹ್ಮಣಶಾಹಿ ಸೈದ್ಧಾಂತಿಕ ಮತ್ತು ದಾರ್ಶನಿಕ ಕಟ್ಟಳೆಯ ಒಳಗೇ ಅವರು ಕಾರ್ಯ ನಿರ್ವಹಿಸಬೇಕಾಗುತ್ತದೆ. ದಾರ್ಶನಿಕ ಹಾಗೂ ಸೈದ್ಧಾಂತಿಕ ಅಧಿಕಾರವು ಬ್ರಾಹ್ಮಣ-ಬನಿಯಾಗಳ ಕೈಯಲ್ಲೇ ಉಳಿದುಕೊಂಡಿರುವುದರಿಂದ ನವಕ್ಷತ್ರಿಯರು ಪ್ರಧಾನಿಯಾದರೂ ಯಾರನ್ನೂ ವಿಮೋಚನೆಗೊಳಿಸಲಾರರು. ದಾರ್ಶನಿಕ ಮತ್ತು ಸೈದ್ಧಾಂತಿಕ ಅಧಿಕಾರ ಬೇರೆ ಬೇರೆ ಎನ್ನುವುದೇ ಅವರಿಗೆ ತಿಳಿದಿಲ್ಲ. ಯಾವುದೇ ಒಂದು ಬ್ರಾಹ್ಮಣರ ಅಧೀನದಲ್ಲಿರುವ ದೇವಸ್ಥಾನದಲ್ಲಿ ನವಕ್ಷತ್ರಿಯರು ಅರ್ಚಕನಾಗುವುದನ್ನು ಬ್ರಾಹ್ಮಣರು ಸಹಿಸುವುದಿಲ್ಲ. ಇನ್ನು ಕೆಳಸ್ತರದ ಜಾತಿಗಳು ಹತ್ತಿರಕ್ಕೆ ಹೋಗಲೂ ಸಹ ಸಾಧ್ಯವಿಲ್ಲ. ದೇವಸ್ಥಾನಗಳನ್ನು ಯಾವ ಜನಾಂಗಗಳೇ ಕಟ್ಟಲಿ, ಅಲ್ಲಿ ಬ್ರಾಹ್ಮಣರನ್ನೇ ತಂದು ಪೂಜಾರಿಯಾಗಿಸುತ್ತಾರೆ.

ಶೂದ್ರ ಮೇಲ್ಜಾತಿಗಳಿಂದ ಬಂದ ನವಕ್ಷತ್ರಿಯರು ತಾವು ಹಿಂದೂ ಧರ್ಮೀಯರು ಎಂದು ನಂಬಿರುವರಲ್ಲದೆ, ಇತರ ಕೆಳಜಾತಿಗಳವರನ್ನು ಅವಮಾನಿಸುವ ಹಕ್ಕು ತಮಗಿದೆ ಎಂಬ ಅಹಂಕಾರವನ್ನು ಬೆಳೆಸಿಕೊಳ್ಳುತ್ತಿರುವುದು ಈಗ ನಿಚ್ಚಳವಾಗಿ ಕಂಡುಬರುತ್ತಿದೆ. ತಾವು ಕ್ಷತ್ರಿಯರು ಎಂದು ಘೋಷಿಸಿಕೊಂಡು ಅಧಿಕಾರದ ಎಲ್ಲಾ ಹಂತಗಳಲ್ಲಿ ಮತ್ತು ರಾಜಕೀಯದಲ್ಲಿ ಬೇರುಬಿಡಲು ಯತ್ನಿಸುತ್ತಿದ್ದಾರೆ. ತಾವು ಹಿಂದೂ ಆಧ್ಯಾತ್ಮಿಕತೆಯ ಭಾಗ ಎಂಬುದು ನವಕ್ಷತ್ರಿಯರ ನಂಬಿಕೆ. ಇವರು ಇತ್ತೀಚೆಗೆ ಹಿಂದುತ್ವದ ಪೋಷಕರೂ ಆಗುತ್ತಿದ್ದಾರೆ. ಬ್ರಾಹ್ಮಣರು ಹಾಗೂ ಬನಿಯಾಗಳು ದಲಿತ ಬಹುಜನರಲ್ಲಿ ಬದಲಾಗುತ್ತಿರುವ ಆರ್ಥಿಕ ಮತ್ತು ರಾಜಕೀಯ ಎಚ್ಚರವನ್ನು ಹತ್ತಿಕ್ಕುತ್ತಿದ್ದರೆ, ನವಕ್ಷತ್ರಿಯರು ತಾವು ಕ್ಷತ್ರಿಯ ವಂಶದವರೆಂದು ಬೀಗುತ್ತಾ ವಿವಿಧ ಹಂತಗಳಲ್ಲಿನ ಅಧಿಕಾರ ಸಂಬಂಧಗಳ ಮೇಲೆ ಕಣ್ಣಿಟ್ಟು ದಲಿತರನ್ನು ತುಳಿಯುತ್ತಿದ್ದಾರೆ. ಜೀರ್ಣಿಸಿಕೊಳ್ಳುವುದರಲ್ಲಿ ಹಾಗೂ ಬಹಿಷ್ಕರಿಸುವುದರಲ್ಲಿ ಹಿಂದೂ ಧರ್ಮವನ್ನು ಮೀರಿಸುವ ಧರ್ಮ ಇನ್ನೊಂದಿಲ್ಲ.

ಬ್ರಾಹ್ಮಣ-ಬನಿಯಾಗಳು ನವಕ್ಷತ್ರಿಯರನ್ನು ಜೀರ್ಣಿಸಿಕೊಂಡು ಅವರಿಗಿಂತ ಕೆಳಶ್ರೇಣಿಯ ಜಾತಿಗಳನ್ನು ಬಹಿಷ್ಕರಿಸಲು ಈಗ ಸನ್ನದ್ಧರಾಗಿದ್ದಾರೆ. ಇದು ಇನ್ನೂ ಸ್ವಲ್ಪಮಟ್ಟಿಗೆ ಬ್ರಾಹ್ಮಣ-ಬನಿಯಾ ಮತ್ತು ನವಕ್ಷತ್ರಿಯ ಗುಂಪುಗಳ ಮಧ್ಯೆ ಸಂಘರ್ಷದ ಹಂತದಲ್ಲಿಯೇ ಉಳಿದುಕೊಂಡಿದೆ. ಏಕೆಂದರೆ ನವಕ್ಷತ್ರಿಯರು ಗ್ರಾಮೀಣ ಉತ್ಪಾದನಾ ಕ್ರಮದಿಂದ ಇನ್ನೂ ಪೂರ್ಣವಾಗಿ ದೂರ ಸರಿದಿಲ್ಲ. ಅವರ ಬೇರುಗಳು ಇನ್ನೂ ಗ್ರಾಮೀಣ ಕ್ಷೇತ್ರದಲ್ಲಿ ಸಾಂಸ್ಕೃತಿಕವಾಗಿ ಗಟ್ಟಿಯಾಗಿ ಉಳಿದುಕೊಂಡಿವೆ. ಈ ಜಾತಿಗಳು, ಬ್ರಾಹ್ಮಣ-ಬನಿಯಾ ಜಾತಿಗಳು ಮತ್ತು ಕೆಳಜಾತಿಗಳ ಮಧ್ಯದ ಕೊಂಡಿಯಾಗಿದೆ. ಇದರಿಂದಾಗಿ ನವಕ್ಷತ್ರಿಯರ ರಾಜಕೀಯ ನಾಯಕತ್ವ ಗಟ್ಟಿಗೊಳ್ಳುತ್ತಿದೆ. ಹೊಲ, ಗದ್ದೆ,

ಮನೆಗಳಲ್ಲಿ ಪ್ರತಿ ದಿನವೂ ಹತ್ತಾರು ಗಂಟೆಗಳ ಕಾಲ ದುಡಿಯುವ ದಲಿತರನ್ನು, ದಲಿತ ಬಹುಜನರನ್ನು ನವಕ್ಷತ್ರಿಯರು ನಿರಂತರವಾಗಿ ಶೋಷಿಸುತ್ತಿದ್ದಾರೆ. ಹಳ್ಳಿಗಳನ್ನು ಆಕ್ರಮಿಸುತ್ತಿರುವ ಆಧುನಿಕತೆಯಿಂದಾಗಿ, ಬ್ರಾಹ್ಮಣವಾದ ಯಾವಾಗಲೋ ನಶಿಸಿಹೋಗಬೇಕಿತ್ತು. ಆದರೆ ನವಕ್ಷತ್ರಿಯರು ಬ್ರಾಹ್ಮಣವಾದದ ಸಂರಕ್ಷಕರಾಗಿ ಪರಿಣಮಿಸಿದ್ದಾರೆ. ತಮ್ಮ ಪೂರ್ವ ಸಂಸ್ಕೃತಿಯನ್ನು (ಶೂದ್ರ ಸಂಸ್ಕೃತಿ) ನಿರಾಕರಿಸುತ್ತಾ ತಾವು ಬ್ರಾಹ್ಮಣ-ಬನಿಯಾಗಳಿಗೆ ಸಮೀಪದವರೆಂದು, ತಮಗೆ ತಾವೇ ಜೀಗುತ್ತಿರುವುದು ಕಾಣಬರುತ್ತಿದೆ. ಈಗ ಹಿಂದುತ್ವಕ್ಕೆ ಜಯಘೋಷ ಹಾಕುತ್ತಿರುವುದು ಇವರೇ. ಆದರೆ ಈಗ ಬೆಳೆಯುತ್ತಿರುವ ನಗರ, ಪಟ್ಟಣಗಳು ಇವರ ಶಕ್ತಿ, ಯುಕ್ತಿಯನ್ನು ಸಾಯಿಸುತ್ತಿರುವಂತೆ ದುಡಿಯುವ ಜನಾಂಗ, ವರ್ಗಗಳನ್ನು ತಮ್ಮ ಕಡೆಗೆ ಸೆಳೆದುಕೊಳ್ಳುತ್ತಿವೆ. ಇಲ್ಲಿಯೂ ಇವರು ಖಾಸಗೀಕರಣ ಅಥವಾ ಖಾಸಗಿ ಒಡೆಯರ ತೆಕ್ಕೆಗೆ ಬಿದ್ದು ದುಡಿತಕ್ಕೆ ತಕ್ಕ ಫಲ ಸಿಕ್ಕದೆ ಹೈರಾಣವಾಗಿ ಹೋಗುತ್ತಿದ್ದಾರೆ.

ಹಿಂದೊಮ್ಮೆ ದಲಿತ-ಬಹುಜನ ಸಂಸ್ಕೃತಿಯನ್ನು ಅನುಸರಿಸುತ್ತಿದ್ದ ಮಧ್ಯಮ ವರ್ಗದ ಜನ ತಮ್ಮ ಮಹಿಳೆಯರನ್ನು ಈಗ ಮಡಿ, ವ್ರತ, ಪೂಜೆ-ಪುನಸ್ಕಾರಗಳ ಆಚರಣೆಗೆ ಪ್ರೋತ್ಸಾಹಿಸುತ್ತಿದ್ದಾರೆ. ನವಕ್ಷತ್ರಿಯರ ಹೆಂಗಸರು ತಮ್ಮ ಗಂಡಸರನ್ನು ಬಹುವಚನದಲ್ಲಿ, ಗಂಡಸರು ತಮ್ಮ ಪತ್ನಿಯರನ್ನು ಏಕವಚನದಲ್ಲಿ ಕರೆಯಲಾರಂಭಿಸಿದ್ದಾರೆ. ಈ ಸಂಸ್ಕೃತಿ ಮೂಲವಾಗಿ ಪಿತೃಪ್ರಧಾನ ಬ್ರಾಹ್ಮಣ-ಬನಿಯಾ ಸಂಸ್ಕೃತಿ. ಈಗಲೂ ಎಷ್ಟೋ ಬ್ರಾಹ್ಮಣರ ಮನೆಗಳಲ್ಲಿ ಮಗ, ತಾಯಿ, ಅಕ್ಕ ತಂಗಿಯರನ್ನು ಏಕವಚನದಲ್ಲಿ ಮಾತನಾಡಿಸುತ್ತಾರೆ. ನವಕ್ಷತ್ರಿಯರ ಮನೆಗಳು ಈಗ ದೈವಿ ಮತ್ತು ಬ್ರಾಹ್ಮಣೀಕೃತವಾಗಿ ಹಾಗೂ ದೈವಿಕವಾಗಿಯೂ, ಇನ್ನೂ ಕೆಲವೊಮ್ಮೆ ಜಾತ್ಯತೀತವಾಗಿಯೂ ಕಾಣಿಸಿಕೊಳ್ಳುವ ಪುರುಷಶಾಹಿಗಳ ನಡುವೆ ತೂಗುಯ್ಯಾಲೆಯಾಡುತ್ತಿವೆ. ಇದರ ಮಧ್ಯ 'ವಾಸ್ತು' ಎಂಬ ಕೆಟ್ಟ ಹುಳು ಮಧ್ಯಮ ವರ್ಗದ ಮನೆಗಳ ಒಳಗೆ ನುಗ್ಗಿ ಅವರ ತಲೆಗಳಲ್ಲಿ ಕುಳಿತು ಕೆಟ್ಟ ಹುಳುವಿನಂತೆ ಕೊರೆಯುತ್ತಿದೆ.

ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗೆ ನವಕ್ಷತ್ರಿಯರಿಂದಾದ ಹಾನಿ ಅಪಾರ. ಇಂದು ಹಿಂದುತ್ವ ಮತ್ತು ಆಧುನಿಕ ಫ್ಯಾಸಿಸಂಗೆ ಅವರೇ ಆಧಾರಸ್ತಂಭ. ನವಕ್ಷತ್ರಿಯರು ತಮ್ಮ ನೆರವಿಗೆ ಬರಲಿರುವ ಮಿತ್ರರೆಂದು ಗುರುತಿಸಬೇಕೋ ಅಥವಾ ಬ್ರಾಹ್ಮಣವಾದಿಗಳ ಜೊತೆಗಿರುವ ಶತ್ರುಗಳೆಂದು ಪರಿಗಣಿಸಬೇಕೋ ಎನ್ನುವ ಸಂದಿಗ್ಧತೆಯನ್ನು ಇಂದು ದಲಿತ ಬಹುಜನರು ಎದುರಿಸುತ್ತಿದ್ದಾರೆ. 1990ರಲ್ಲಿ ಅವರ ಮಂಡಲ್ ವಿರೋಧಿ ಪ್ರತಿಕ್ರಿಯಾವಾದಿ ನಿಲುವು ಮತ್ತು 1993ರಲ್ಲಿ ಉತ್ತರ ಪ್ರದೇಶದ ಚುನಾವಣೆಯಲ್ಲಿನ ಅವರ ನಿಲುವನ್ನು ಪರಿಶೀಲಿಸಿದರೆ, ನವಕ್ಷತ್ರಿಯರನ್ನು ದಲಿತರ ಪರವೆಂದು ನಂಬುವುದಾಗಲಿ ಅಥವಾ ಅವರನ್ನು ತಟಸ್ಥಗೊಳಿಸುವುದಾಗಲಿ ಅಸಾಧ್ಯ. ಅವರು ಬ್ರಾಹ್ಮಣವಾದಿ ಹಿಂದುತ್ವದ ಪ್ರಬಲ ಸಮರ್ಥಕರಾಗಿರುವುದರಿಂದ ಅವರನ್ನು ಅನುಮಾನವಿಲ್ಲದೆ ಶತ್ರುಗಳೆಂದೇ ಪರಿಗಣಿಸಬೇಕಾಗಿದೆ. (Why I am not a Hindu, ಕಾಂಚಾ ಐಯಲಯ್ಯ / ನಾನೇಕೆ ಹಿಂದೂ ಅಲ್ಲ, ಕನ್ನಡಕ್ಕೆ – ಮಂಗ್ಳೂರು ವಿಜಯ)

ಭಾರತದಲ್ಲಿ ದಲಿತ ಬಹುಜನ ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ನಡೆಸುವ ಹೋರಾಟದಲ್ಲಿ ಕೋಮುವಾದಿ ಹಿಂದು ಬ್ರಾಹ್ಮಣರನ್ನು, ಬನಿಯಾಗಳನ್ನು ಮತ್ತು

ನವಕ್ಷತ್ರಿಯರನ್ನು ಶತ್ರುಗಳೆಂದು ಪರಿಗಣಿಸದೇ ಅನ್ಯಮಾರ್ಗವಿಲ್ಲ. ಈ ಹೋರಾಟದಲ್ಲಿ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು, ಇತರ ಹಿಂದುಳಿದ ಜಾತಿಗಳು ಹಾಗೂ ಅಲ್ಪಸಂಖ್ಯಾತರ ಸಂಯುಕ್ತರಂಗವೊಂದೇ ಆಶಾದಾಯಕ ಶಕ್ತಿಯನ್ನು ಕೊಡಬಲ್ಲದು. ಈ ಸಮುದಾಯಗಳ ನಡುವೆಯೂ ಕಠೋರ ಅಸಹನೆ, ಅಸಮಾನತೆಗಳ ಜೊತೆಗೆ ಹಲವು ವಿರೋಧಾಭಾಸಗಳಿರುವುದಂತೂ ಸತ್ಯ. ಯಾವುದೇ ಅನಗತ್ಯ ಘರ್ಷಣೆಗಳಿಗೂ ಅವಕಾಶ ಕೊಡದೆ ಇವುಗಳನ್ನು ಬಗೆಹರಿಸಿಕೊಳ್ಳುವ ಮಾರ್ಗವನ್ನು ಕಂಡುಕೊಳ್ಳುವುದು ಈ ಸಮುದಾಯಗಳ ಅತ್ಯಗತ್ಯವಾದ ಕೆಲಸವಾಗಿದೆ.

ಈಗ ಈ ಮೇಲಿನ ಬಣಗಳನ್ನು ಒಟ್ಟುಗೂಡಿಸಿ ಸಮರ್ಥ ನಾಯಕತ್ವ ನೀಡುವ ಒಬ್ಬ ನಾಯಕ ಸಂಯುಕ್ತರಂಗದ ಒಳಗಿಂದ ಹೊರಬರಬೇಕಾಗಿದೆ. ಅಂತಹ ಒಂದು ಪುಟ್ಟ ಪ್ರಯತ್ನ ಕೋಲಾರದಲ್ಲಿ ಆಗಸ್ಟ್ 1998ರಂದು 'ಅಹಿಂದ' ಎಂಬ ಹೆಸರಿನ ಕೆಳಗೆ ಅನಾವರಣಗೊಂಡಿತಾದರೂ ಅದು ದೂರ ಸಾಗಿ ಬರಲಿಲ್ಲ. ಹಿಂದಿನ ಕರ್ನಾಟಕದ ಮುಖ್ಯಮಂತ್ರಿ ಸಿದ್ಧರಾಮಯ್ಯ, ನಾನು 'ಅಹಿಂದ' ಮುಖ್ಯಮಂತ್ರಿ ಎಂದು ಹೇಳಿಕೊಳ್ಳುತ್ತಿದ್ದರು. ಕರ್ನಾಟಕದ ಜನತೆ ಭಾರಿ ಪ್ರಬುದ್ಧರು ಎನ್ನುವ ಮಾತಿದೆ. ಅವರು ಪ್ರತಿ ಚುನಾವಣೆಯಲ್ಲೂ ಕೇಂದ್ರ ಸರಕಾರದಲ್ಲಿ ಬರುವ ಪಕ್ಷಕ್ಕೆ ವಿರುದ್ಧವಾದ ಪಕ್ಷವನ್ನು ರಾಜ್ಯದಲ್ಲಿ ಆಡಳಿತಕ್ಕೆ ತರುತ್ತಾರೆ. ಅಂದರೆ ಪ್ರತಿ ಸಲವೂ ಕೇಂದ್ರ ಸರಕಾರದಿಂದ ರಾಜ್ಯಕ್ಕೆ ದೊರಕುವ ಯಾವುದೇ ಸಹಾಯ, ಹಣ/ಯೋಜನೆಗಳನ್ನು ದೊರಕದಂತೆ ತಾವೇ ಮತ ಚಲಾಯಿಸುತ್ತಿದ್ದಾರೆ! ಕೇವಲ 29 ಕಿ.ಮೀ.ಗಳ ಉದ್ದದ ಕಳಸಾ-ಬಂಡೂರಿ ಅಥವಾ ಮಹದಾಯಿ ಯೋಜನೆಯೇ ಇದಕ್ಕೆ ದೊಡ್ಡ ಉದಾಹರಣೆಯಾಗಿದೆ. ಆ ನೀರನ್ನು ಗೋವಾ ರಾಜ್ಯ ಉಪಯೋಗಿಸಿಕೊಳ್ಳದಿದ್ದರೂ ಅದು ಕಾಲು ಅಡ್ಡ ಹಾಕಿ ಕುಳಿತಿದೆ. ಒಂದೂವರೆ ದಶಕದಿಂದ ಇದು ನ್ಯಾಯಾಲಯಗಳಲ್ಲಿ ಕೊಳೆಯುತ್ತಿದೆ. ಕೇಂದ್ರ ಮತ್ತು ಎರಡೂ ರಾಜ್ಯಗಳಲ್ಲಿ ಒಂದೇ ಸರಕಾರ ಇದ್ದಿದ್ದರೆ ಬಹುಶಃ ಈ ಸಮಸ್ಯೆ ಇತ್ಯರ್ಥವಾಗುತ್ತಿತ್ತೋ ಏನೋ? ರಾಜಕೀಯ ನಾಯಕರಿಗೆ/ಪಕ್ಷಗಳಿಗೆ ಇಂತಹ ಸಮಸ್ಯೆಗಳನ್ನು ಹಾಗೇ ಉಳಿಸಿಕೊಂಡರೆ ಮಾತ್ರ ಸುದ್ದಿಯಲ್ಲಿ ಇರುತ್ತೇವೆ ಮತ್ತು ಜನರು ನಮ್ಮ ಹಿಂದೆ ಇರುತ್ತಾರೆ ಎಂಬ ಲೆಕ್ಕಾಚಾರಗಳನ್ನು ಇಟ್ಟುಕೊಂಡಿರುತ್ತಾರೆ.

## ದಲಿತರ ಮತಾಂತರ ಮತ್ತು ಅವರ ಸ್ಥಿತಿಗತಿಗಳು

ಧರ್ಮಗಳು ಮಾನವ ಸಮಾಜದ ಒಂದು ಪ್ರಚಂಡ ಶಕ್ತಿಯಾಗಿ ಬೆಳೆದುನಿಂತಿವೆ. ರಾಷ್ಟ್ರಗಳನ್ನು ಛಿದ್ರಗೊಳಿಸಿದ್ದು, ಒಗ್ಗೂಡಿಸಿದ್ದು, ಸಾಮ್ರಾಜ್ಯಗಳನ್ನು ಹರಿದು ಹಂಚಿ ಹೋಗುವಂತೆ ಮಾಡಿದ್ದು, ಒಂದುಗೂಡಿಸಿದ್ದು, ಅತ್ಯಂತ ಕ್ರೂರ ಪಾಶವೀ ಕೃತ್ಯಗಳಿಗೆ, ಪದ್ಧತಿಗಳಿಗೆ ಪ್ರೇರಣೆ ನೀಡಿದ್ದು ಧರ್ಮಗಳೇ. ಅದ್ಭುತ ಶೌರ್ಯ, ಸಾಹಸ, ತ್ಯಾಗ, ಭಕ್ತಿ, ಭೀಕರ ಯುದ್ಧ, ರಕ್ತಪಾತ, ಬಂಡಾಯ ಮತ್ತು ಶಿಕ್ಷೆಗಳ ಜೊತೆಗೆ ರಾಷ್ಟ್ರಗಳ ಸ್ವಾತಂತ್ರ್ಯ, ಸಮೃದ್ಧಿ, ಶಾಂತಿ ಎಲ್ಲಕ್ಕೂ ಧರ್ಮಗಳೇ ಪ್ರೇರಕ ಶಕ್ತಿಯಾಗಿವೆ.

ಇಂತಹ ಒಂದು ಧರ್ಮದಲ್ಲಿ ಹುಟ್ಟಿದ ಮನುಷ್ಯ ಬೇರೆ ಧರ್ಮಕ್ಕೆ ಮತಾಂತರ ಹೊಂದುವುದಾದರೂ ಏತಕ್ಕೆ? ಸವರ್ಣೀಯ ಹಿಂದೂಗಳು ಅಸ್ಪೃಶ್ಯರ ವಿರುದ್ಧ ಎಂತಹ ಹಿಂಸೆಯನ್ನಾದರೂ ಪ್ರಯೋಗಿಸಲು ಹೇಸುವುದಿಲ್ಲ. ಹಿಂದೂಗಳ ದೇವಾಲಯ, ರಸ್ತೆ

ಮತ್ತು ಬೀದಿಗಳಿಗೂ ಅಸ್ಪೃಶ್ಯರು ಪ್ರವೇಶಿಸುವಂತಿಲ್ಲ. ಅವರ ಗಾಳಿ ಸೋಕಿದರೂ, ಮೈಲಿಗೆ. ಹಿಂದೂಗಳು ಮತ್ತು ಅಸ್ಪೃಶ್ಯರ ನಡುವಿನ ಮೈಲಿಗೆ, ಮಲಿನತೆಯ ಬಗ್ಗೆಯೇ ಸಾವಿರಾರು ಪುಟಗಳಷ್ಟು ವಿವರಗಳನ್ನು ನೀಡಬಹುದು. ಆಗ್ರಾ ಜಿಲ್ಲೆಯಲ್ಲಿ ನಡೆದ ಒಂದು ಸ್ಯಾಂಪಲ್ ಹೀಗಿದೆ.

ಬ್ರಾಹ್ಮಣನೊಬ್ಬ ತನ್ನ ಮನೆಯಲ್ಲಿ ವಿಷ್ಣುವಿನ ವಿಗ್ರಹವನ್ನು ದಿನವೂ ಪೂಜಿಸುತ್ತಿದ್ದ. ಅದನ್ನು ನೋಡಿದ ಚಮ್ಮಾರನೊಬ್ಬ ವಿಷ್ಣುವಿನ ವಿಗ್ರಹ ತಂದು ತಾನೂ ಪೂಜೆ ಮಾಡತೊಡಗಿದ. ಬ್ರಾಹ್ಮಣನಿಗೆ ಇದು ತಿಳಿದು ವಿಪರೀತ ಕ್ರುದ್ಧನಾಗಿ ಹಳ್ಳಿಯ ಇತರರ ಸಹಾಯದಿಂದ ಅಸ್ಪೃಶ್ಯನನ್ನು ಹಿಡಿದುಕೊಂಡು ವಿಷ್ಣುವಿನಂಥ ದೇವರನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡುವಷ್ಟು ಉದ್ಧಟತನ ಬಂತೆ ನಿನಗೆ? ಎಂದು ಚೆನ್ನಾಗಿ ಬಡಿದ. ಕೊನೆಗೆ ಆ ಅಸ್ಪೃಶ್ಯನ ಬಾಯಿಗೆ ಒಂದಿಷ್ಟು ಹೊಲಸನ್ನು ತುರುಕಿ ಬಿಟ್ಟುಬಿಟ್ಟರು. ಆ ಚಮ್ಮಾರ ಹಿಂದೂ ಧರ್ಮವನ್ನು ಒಂದೇ ಏಟಿಗೆ ಗುಂಡಿಗೆ ಒಗೆದು ಇಸ್ಲಾಂ ಧರ್ಮವನ್ನು ಸೇರಿಕೊಂಡುಬಿಟ್ಟ.

ಯಾವುದೇ ಧಾರ್ಮಿಕ ಉದ್ದೇಶವಿಲ್ಲದೆ ಮತಾಂತರ ಜರುಗಿದ ಅನೇಕ ಘಟನೆಗಳು ಚರಿತ್ರೆಯಲ್ಲಿ ದೊರಕುತ್ತವೆ. ಹಾಗೆಯೇ ಒತ್ತಾಯ ಮತ್ತು ವಂಚನೆಗಳ ಮೂಲಕವೂ ಮತಾಂತರಗಳು ನಡೆದಿವೆ. ಅಸ್ಪೃಶ್ಯರು ಹಿಂದೂ ಧರ್ಮವನ್ನು ತ್ಯಜಿಸಿ ಇತರ ಧರ್ಮಕ್ಕೆ ಮತಾಂತರ ಹೊಂದುವುದು ಮುಖ್ಯವಾಗಿ ಅಸ್ಪೃಶ್ಯತೆಯ ಸಮಸ್ಯೆಯ ಪರಿಹಾರಕ್ಕೆ ಎನ್ನುವುದು ನಿಜವಾದರೂ ಕೆಲವೊಮ್ಮೆ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸಮಾನತೆಯನ್ನು ಪಡೆಯುವ ಇಚ್ಛೆಯಿಂದಲೂ ಆಗಿರುತ್ತದೆ. ಹಿಂದೂ ಧರ್ಮದಲ್ಲಿ ಅಸ್ಪೃಶ್ಯನಾದವನು ಕೊನೆಯವರೆಗೂ ಅಂತ್ಯಜನಾಗಿಯೇ ಉಳಿಯುತ್ತಾನೆ. ಅಸ್ಪೃಶ್ಯರ ಮೇಲಿರುವ ಹಿಂದೂ ಜಾತಿಗಳೆಲ್ಲ ಲಕ್ಷಾಂತರ ಅಸ್ಪೃಶ್ಯರು ತಮಗಿಂತ ಕೆಳಮಟ್ಟದಲ್ಲಿದ್ದಾರೆ ಎನ್ನುವ ಪ್ರಜ್ಞೆಯಿಂದ ತಾವು ಶ್ರೇಷ್ಠ ಎನ್ನುವ ಭಾವನೆಯನ್ನು ಬೆಳೆಸಿಕೊಂಡಿದ್ದಾರೆ.

ಅಂಬೇಡ್ಕರ್ ಎಲ್ಲಾ ಧರ್ಮಗಳನ್ನು ಆಳವಾಗಿ ಅಧ್ಯಯನ ಮಾಡಿದ ಮೇಲೆ ಐದು ಲಕ್ಷ ಮಹಾರ್ ಜನರ ಸಮೇತ ಹಿಂದೂ ಧರ್ಮವನ್ನು ತೊರೆದು ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಇದು ಭಾರತದ ಇತಿಹಾಸದಲ್ಲಿ ಏಕಕಾಲಕ್ಕೆ ಐದು ಲಕ್ಷಗಳಷ್ಟು ಜನರು ಮತಾಂತರ ಹೊಂದಿದ ಅತ್ಯಂತ ದೊಡ್ಡ ಘಟನೆಯಾಯಿತು. ಭಾರತದ ಉದ್ದಗಲಕ್ಕೂ ಕೋಲಾಹಲವಾಯಿತು. ಮಹಾರ್ ಜನಾಂಗ ಬೌದ್ಧ ಧರ್ಮವನ್ನು ಸ್ವೀಕರಿಸಿದರೂ ಅಸ್ಪೃಶ್ಯತೆ ಎಂಬ ತಲೆತಲಾಂತರದ ದುಷ್ಟ ಹಿಂದೂ ಪೀಡನೆ ಅವರನ್ನು ಬಿಡಲಿಲ್ಲ. ಆದರೆ ಒಂದು ಗೆಲುವನ್ನು ಮಾತ್ರ ಅವರು ಸಾಧಿಸಿದ್ದರು. ನಾವು ಹಿಂದೂಗಳಲ್ಲ ಎನ್ನುವುದು. ಇಂದಿಗೂ ಮಹಾರ್ ಜನಾಂಗದ ಜನರೆಲ್ಲ ಬೆಳಗ್ಗೆ ಎದ್ದು ಬುದ್ಧನ ಪಟದ ಮುಂದೆ ಒಂದು ಊದುಕಡ್ಡಿ ಹಚ್ಚಿ 'ಜೈ ಭೀಮ್' ಎಂದು ಎಲ್ಲಾ ಹಿಂದೂ ದೇವರುಗಳನ್ನೂ ತಿರಸ್ಕರಿಸುತ್ತಾರೆ.

## ಬೌದ್ಧ ಧರ್ಮ ದೀಕ್ಷೆ ಪಡೆದ ಅಂಬೇಡ್ಕರ್

ವಿಜಯ ದಶಮಿ ಎಂದರೆ ಮೈಸೂರು ಅರಮನೆಯ ವೈಭವ, ಜಂಬೂ ಸವಾರಿ, ನೂರಾರು ರೀತಿಯ ದೇಶಿ ಕಲೆಗಾರರ ಆಟಗಳು ನೋಡುಗರ ಕಣ್ಣುಗಳ ಮುಂದೆ

ನಿಲ್ಲುತ್ತವೆ. ನಾಗಪುರಕ್ಕೆ ವರ್ಗವಾಗಿ ಆರು ತಿಂಗಳಾಗಿದ್ದ ನಾನು ವಿಜಯ ದಶಮಿಯ ದಿನ ದೀಕ್ಷಭೂಮಿಯ ಕಡೆಗೆ ಹೊರಟಿದ್ದೆ. ರಸ್ತೆಗಳೆಲ್ಲ ಸಿಂಗಾರಗೊಂಡಂತೆ ಕಂಗೊಳಿಸುತ್ತಿದ್ದರೆ ಗಂಡು ಹೆಣ್ಣು ಎನ್ನದೆ ಎಲ್ಲರೂ ಮೈಸೂರಿನ ಜಂಬೂ ಸವಾರಿಗೆ ಹೊರಟಂತೆ ಸಂಭ್ರಮದಿಂದ ಎಲ್ಲಾ ರಸ್ತೆಗಳಲ್ಲೂ ಹೊರಟಿದ್ದರು. ಹೆಣ್ಣುಮಕ್ಕಳು ಬಿಳಿ ಸೀರೆ ಕುಪ್ಪಸ ತೊಟ್ಟು ಒಂದು ಬಿಳಿ ಬಟ್ಟೆಯನ್ನು ಭುಜದ ಮೇಲೆ ಹಾಕಿಕೊಂಡಿದ್ದರೆ, ಗಂಡಸರು ಬಿಳಿ ಶರ್ಟು ಪ್ಯಾಂಟುಗಳನ್ನು ಧರಿಸಿದ್ದರು. ಯುವಕರು ಅಭಿಮಾನದಿಂದ ಅಂಬೇಡ್ಕರ್ ಹೆಸರು ಹೇಳಿ ಜೈಕಾರ ಹಾಕುತ್ತ ಅಲ್ಲಲ್ಲಿ ನೃತ್ಯ ಮಾಡುತ್ತ ಹೊರಟಿದ್ದರು. ದೀಕ್ಷಭೂಮಿಗೆ ನಾಲ್ಕಾರು ಕಿ.ಮೀ. ದೂರದಿಂದಲೇ ಬುದ್ಧ, ಬಾಪು, ಜ್ಯೋತಿಬಾ ಫುಲೆ, ಷಾಹು ಮಹಾರಾಜ ಮತ್ತು ಅಂಬೇಡ್ಕರ್ ಅವರ ಚಿತ್ರಗಳು, ಬಾವುಟಗಳು ರಾರಾಜಿಸುತ್ತಿದ್ದವು. ಎಲ್ಲೆಲ್ಲೂ ಅಂಬೇಡ್ಕರ್ ಹಾಡುಗಳ ಕ್ಯಾಸೆಟ್‌ಗಳು, ಪುಸ್ತಕಗಳು ಮತ್ತು ಅಂಬೇಡ್ಕರ್ ಭಾವಚಿತ್ರಗಳಿರುವ ಬನಿಯನು/ಶರ್ಟುಗಳು ಮಾರಾಟವಾಗುತ್ತಿದ್ದವು. ಇನ್ನು ದೀಕ್ಷಭೂಮಿಯ ಒಳಗಂತೂ ಬುಕ್‌ಸ್ಟಾಲ್‌ಗಳಲ್ಲಿ ಕಿಕ್ಕಿರಿದ ಜನ. ಬೆಂಗಳೂರಿನಿಂದ ಪ್ರಾರಂಭಗೊಂಡಿದ್ದ ವಿಶೇಷ ರೈಲು ಕರ್ನಾಟಕದ ಉದ್ದಕ್ಕೂ ಜನರನ್ನು ತುಂಬಿಕೊಂಡು ಬಂದು ದೀಕ್ಷಭೂಮಿಯಲ್ಲಿ ಚೆಲ್ಲಿತ್ತು. ನಾಗಪುರದ ಸುತ್ತಮುತ್ತಲ ಹಳ್ಳಿಪಟ್ಟಣಗಳಿಂದ ಬಂದ ಜನ ದೀಕ್ಷಭೂಮಿಯ ಒಳಗೆಲ್ಲ ನೆರೆದಿದ್ದರು.

ದೀಕ್ಷಭೂಮಿಯ ಕಾಂಪೌಂಡ್ ಮಧ್ಯದಲ್ಲಿರುವ ಸ್ತೂಪ ಮತ್ತು ಒಳಗಿರುವ ಬುದ್ಧನ ದರ್ಶನ ಪಡೆಯಲು ಹೊರಗಿನಿಂದಲೇ ಉದ್ದವಾದ ಸಾಲು ಬೆಳೆದು ನಿಂತಿತ್ತು. ಮಧ್ಯೆಮಧ್ಯೆ ಬರಿಕಾಲಿನ ಭಿಕ್ಷುಗಳು. ದೀಕ್ಷಭೂಮಿಯ ಎದುರಿಗೆ ಜನರನ್ನು ನಿಲ್ಲಿಸಿ ಫೋಟೋಗಳನ್ನು ಹಿಡಿದುಕೊಟ್ಟು ಫೋಟೋಗ್ರಾಫರ್ಸ್ ಹಣ ತೆಗೆದುಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಅದೊಂದು ವಿಸ್ಮಯ ಪ್ರದೇಶವಾಗಿ ಮಾರ್ಪಟ್ಟಿತ್ತು. ದೀಕ್ಷಭೂಮಿಯ ಸುತ್ತಲೂ ರಸ್ತೆಗಳ ಪಕ್ಕದಲ್ಲಿ ಹತ್ತಾರು ಕಡೆ ಸ್ವಯಂಸೇವಕರು ಅಡಿಗೆ ಮಾಡಿ ಎಲ್ಲರನ್ನು ಕರೆದುಕರೆದು ಊಟ ಬಡಿಸುತ್ತಿದ್ದರು. ಬುದ್ಧ, ಅಂಬೇಡ್ಕರ್ ವಿಗ್ರಹಗಳನ್ನು ಜನ ಕೇಕುಗಳಂತೆ ಕೊಂಡುಕೊಳ್ಳುತ್ತಿದ್ದು ಪುಸ್ತಕದ ಮಳಿಗೆಗಳಂತೂ ತುಂಬಿಹೋಗಿವೆ. ಎಲ್ಲೆಲ್ಲೂ ಮರಾಠಿ ಮತ್ತು ಹಿಂದಿ ಪುಸ್ತಗಳೇ ಹೆಚ್ಚು. ಮರಾಠಿ ಮತ್ತು ಹಿಂದಿ ಭಾಷೆಗಳೆಂದರೆ ಹೆಚ್ಚುಕಡಿಮೆ ಕನ್ನಡ ತೆಲುಗು ಭಾಷೆಗಳಂತೆ. ನಾಗಪುರದಲ್ಲಿ ಬಹಳಷ್ಟು ಜನ ಹೊರಗಿನವರೆ ಹೆಚ್ಚಾಗಿದ್ದು ಹಿಂದಿ ಭಾಷೆಯಲ್ಲಿ ಮಾತನಾಡುವುದರಿಂದ ಸ್ಥಳೀಯರೂ ಹಿಂದಿ ಭಾಷೆಯನ್ನೇ ಹೆಚ್ಚಾಗಿ ಮಾತನಾಡುತ್ತಾರೆ.

ಕರ್ನಾಟಕದಿಂದ ಬಂದಿದ್ದ ಅನೇಕ ದಲಿತ ಮುಖಂಡರು, ದಲಿತ ಅಧಿಕಾರಿಗಳು ಇನ್ನಿತರ ಅಭಿಮಾನಿಗಳು ದೀಕ್ಷಭೂಮಿಯಲ್ಲಿದ್ದರು. ಕುಟುಂಬಗಳ ಸಮೇತ ಬಂದಿರುವ ಉತ್ತರ ಕರ್ನಾಟಕದ ಜನರು ಭಾರಿ ಖುಷಿಯಿಂದ ಜನಸಮೂಹವನ್ನು ನೋಡಿ ಬೆರಗಾಗಿಬಿಟ್ಟಿದ್ದರು. ಮಾವಳ್ಳಿ ಶಂಕರ್, ನಾನು ಇನ್ನಿಬ್ಬರು ಯುವಕರ ಜೊತೆಗೆ ಒಂದು ಕಾರು ಮಾಡಿಕೊಂಡು ನಾಗ್‌ಲೋಕ್ ಮತ್ತು ಡ್ರ್ಯಾಗನ್ ಪ್ಯಾಲೆಸ್ ನೋಡಲು ಹೊರಟೆವು. ಎಲ್ಲೆಲ್ಲೂ ಜನಸಾಗರ. ನಾಗ್‌ಲೋಕ್‌ದಲ್ಲಿ ನಿರ್ಮಿಸಿರುವ ಬುದ್ಧನ ವಿಗ್ರಹ ವಿಶೇಷವಾದದ್ದು. ಒಂದು ಪುಟ್ಟ ದಿಬ್ಬದ ಮೇಲೆ ನಿರ್ಮಿಸಿರುವ 53 ಅಡಿಗಳ ಎತ್ತರದ ಕಂಚು ವಿಗ್ರಹ ಬಂಗಾರದಲ್ಲಿ ಅದ್ದಿನಿಲ್ಲಿಸಿದಂತೆ ಸಾಯಂಕಾಲ ಸೂರ್ಯನ ಕಿರಣಗಳಲ್ಲಿ

ಕಂಗೊಳಿಸುತ್ತಿತ್ತು. ನಾವು ನಾಲ್ಕೂ ಜನ ಸಣ್ಣ ದಿಬ್ಬದ ಮೇಲೆ ಕುಳಿತುಕೊಂಡು ಆ ವಿಗ್ರಹದ ಕಡೆಯೇ ನೋಡುತ್ತಿದ್ದೆವು. ಈ ಮಹಾ ಬುದ್ಧನ ಬೌದ್ಧ ಧರ್ಮ – ಪ್ರೀತಿ ವಿಶ್ವಾಸ ಪ್ರಪಂಚವೆಲ್ಲ ಹರಡಿಕೊಂಡರೆ ಹೇಗೆ ಎನ್ನುವ ಆಲೋಚನೆ ನನ್ನ ಮನಸ್ಸಿನಲ್ಲಿ ಕೆಲವು ನಿಮಿಷಗಳು ಉರುಳಾಡಿತು. ಇಡೀ ಪ್ರಪಂಚವೇ ತೊಂದರೆಯಲ್ಲಿ ಸಿಲುಕಿ ಕೊಂಡಿರುವ ಈ ಸಮಯದಲ್ಲಿ ಮತ್ತೊಮ್ಮೆ ಈ ಪ್ರಪಂಚಕ್ಕೆ ಬುದ್ಧನ ಅವಶ್ಯಕತೆ ಇದೆ.

ಡಾ. ಬಿ. ಆರ್. ಅಂಬೇಡ್ಕರ್ ಅವರು 14ನೇ ಅಕ್ಟೋಬರ್ 1956, ತಮ್ಮ ಪತ್ನಿ ಸವಿತಾ ಅಂಬೇಡ್ಕರ್ ಮತ್ತು ಸುಮಾರು ಐದು ಲಕ್ಷ ಜನರೊಂದಿಗೆ ದೀಕ್ಷಭೂಮಿಯಲ್ಲಿ ಹಿಂದೂ ಧರ್ಮವನ್ನು ತ್ಯಜಿಸಿ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಸರಿಯಾಗಿ 2550 ವರ್ಷಗಳ ಹಿಂದೆ ಮಾನವತೆಯನ್ನು ಮೆರೆದ ಮೌರ್ಯರಾಜ ಅಶೋಕನು ಕೂಡ ಬೌದ್ಧ ಧರ್ಮವನ್ನು ಅಪ್ಪಿಕೊಂಡಿದ್ದು ವಿಜಯ ದಶಮಿಯ ಇದೇ ದಿನ (ಪ್ರತಿ ವರ್ಷ ಬೇರೆ ಬೇರೆ ತಾರೀಖು ಬರುತ್ತದೆ). ದೀಕ್ಷಭೂಮಿಯಲ್ಲಿ ಪ್ರತಿವರ್ಷ ಅಕ್ಟೋಬರ್ 14 ಮತ್ತು ವಿಜಯ ದಶಮಿಯ ಮೂರು ದಿನಗಳು ದೊಡ್ಡ ಜಾತ್ರೆಯೇ ನಡೆಯುತ್ತದೆ. ಬೌದ್ಧ ಅನುಯಾಯಿಗಳು, ಬೌದ್ಧ ಭಿಕ್ಷುಗಳು, ಬೌದ್ಧ ಧರ್ಮದ ಮೇಲೆ ಪ್ರೀತಿಯುಳ್ಳವರು ಭಾರತದ ಮೂಲೆಮೂಲೆಯಿಂದಲೇ ಅಲ್ಲದೆ ಪ್ರಪಂಚದ ಹಲವಾರು ದೇಶಗಳಿಂದಲೂ ಇಲ್ಲಿಗೆ ಆಗಮಿಸಿ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

1935ರ ಹಿಂದೆಯೇ ಜಾತಿ, ಅಸ್ಪೃಶ್ಯತೆಯಿಂದ ರೋಸಿಹೋಗಿದ್ದ ಬಾಬಾಸಾಹೇಬ್ ಅಂಬೇಡ್ಕರ್ ಅವರು 'ನಾನು ಹಿಂದೂ ಆಗಿ ಹುಟ್ಟಿದ್ದರೂ ಹಿಂದೂ ಆಗಿ ಸಾಯುವುದಿಲ್ಲ' ಎಂದು ಪ್ರಪಂಚಕ್ಕೆ ಸಾರಿಬಿಟ್ಟಿದ್ದರು. ಪ್ರಪಂಚದ ಮುಖ್ಯ ಧರ್ಮಗಳನ್ನೆಲ್ಲ ಆಳವಾಗಿ ಅಧ್ಯಯನ ಮಾಡಿದ ಅಂಬೇಡ್ಕರ್ ದೀಕ್ಷಭೂಮಿಯಲ್ಲಿ ಬೌದ್ಧ ಧರ್ಮವನ್ನು ಅಪ್ಪಿಕೊಂಡರು. ಈ ದೇಶದ ಮೂಲ ನಿವಾಸಿಗಳಾದ ನಾಗಾಗಳು ಆಳಿದ ಪ್ರದೇಶ ಇಂದಿನ ನಾಗಪುರ. ನಾಗಾ ಹೆಸರಿನ ನದಿ ಇಂದಿಗೂ ಇಲ್ಲಿ ಹರಿಯುತ್ತದೆ. ನಾಗಪುರದ ಮುನಿಸಿಪಲ್ ಕಾರ್ಪೊರೇಷನ್‌ನ ಎಂಬ್ಲಮ್ ಮಧ್ಯದಲ್ಲಿ ನಾಗರಹಾವಿನ ಚಿಹ್ನೆ ಇದೆ. ನಾಗಪುರ ನಮ್ಮ ದೇಶದ ಮಧ್ಯ ಭಾಗವಾಗಿದ್ದು ದೇಶದ ಝೀರೊ ಮೈಲಿ ಕಲ್ಲನ್ನು ಬ್ರಿಟಿಷರು ನೆಟ್ಟಿರುವುದು ಇಲ್ಲಿಯೇ. ಈ ದೇಶದ ರಾಜಧಾನಿಯೂ ಇದೇ ನಾಗಪುರ ಆಗಬೇಕಿತ್ತು.

ಈ ಎಲ್ಲದರ ಹಿನ್ನೆಲೆಯಿಂದಲೇ ಅಂಬೇಡ್ಕರ್ ಅವರು ಈ ಪ್ರದೇಶವನ್ನು ದೀಕ್ಷಭೂಮಿಗೆ ಆಯ್ಕೆ ಮಾಡಿಕೊಂಡಿದ್ದರು. ಅಂಬೇಡ್ಕರ್ ದೀಕ್ಷೆ ತೆಗೆದುಕೊಂಡ ಸ್ಥಳದಲ್ಲಿ ಅತ್ಯಂತ ದೊಡ್ಡದಾದ ಸ್ತೂಪವನ್ನು ಕಟ್ಟಲಾಗಿದೆ. ಭಾರತದಲ್ಲಿ ಇತ್ತೀಚೆಗೆ ಕಟ್ಟಲಾದ ಇನ್ನೊಂದು ಬೌದ್ಧ ಧರ್ಮದ ಸಂಕೇತವೆಂದರೆ ಮುಂಬೈಯ ದಾದರ್‌ನಲ್ಲಿರುವ 'ಚೈತ್ಯ ಭೂಮಿ'. ಇದು ಅಂಬೇಡ್ಕರ್ ಅವರು ಪರಿನಿರ್ವಾಣವಾದ ಸ್ಥಳ. ಭಾರತದ ಮಧ್ಯಭಾಗದಲ್ಲಿದ್ದ ನಾಗಾ ಜನಾಂಗ ಬೌದ್ಧ ಧರ್ಮವನ್ನು ಮೊದಲ ಬಾರಿಗೆ ಅಪ್ಪಿಕೊಂಡು ದೇಶದಾದ್ಯಂತ ಪ್ರಚಾರ ಮಾಡಿತು ಎನ್ನಲಾಗಿದೆ. ಅಂಬೇಡ್ಕರ್ ನಾಗಪುರದಲ್ಲಿ ಬೌದ್ಧ ಧರ್ಮದ ದೀಕ್ಷೆ ತೆಗೆದುಕೊಂಡ ಕಾರಣ ಇಲ್ಲಿ ಹೊಸ (ನಿಯೋ) ಬೌದ್ಧ ಧರ್ಮ ಹುಟ್ಟಿಕೊಂಡಿತು. ಅಂಬೇಡ್ಕರ್, ಪತ್ನಿ ಸವಿತಾ ಅಂಬೇಡ್ಕರ್ ಮತ್ತು ಅಂದು ಅಲ್ಲಿ ನೆರೆದಿದ್ದ ಐದು ಲಕ್ಷ ಜನರಿಗೆ ಬರ್ಮಾ ದೇಶದಿಂದ ಬಂದಿದ್ದ ಭಿಕ್ಷು ಮಹಾಸತ್ವಿರ್ ಚಂದ್ರಾಮಣಿ ಅವರು ದೀಕ್ಷೆ ತೊಡಿಸಿದರು.

ದುರದೃಷ್ಟವೆಂದರೆ ಅದೇ ವರ್ಷ ಡಿಸೆಂಬರ್ 6ರಂದು ಅಂಬೇಡ್ಕರ್ ಅವರು ದೇಹ ತ್ಯಾಗ ಮಾಡಿಬಿಟ್ಟರು. ದೀಕ್ಷಭೂಮಿಯಲ್ಲಿ ಇದುವರೆಗೂ ಲಕ್ಷಾಂತರ ಜನರು ದೀಕ್ಷೆ ತೆಗೆದುಕೊಂಡಿರುವುದಾಗಿ ಹೇಳಲಾಗುತ್ತದೆ. ಇಂದಿಗೂ ಇಲ್ಲಿ ಆಗಾಗ ಸಾವಿರಾರು ಜನರು ದೀಕ್ಷೆ ತೆಗೆದುಕೊಳ್ಳುತ್ತಲೇ ಇರುತ್ತಾರೆ. ಮುಂದೆ ಡಾ. ಅಂಬೇಡ್ಕರ್ ಸ್ಮಾರಕ ಸಮಿತಿಯನ್ನು ಪ್ರಾರಂಭಿಸಿ ದೀಕ್ಷಭೂಮಿಯನ್ನು ನೋಡಿಕೊಳ್ಳಲು ಪ್ರಾರಂಭಿಸಿತು. ದೀಕ್ಷಭೂಮಿ ನಾಲ್ಕು ಎಕರೆಗಳಲ್ಲಿ ಹರಡಿದ್ದು, 1968ರಲ್ಲಿ ಷಿಯೊ ಡಾಬ್ ಮಾಲ್ ಅವರು ಇದರ ರೂಪರೇಷೆಗಳನ್ನು ಸೃಷ್ಟಿಸಿದರು. ಇಲ್ಲಿ ಮೊದಲಿಗೆ ಭಿಕ್ಷುಗಳಿಗೆ ತಂಗಲು ಮನೆಗಳನ್ನು ಅನಂತರ ಒಂದು ಕಾಲೇಜನ್ನು ಕಟ್ಟಲಾಯಿತು. ಮಧ್ಯದಲ್ಲಿರುವ ಸ್ತೂಪ ಕಟ್ಟಲು ಪ್ರಾರಂಭಿಸಿದ್ದು 1978ರಲ್ಲಿ ಆದರೆ ಅದನ್ನು ಕಟ್ಟಿಮುಗಿಸಿದ್ದು ಮಾತ್ರ 2001ರಲ್ಲಿ. ಈ ಸ್ಮಾರಕವನ್ನು ಅನಾವರಣಗೊಳಿಸಿದ್ದು ಅಂದಿನ ರಾಷ್ಟ್ರಪತಿ ಶ್ರೀ ಕೆ. ಆರ್. ನಾರಾಯಣನ್ ಅವರು.

ಸ್ತೂಪ ಬೃಹದಾಕಾರವಾಗಿ ಎರಡು ಮಹಡಿಗಳ ಅರ್ಧ ಗೋಳಾಕಾರದ ಆಕಾರದಲ್ಲಿದ್ದು ಸಾಂಚಿ ರೀತಿಯ ದ್ವಾರಗಳನ್ನು ಹೊಂದಿದೆ. ಪ್ರತಿಯೊಂದರಲ್ಲಿ ಐದು ಸಾವಿರ ಭಿಕ್ಷುಗಳು ಇರಬಹುದು. ಈ ಸ್ತೂಪವನ್ನು ಸಾಂಚಿ ರೀತಿಯಲ್ಲೇ ಕಟ್ಟಲಾಗಿದೆ. ಆದರೆ ಸ್ತೂಪ ಒಳಗೆ ಪೂರ್ತಿ ಖಾಲಿ ಸ್ಥಳವಿದ್ದು ಒಳಗಿನ ವೃತ್ತಾಕಾರದ ಹಾಲ್ 4000 ಚದರ ಅಡಿಗಳ ವಿಸ್ತೀರ್ಣ ಹೊಂದಿದೆ. ಗ್ರಾನೈಟ್, ಸ್ಫಟಿಕಾ ಕಲ್ಲು ಮತ್ತು ದೊಲಾಪುರದ ಜಲಜ ಕಲ್ಲುಗಳಿಂದ ಸ್ಮಾರಕವನ್ನು ಅಲಂಕರಿಸಲಾಗಿದೆ. ಕೆಳಗೆ 211 x 211 ಅಡಿಗಳ ವೃತ್ತಾಕಾರದ ಹಾಲ್‌ನ ಮಧ್ಯದಲ್ಲಿ ಬುದ್ಧ ಮತ್ತು ಅಂಬೇಡ್ಕರ್ ಅವರ ವಿಗ್ರಹಗಳನ್ನು ಇಡಲಾಗಿದೆ. ಸ್ತೂಪದ ನಾಲ್ಕು ದಿಕ್ಕುಗಳಲ್ಲಿ ವರಾಂಡಾಗಳಿದ್ದು ಮೇಲೆ ಸಣ್ಣ ಛತ್ರಿಯನ್ನು ಕೆತ್ತಲಾಗಿದೆ. ಸ್ತೂಪದ ಎದುರಿಗೆ ಬುದ್ಧ ಮತ್ತು ಅಂಬೇಡ್ಕರ್ ವಿಗ್ರಹಗಳನ್ನು ಇಡಲಾಗಿ ಸುತ್ತಲೂ ಉದ್ಯಾನವನ ಮಾಡಲಾಗಿದೆ.

ದೀಕ್ಷಭೂಮಿಯ ಕಾಂಪೌಂಡ್ ಒಳಗೆ ಪ್ರವೇಶಿಸಿದ್ದೆ ಬಲಗಡೆ ಬುದ್ಧವಿಹಾರವಿದ್ದು ಬುದ್ಧನ ಕಂಚು ವಿಗ್ರಹವನ್ನು ಬೋಧಿ ಮರದ ಕೆಳಗೆ ಇಡಲಾಗಿದೆ. ಮೂರು ಮರಗಳು ಒಂದಾಗಿ ಬೆಳೆದು ನಿಂತಿರುವ ಈ ಬೋಧಿ ಮರದ ಮೂರು ಟಿಸಿಲುಗಳನ್ನು ಶ್ರೀಲಂಕಾದ ಅನುರಾಧಪುರಂನಿಂದ ಭದಂತ ಆನಂದ ಕೌಶಲ್ಯಾಯನ್ ಎಂಬ ಭಿಕ್ಷು ತಂದು ನೆಟ್ಟರು ಎನ್ನಲಾಗಿದೆ. ನಾಗಪುರದ ಇನ್ನಿತರ ಬೌದ್ಧ ವಿಹಾರಗಳೆಂದರೆ, ನಾಗ್‌ಲೋಕ್ ಮತ್ತು ಡ್ರ್ಯಾಗನ್ ಪ್ಯಾಲೇಸ್.

30 ವರ್ಷಗಳಿಂದ ಕಾರ್ಯನಿಮಿತ್ತ ದೇಶದ ಉದ್ದಗಲಕ್ಕೂ ಓಡಾಡಿರುವ ನಾನು ದೇಶದ ನಾನಾ ಭಾಗಗಳ ಕೋಟೆಕೊತ್ತಲಗಳು, ನದಿ-ಸಾಗರ, ಹಿಮಾಲಯ, ಮರುಭೂಮಿ, ಈಶಾನ್ಯ ಭಾರತ, ಅನೇಕ ಪುಣ್ಯಕ್ಷೇತ್ರಗಳು, ನೂರಾರು ಜಾತ್ರೆಗಳನ್ನು ನೋಡಿರುವೆ. ದೀಕ್ಷಭೂಮಿಯನ್ನು ನೋಡುವ ಹಂಬಲ ಬಹಳ ವರ್ಷಗಳಿಂದಲೂ ನನ್ನನ್ನು ಕಾಡುತ್ತಿತ್ತು. 2013 ಮತ್ತು 2014ರ (ಅಕ್ಟೋಬರ್ 4) ವಿಜಯ ದಶಮಿ ದಿನಗಳಂದು ಇಲ್ಲೇ ಇದ್ದು ದೀಕ್ಷಭೂಮಿಯ ಜಾತ್ರೆಯನ್ನು ಎರಡೆರಡು ಸಲ ನೋಡಿಬಂದೆ. ಅದೇ ದಿನ ಸಾಯಂಕಾಲ ನನ್ನ ಸೋದರ ಸಂಬಂಧಿ ಬಿ. ಎಂ. ಶಿವಪ್ಪ ಕುಟುಂಬದ ಸಮೇತ ನಾಗಪುರಕ್ಕೆ ಆಗಮಿಸಿದ್ದರು. ಸಾಯಂಕಾಲ ಹೋಗೋಣವೆಂದರೆ

ನನ್ನಲ್ಲಿದ್ದ ಎರಡು ಸರಕಾರಿ ವಾಹನಗಳನ್ನು ನಾಗಪುರದ ಚುನಾವಣೆ ಕಮೀಷನರ್ ನನ್ನಿಂದ ಕಿತ್ತುಕೊಂಡ ಕಾರಣ ಬೆಳಿಗ್ಗೆ ಹೋಗೋಣವೆಂದು ಸುಮ್ಮನಾದೆವು. ನನ್ನ ಕೆಳಗೆ ಕೆಲಸ ಮಾಡುವ ಅಧಿಕಾರಿ ನಿತ್ನವಾರೆ ರಾತ್ರಿ 9 ಗಂಟೆಗೆ ಫೋನ್ ಮಾಡಿ 'ಸಾರ್ ದೀಕ್ಷಭೂಮಿಗೆ ಬರ್ತೀರ ಸಾರ್ ಹೋಗೋಣ' ಎಂದರು. ನಾನು 'ಬೆಳಿಗ್ಗೆ ನೋಡಿ ಬಂದೆವು. ನಮ್ಮ ನೆಂಟರು ಬಂದಿದ್ದಾರೆ. ನಾಳೆ ಬೆಳಿಗ್ಗೆ ಹೋದರೆ ಆಯಿತು' ಎಂದೆ. ನಿತ್ನವಾರೆ 'ಎಷ್ಟು ಜನ ಇದ್ದೀರಿ?' ಎಂದಿದ್ದಕ್ಕೆ 'ನಾವು, ಆರು ಜನ ಇದ್ದೀವಿ' ಎಂದೆ. ನಿತ್ನವಾರೆ ರಾತ್ರಿ 10 ಗಂಟೆಗೆ ಗಾಡಿ ತೆಗೆದುಕೊಂಡು ಮನೆ ಹತ್ತಿರಕ್ಕೆ ಬಂದೇ ಬಿಟ್ಟರು. ನಿತ್ನವಾರೆಯನ್ನು 'ನೀವು ಇಷ್ಟು ರಾತ್ರಿಯಲ್ಲಿ ಯಾಕೆ ತೊಂದರೆ ತೆಗೆದುಕೊಂಡಿರಿ? ಬೆಳಿಗ್ಗೆ ಹೋಗಬಹುದಾಗಿತ್ತಲ್ಲ?' ಎಂದೆ. 'ಬೆಳಿಗ್ಗೆ ಏನು ನೋಡ್ತೀರಿ? ಸಾರ್ ಇವೊತ್ತು ರಾತ್ರಿ ಮಾತ್ರ ನೋಡಬೇಕು. ಇಲ್ಲ ಅಂದರೆ ನೋಡಬಾರದು' ಎಂದರು. 'ಹೌದಾ?' ತಲೆ ಕೆರೆದುಕೊಂಡು ಕಾರಿನಲ್ಲಿ ಎಲ್ಲರೂ ಹೊರಟೆವು.

ದೀಕ್ಷಭೂಮಿಯ ಮುಖ್ಯ ಬಾಗಿಲು ಇನ್ನೂ ಎರಡು ಕಿ.ಮೀ.ಗಳ ದೂರದಲ್ಲಿದೆ. ಜನವೋ ಜನ. ಕಾರನ್ನು ಒಂದು ಮನೆ ಗೋಡೆಯ ಪಕ್ಕದಲ್ಲಿ ನಿಲ್ಲಿಸಿ ನಡೆದುಕೊಂಡೆ ಹೊರಟೆವು. ಎಲ್ಲೆಲ್ಲೂ ಜನ. ಪೊಲೀಸರು ಎಲ್ಲರನ್ನೂ ಸಾಲಾಗಿ ಕಳುಹಿಸುತ್ತಿದ್ದಾರೆ. ದೀಕ್ಷಭೂಮಿಯ ಮುಂದಿನ ರಸ್ತೆಯಲ್ಲಿ ಹೋಗುವುದು ಬೇಡವೆಂದು ಹಿಂದಿನ ರಸ್ತೆಯಲ್ಲಿ ಸುತ್ತಿಕೊಂಡು ನಡೆದೆವು. ದೀಕ್ಷಭೂಮಿಯ ಹಿಂದುಗಡೆ ಸಣ್ಣ ಬಾಗಿಲಲ್ಲಿ ಒಳಗೆ ಹೋದೆವು. ಅಲ್ಲಿನ ದೃಶ್ಯ ನೋಡಿದ ನನಗೆ ಏನು ಹೇಳಬೇಕೋ ಅರ್ಥವಾಗಲಿಲ್ಲ. ತಬ್ಬಿಬ್ಬಾಗಿಬಿಟ್ಟೆ. ನನ್ನ ಬದುಕಿನಲ್ಲಿ ಅಷ್ಟು ಜನರು ಒಂದು ಕಡೆ ಒಟ್ಟಾಗಿ ಸೇರಿದ್ದನ್ನು ನೋಡಿರಲಿಲ್ಲ. ನನ್ನ ಕಣ್ಣುಗಳು ತುಂಬಿಕೊಂಡು ಹೊರಗೆ ಚೆಲ್ಲಿದಷ್ಟು ಜನರು ಅಲ್ಲಿ ಸೇರಿದ್ದರು. ನಾವು ಅಷ್ಟೂ ಜನ ಒಬ್ಬರನ್ನೊಬ್ಬರು ನೋಡಿಕೊಂಡೆವೇ ವಿನಾ ಮಾತನಾಡಿಕೊಳ್ಳಲಿಲ್ಲ. ನನ್ನ ಪತ್ನಿ ಸುಶೀಲ ನೋಟ್‌ಪ್ಯಾಡ್ ತೆಗೆದುಕೊಂಡು ಜನರ ಮಧ್ಯೆ ಹೊರಟುಹೋಗಿದ್ದಳು. ಎಲ್ಲಿ ತಪ್ಪಿಹೋಗುತ್ತಾಳೋ ಎನ್ನುವ ಭಯದಿಂದ ಹಿಂದಕ್ಕೆ ಕರೆದು ಪಕ್ಕದಲ್ಲಿ ನಿಲ್ಲಿಸಿಕೊಂಡೆ. ಅಲ್ಲಿಂದ ಹೋಗಲು ನಮಗ್ಯಾರಿಗೂ ಮನಸ್ಸು ಬರಲಿಲ್ಲ. ಆದರೆ ಮುಂದೆಹೋಗಲೂ ದಾರಿ ಇರಲಿಲ್ಲ. ಮತ್ತೆ ದೀಕ್ಷಭೂಮಿಯನ್ನು ಸುತ್ತು ಹಾಕಿಕೊಂಡು ಮುಖ್ಯಬಾಗಿಲಿಗೆ ಬಂದು ಸಾಲಿನಲ್ಲಿ ನಿಂತುಕೊಂಡೆವು.

ಹೆಣ್ಣುಮಕ್ಕಳು ಲಾಟಿಗಳನ್ನು ಹಿಡಿದುಕೊಂಡು ಜನರನ್ನು ದೀಕ್ಷಭೂಮಿಯ ಗುಮ್ಮಟದ ಒಳಗೆ ಸಾಲಾಗಿ ಕಳುಹಿಸುತ್ತಿದ್ದರು. ನಾವು ತಿಳಿದುಕೊಂಡಂತೆ ಹೆಚ್ಚು ಸಮಯವಾಗಲಿಲ್ಲ. ಗುಮ್ಮಟದ ಮಧ್ಯದಲ್ಲಿದ್ದ ಬುದ್ಧ ಮತ್ತು ಅಂಬೇಡ್ಕರ್ ಪುತ್ಥಳಿಗಳನ್ನು ಬೆಳಕಿನಲ್ಲಿ ಒಂದು ಸುತ್ತು ಹಾಕಿಕೊಂಡು ಹೊರಗೆ ಬಂದೆವು. ಅಲ್ಲಿ ಎರಡು ರೀತಿಯ ಜನಸಾಗರಗಳಿದ್ದವು. ಒಂದು ಬುದ್ಧ ಮತ್ತು ಅಂಬೇಡ್ಕರ್ ಅವರನ್ನು ದರ್ಶನ ಮಾಡಲು ಸಾಗುತ್ತಿದ್ದರೆ, ಇನ್ನೊಂದು ಜನಸಾಗರ ಆಗಲೇ ದರ್ಶನ ಮಾಡಿ ವಿಶಾಲವಾದ ಬಯಲಿನಲ್ಲಿ ತಮ್ಮ ಕುಲದೇವತೆಯ ಹಳ್ಳಿ ಜಾತ್ರೆಗೆ ಬಂದಂತೆ ಐಶಾರಾಮವಾಗಿ ಕುಳಿತು, ಮಲಗಿತ್ತು. ಎಲ್ಲೋ ದೂರದಲ್ಲಿ ಬಯಲಿನ ಒಂದು ಮೂಲೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಯುತ್ತಿದ್ದಂತೆ ತೋರುತ್ತಿತ್ತು. ಅವರೆಲ್ಲ ಇಡೀ ರಾತ್ರಿ ಅಲ್ಲಿ ಕಾಲ ಕಳೆದು ಮರುದಿನ ತಮ್ಮ ತಮ್ಮ ಊರುಗಳಿಗೆ ಹೋಗುವುದಾಗಿ ತಿಳಿಯಿತು. ನಮಗೆ

ನೀರು ಸಿಗಲಿಲ್ಲ, ನಮಗೆ ಊಟ ಸಿಗಲಿಲ್ಲ, ಟಾಯಲೆಟ್ ವ್ಯವಸ್ಥೆ ಸರಿಯಿಲ್ಲ ಎನ್ನುವ ಯಾವ ದೂರುಗಳೂ ಯಾವ ಪತ್ರಿಕೆಯಲ್ಲೂ ಕೇಳಿಬರಲಿಲ್ಲ. ಲಕ್ಷಾಂತರ ಜನ ಸಂಯಮದಿಂದ ತಮ್ಮ ಹುಟ್ಟೂರು/ತವರೂರು ಜಾತ್ರೆಗೆ ಬಂದಂತೆ, ತಮ್ಮ ಕುಲದೇವತೆಯನ್ನು ನೋಡಿ ಆನಂದಿಸಿದಂತೆ ಎರಡು ರಾತ್ರಿಗಳು ಅಲ್ಲಿ ಕಳೆದು ಹೋಗುವರು ಎಂದು ತಿಳಿಯಿತು. ಪರಿಚಯ ಇರುವ ಪೊಲೀಸ್ ಅಧಿಕಾರಿ ಒಬ್ಬರು 'ನೋಡಿ ಸರ್, ಮೂರು ದಿನಗಳಲ್ಲಿ ದೀಕ್ಷಭೂಮಿ ದರ್ಶನ ಮಾಡಿದ ಜನರ ಸಂಖ್ಯೆ 12 ಲಕ್ಷ. ಒಂದೇ ಒಂದು ಪಿಕ್‌ಪಾಕೆಟ್ ದೂರಿಲ್ಲ. ನೂಕುನುಗ್ಗಲಿನಲ್ಲಿ ಗಾಯಗೊಂಡ ಒಂದು ಕೇಸೂ ಇಲ್ಲ' ಎಂದಿದ್ದರು. ಅಂಬೇಡ್ಕರ್ ಬದುಕಿದ್ದರೆ ಏನು ಹೇಳುತ್ತಿದ್ದರೋ ಏನೋ? ನನ್ನ ಸೋದರ ಸಂಬಂಧಿ ಶಿವಪ್ಪ 'ನನ್ನ ಬದುಕು ಸಾರ್ಥಕ ಆಗಿಹೋಯಿತು. ನನಗೆ ಇನ್ನೇನೂ ಬೇಕಿಲ್ಲ' ಎಂದು ದಾರಿಯಲ್ಲಿ ಹಲುಬುತ್ತಿದ್ದರು.

## ಕ್ರೈಸ್ತಧರ್ಮ, ಹಿಂದೂಗಳು ಮತ್ತು ದಲಿತರು

ಕ್ರೈಸ್ತ ಬೋಧನೆಯ ವ್ಯಾಪಕ ಸ್ವೀಕೃತಿಯ ಜೊತೆಜೊತೆಗೆ ಆತನ ಬದುಕು ಮತ್ತು ಚಾರಿತ್ರ್ಯದ ಬಗ್ಗೆ ಜನರಿಗೆ ಅಪಾರ ಗೌರವ ಇದೆ. ಆದರೆ ಕ್ರೈಸ್ತ, ಪೂರ್ಣ ಅರ್ಥದಲ್ಲಿ ದೇವಪುತ್ರ ಅಥವಾ ದಿವ್ಯ ಸಂಭೂತನಾಗಿದ್ದ ಎನ್ನುವುದನ್ನು ಅಧಿಕ ಸಂಖ್ಯೆಯ ಹಿಂದೂಗಳು ಒಪ್ಪುವುದಿಲ್ಲ. ಆತನೊಬ್ಬನೇ ದೇವನ ಸಾಕಾರ ರೂಪ, ಆತನ ಮೇಲಿರುವ ಶ್ರದ್ಧೆಯ ಮೂಲಕ ಮಾತ್ರ ಮುಕ್ತಿ ಲಭ್ಯ ಎನ್ನುವ ಕ್ರೈಸ್ತ ಮತೀಯರ ಹಕ್ಕು ಪ್ರತಿಪಾದನೆಯನ್ನು ಪ್ರತ್ಯೇಕ ಮತ್ತು ಸಂಕುಚಿತ ಎಂದು ಅನೇಕ ಭಾರತೀಯರು ನಂಬುತ್ತಾರೆ. ಹಾಗಾಗಿ ಕ್ರೈಸ್ತ ಧರ್ಮಿಗಳಾಗಿ ಮಾರ್ಪಡುವುದಕ್ಕಿಂತ ಹಿಂದೂಗಳಾಗಿಯೇ ಉಳಿಯುವುದರಲ್ಲಿ ದಲಿತರಿಗೆ ತೃಪ್ತಿ ಎನಿಸಿದೆ. ಇದರ ಜೊತೆಗೆ ಇನ್ನೂ ಅನೇಕ ಕಾರಣಗಳಿವೆ.

ಕ್ರೈಸ್ತ ಸಂಸ್ಥೆಗಳು ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಗಣನೀಯ ಮತ್ತು ಸ್ತುತ್ಯರ್ಹವಾದ ಕಾರ್ಯವನ್ನು ಪೂರೈಸಿದ್ದರೂ ಅನೇಕ ಪ್ರಶ್ನೆಗಳಿಗೆ ಅವರು ಉತ್ತರಗಳನ್ನು ನೀಡಬೇಕಾಗಿದೆ. ಮತಾಂತರೀ ಮನೋಭಾವದ ಬದಲಾವಣೆಯ ದಿಸೆಯಲ್ಲಿ ಕ್ರೈಸ್ತ ಧರ್ಮ ಏನು ಸಾಧಿಸಿದೆ? ಅಸ್ಪೃಶ್ಯ ಮತಾಂತರಿಗಳನ್ನು ಕ್ರೈಸ್ತ ಧರ್ಮದಲ್ಲಿ ಸ್ಪೃಶ್ಯ ಸ್ಥಾನಕ್ಕೆ ಏರಿಸಿದ್ದಾರೆಯೇ? ಸ್ಪೃಶ್ಯ ಮತ್ತು ಅಸ್ಪೃಶ್ಯ ಮತಾಂತರಿಗಳು ಕ್ರೈಸ್ತ ಧರ್ಮದಲ್ಲಿ ಸಮಾನ ಭ್ರಾತೃತ್ವ ಬೆಳೆಸಿಕೊಂಡಿದ್ದಾರೆಯೇ? ತಮ್ಮ ಹಳೆಯ ಮೂಢನಂಬಿಕೆಗಳ ಆಚರಣೆಯನ್ನು ತೊರೆದಿದ್ದಾರೆಯೇ? ಇವು ಕ್ರೈಸ್ತ ಧರ್ಮಕ್ಕೆ ಅಂಬೇಡ್ಕರ್ ಹಾಕಿದ ಪ್ರಶ್ನೆಗಳು. ಈ ಪ್ರಶ್ನೆಗಳಿಗೆ ಪ್ರಾಮಾಣಿಕ ಉತ್ತರ ನೀಡುವುದರ ಮೂಲಕ ಭಾರತದಲ್ಲಿ ಕ್ರೈಸ್ತ ಧರ್ಮ ಉಳಿಯಬೇಕು ಇಲ್ಲ ಹಾಳಾಗಬೇಕು ಎಂದು ಗುಡುಗಿದ್ದರು. ಎಪ್ಪತ್ತೈದು ವರ್ಷಗಳ ಹಿಂದಿನ ಈ ಮಾತುಗಳನ್ನು ಅವಲೋಕಿಸಿದಾಗ ಅಂಬೇಡ್ಕರ್ ಅವರು ಎಷ್ಟು ದೂರಗಾಮಿಯಾಗಿ ಯೋಚಿಸಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ. ಇಂದಿನ ನಮ್ಮ ದಲಿತ ಕ್ರೈಸ್ತರ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಅದು ಕಟುಸತ್ಯ ಎನ್ನಿಸುತ್ತದೆ.

ಕ್ರೈಸ್ತರಲ್ಲಿ ಮುಖ್ಯವಾಗಿ ರೋಮನ್ ಕ್ಯಾಥೊಲಿಕರು ಮತ್ತು ಪ್ರಾಟೆಸ್ಟೆಂಟರು ಇದ್ದಾರೆ. ದಕ್ಷಿಣ ಭಾರತದಲ್ಲಿ ಒಟ್ಟು ಕ್ರೈಸ್ತ ಮತೀಯ ಜನಸಂಖ್ಯೆಯಲ್ಲಿ ನಿಮ್ನ ವರ್ಗದ ಮತಾಂತರಿಗಳ ಸಂಖ್ಯೆ ಪ್ರತಿಶತ ಅರವತ್ತಕ್ಕಿಂತ ಹೆಚ್ಚಿದೆ ಎಂದು ತಿಳಿದು ಬರುತ್ತದೆ.

ಭಾರತದಲ್ಲಿ ಕ್ರೈಸ್ತ ಧರ್ಮ ಬೋಧನೆ ಆರಂಭವಾದಾಗ ಪಲ್ಲರು, ಪರಯ, ಹೊಲೆಯ, ಮಾದಿಗ ಇತ್ಯಾದಿ ಜನರು ಕ್ರೈಸ್ತ ಧರ್ಮವನ್ನು ಅಪ್ಪಿಕೊಂಡರು. ದೇವರ ದೃಷ್ಟಿಯಲ್ಲಿ ಮಾನವ ಸಮಾನತೆ, ದಾನಧರ್ಮಗಳ ಅವಶ್ಯಕತೆ, ನೆರೆಹೊರೆಯವರಿಗಾಗಿ ಪ್ರೀತಿ, ಪರಸ್ಪರ ಸಹಕಾರ ಮತ್ತು ದಯೆ ಮುಂತಾದ ಮೂಲಭೂತ ತತ್ವಗಳನ್ನು ಕ್ರೈಸ್ತ ಧರ್ಮ ಬೋಧಿಸುತ್ತಿದೆಯಾದರೂ ನಿಮ್ನ ವರ್ಗದಿಂದ ಮತಾಂತರಗೊಂಡ ಜನರು ಇಂದಿಗೂ ಹಿಂದೂ ನಿಮ್ನ ವರ್ಗದ ಜನರಂತೆ ಹೀನ ಸ್ಥಿತಿಯಲ್ಲಿಯೇ ಉಳಿದುಕೊಂಡಿದ್ದಾರೆ. ಹಿಂದೂ ಧರ್ಮದಲ್ಲಿ ಅಸ್ಪೃಶ್ಯರಾಗಿದ್ದವರು ಇಂದು ಕ್ರಿಶ್ಚಿಯನ್ ಧರ್ಮದಲ್ಲಿ ಅಸ್ಪೃಶ್ಯರಾಗಿದ್ದಾರೆ. ಸಾಮಾಜಿಕ ಸ್ಥಾನಮಾನ ಪಡೆಯುವಲ್ಲಿ ಕಾನೂನುಗಳ ತೊಡಕು ಉಚ್ಚವರ್ಗದ ಕ್ರಿಶ್ಚಿಯನ್ನರ ನಿರಾಕರಣೆ, ಜಾತಿವಾದಿ ಹಿಂದೂಗಳ ತಿರಸ್ಕಾರ ಇವುಗಳಿಂದ ದಲಿತ ಕ್ರೈಸ್ತರು ಮತ್ತಷ್ಟು ಅವಮಾನಕ್ಕೆ ತುತ್ತಾಗಿದ್ದಾರೆ.

ಭಾರತದಲ್ಲಿರುವ ಕ್ರೈಸ್ತ ಪ್ರತಿನಿಧಿಗಳೆಂಬ ಜಾತಿವಾದಿ ಕ್ರಿಶ್ಚಿಯನ್ನರು ಚರ್ಚ್‌ಗಳಲ್ಲಿ ದಲಿತರನ್ನು ಅಸ್ಪೃಶ್ಯರಾಗಿಯೇ ನೋಡುವುದರ ಜೊತೆಗೆ ಪ್ರತ್ಯೇಕ ಆಸನ ವ್ಯವಸ್ಥೆ, ಸಂಸ್ಕಾರಗಳ ಸ್ವೀಕೃತಿಯಲ್ಲಿ ತಾರತಮ್ಯ, ಮೈಲಿಗೆಯನ್ನು ದೂರೀಕರಿಸುವ ನೆಪದಲ್ಲಿ ಒಂದು ವಿಚಿತ್ರ ಪ್ರತ್ಯೇಕತೆಯ ಆಚರಣೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಕ್ರಿಶ್ಚಿಯನ್ ಜಾತಿವಾದಿಗಳು ಹಿಂದೂ ಉಚ್ಚ ಶ್ರೇಣಿಯ ಮೂಲವನ್ನು ಗುರುತಿಸಿ ಪ್ರತ್ಯೇಕವಾದ ವಾಸಸ್ಥಳ, ಅದಕ್ಕನುಗುಣವಾದ ಸಾಮಾಜಿಕ ಅಂತಸ್ತು ಮತ್ತು ಸ್ಥಾನಮಾನ ನೀಡಿ ಹಿಂದೂ ಜಾತಿವಾದಿಗಳ ದೃಷ್ಟಿಯಲ್ಲಿ ಮೆಚ್ಚುಗೆ ಪಡೆದುಕೊಂಡಿದ್ದಾರೆ. ಇದಕ್ಕೆಲ್ಲ ಕಾರಣ ಕ್ರೈಸ್ತ ಧರ್ಮದಲ್ಲಿ ಬ್ರಾಹ್ಮಣ, ಅಬ್ರಾಹ್ಮಣ ಕ್ರೈಸ್ತರಿದ್ದು ಅವರಲ್ಲಿಯೆ ಎಲ್ಲಾ ಮೂಲದ ಹಿಂದೂ ವರ್ಗಗಳ ಜನರಿದ್ದಾರೆ. ಅವರು ಪರಸ್ಪರ ಮದುವೆಯಾಗುವುದಿಲ್ಲ. ಪರಸ್ಪರ ಕೂಡಿ ಊಟ ಮಾಡುವುದಿಲ್ಲ. ಹಿಂದೂ ಮತಾಂತರಿಗಳು ತಮ್ಮ ಮೂಲ ದೇವತೆಗಳ ಪೂಜೆ ಮಾಡುವುದನ್ನು ನಿಲ್ಲಿಸುವಂತೆ ಮಾಡುವಲ್ಲಿ ಕ್ರೈಸ್ತ ಧರ್ಮ ಸಫಲವಾಗಿಲ್ಲ. ಎಲ್ಲಾ ಮತಾಂತರಿಗಳು ಇಂದಿಗೂ ಹಿಂದೂ ಆರಾಧನಾ ವಿಧಿಗಳನ್ನು ಉಳಿಸಿಕೊಂಡಿರುವುದೇ ಅಲ್ಲದೆ ಹಿಂದೂ ಮೌಢ್ಯಗಳನ್ನೇ ಮುಂದುವರಿಸಿದ್ದಾರೆ. ತಮಿಳುನಾಡಿನಲ್ಲಿ ದಲಿತ ಕ್ರೈಸ್ತರಿಗೆ ಚರ್ಚ್‌ಗಳ ಒಳಗೆ ಮಧ್ಯ ಗೋಡೆಗಳನ್ನು ಕಟ್ಟಿ ಅವರನ್ನು ಪ್ರತ್ಯೇಕಿಸಿದ್ದಾರೆ. ಸ್ಪೃಶ್ಯ ಕ್ರೈಸ್ತರು ದಲಿತ ಕ್ರೈಸ್ತರಿಗೆ ತೋರುತ್ತಿರುವ ತಾರತಮ್ಯವನ್ನು ಖಂಡಿಸಿದ ದಲಿತ ಕ್ರೈಸ್ತರು, ಸ್ಪೃಶ್ಯ ಕ್ರೈಸ್ತರು ತಮ್ಮ ನಡವಳಿಕೆಗಳನ್ನು ಬದಲಾಯಿಸಿಕೊಳ್ಳದೆ ಹೋದರೆ 5000 ದಲಿತ ಕ್ರೈಸ್ತರು ಬೌದ್ಧ ಧರ್ಮಿಗಳಾಗುತ್ತೇವೆಂದು ದಿನಾಂಕ 02.02.2001ರಂದು ಮದ್ರಾಸಿನಲ್ಲಿ ಹೇಳಿಕೆಯನ್ನು ನೀಡಿದರು.

'ನೊಬಿಲಿ' ಎಂಬ ಕ್ರೈಸ್ತ ಧರ್ಮಿಯೊಬ್ಬ 16ನೇ ಶತಮಾನದಲ್ಲಿ ಮಧುರೈ ಸುತ್ತಮುತ್ತ ಒಂದು ಲಕ್ಷ ಹಿಂದೂಗಳನ್ನು ಕ್ರೈಸ್ತ ಧರ್ಮಕ್ಕೆ ಸೇರಿಸಲು ಕಾರಣವಾದ. ಕ್ರೈಸ್ತ ಧರ್ಮವನ್ನು ಬೋಧಿಸುವ ತವಕದಲ್ಲಿ ಪಾಶ್ಚಾತ್ಯ ಪದ್ಧತಿಗಳಿಂದ ಮತಾಂತರಿಗಳನ್ನು ಕಟ್ಟುನಿಟ್ಟಾಗಿ ದೂರವಾಗಿಟ್ಟಿಲ್ಲದ ಕಾರಣ ಹಿಂದೂ ಮತಾಂತರಿಗಳು ಜನಿವಾರ ಹಾಕಿಕೊಳ್ಳುವುದು, ವಿಭೂತಿ ಮತ್ತು ನಾಮ ಹಾಕಿಕೊಳ್ಳುವುದನ್ನು ಮುಂದುವರಿಸಿದರು. ಭಾರತಕ್ಕೆ ಬಂದ ಎಲ್ಲಾ ಯೂರೋಪಿನ ಅಧಿಕಾರಿಗಳು ಮತ್ತು ಮತೀಯ ಸಂಸ್ಥೆಗಳವರು ತಾವು ಬಂದ ಆರಂಭದಿಂದಲೇ ಭಾರತೀಯರನ್ನು ಕ್ರೈಸ್ತ ಧರ್ಮಕ್ಕೆ

ಮತಾಂತರಗೊಳಿಸುವ ಅತ್ಯುತ್ಸಾಹ ಹೊಂದಿದವರಾಗಿದ್ದರು. ಹಾಗಾಗಿ ಮತಾಂತರ ಹೊಂದಿದ ಹಿಂದೂಗಳು ಪೂರ್ಣವಾಗಿ ಕ್ರೈಸ್ತ ಧರ್ಮಿಗಳಾಗದೆ ಅರೆ-ಹಿಂದೂ, ಅರೆ-ಕ್ರೈಸ್ತರಾಗಿ ಮುಂದುವರಿದರು. ಇದರಿಂದ ಅಸ್ಪೃಶ್ಯನಾದವನು ಮತಾಂತರಗೊಂಡ ನಂತರವೂ ತನ್ನ ಯಾತನೆಗಳನ್ನು ಕಿತ್ತೊಗೆಯಲಾಗದೆ ತೊಳಲಾಡುವಂತಾಗಿದೆ. ಇದನ್ನು ದಲಿತ ಕ್ರೈಸ್ತರಲ್ಲಿ ಇಂದು ನಾವು ಕಾಣಬಹುದಾಗಿದೆ. ಅಂದರೆ ಮತಾಂತರ ಹೊಂದಿದ ಹಿಂದೂಗಳನ್ನು ತಮ್ಮ ಮೊದಲಿನ ನೆಲೆಯಿಂದ ಬೇರ್ಪಡಿಸುವುದರಲ್ಲಿ ಕ್ರೈಸ್ತ ಧರ್ಮ ಸೋಲನ್ನು ಕಂಡಿದೆ ಎನ್ನುವುದು ರುಜುವಾತಾಗಿದೆ. ಅಸ್ಪೃಶ್ಯರು, ಮತಾಂತರ ಪೂರ್ವದಲ್ಲಿ ಸವರ್ಣೀಯ ಹಿಂದೂಗಳಿಂದ ಅನುಭವಿಸುತ್ತಿದ್ದ ಎಲ್ಲಾ ಯಾತನೆಗಳನ್ನು ದಲಿತ ಕ್ರೈಸ್ತರಾಗಿ ಇಲ್ಲಿಯೂ ಅನುಭವಿಸುತ್ತಿದ್ದಾರೆ. ಜೊತೆಗೆ ಅವರು ತಮಗಿದ್ದ ಹಿಂದಿನ ಶಕ್ತಿಯನ್ನು ಕಳೆದುಕೊಂಡು ನಿಷ್ಪ್ರಯೋಜಕರಾಗಿ, ಛಿದ್ರ ಛಿದ್ರವಾಗಿ ಹಲವು ಉಪಜಾತಿಗಳ ಬೋಗಿಗಳಲ್ಲಿ ಕುಳಿತು ನರಳುತ್ತಿದ್ದಾರೆ. ಈಶಾನ್ಯ ಭಾರತದ ಕೆಲವು ರಾಜ್ಯಗಳಲ್ಲಿ (ವಿಶೇಷವಾಗಿ ನಾಗಾಲ್ಯಾಂಡ್) ಬುಡಕಟ್ಟು ಜನರಾದ ಇವರ ಮಧ್ಯೆ ಹಿಂದೂ ಪದ್ಧತಿಗಳಾದ ಜಾತಿ, ಅಸ್ಪೃಶ್ಯತೆ ನುಸುಳದ ಕಾರಣ ಇವರು ಸಂಪೂರ್ಣ ಕ್ರೈಸ್ತರಾಗಿ ಮಾರ್ಪಟ್ಟಿದ್ದಾರೆ. ಆದರೆ ಉಪ ಬುಡಕಟ್ಟುಗಳ ನಡುವೆ ಶಕ್ತ, ಅಶಕ್ತ ಎನ್ನುವ ಭಾವನೆಗಳಿವೆ.

ಜಾತಿಪದ್ಧತಿ ಇಂದು ಕೇವಲ ಹಿಂದೂ ಧರ್ಮದಲ್ಲಿಯೇ ಅಲ್ಲದೆ ಇಸ್ಲಾಂ, ಕ್ರೈಸ್ತ ಮತ್ತು ಬೌದ್ಧ ಧರ್ಮಗಳಲ್ಲೂ ಕಾಣಿಸಿಕೊಂಡಿದೆ. ಭಾರತಕ್ಕೆ ಕಾಲಿಟ್ಟ ಹಿಂದೂಯೇತರ ಧರ್ಮಗಳು ಹಾಗೂ ಹಿಂದೂ ಧರ್ಮದಿಂದಲೆ ಸಿಡಿದು ನಿಂತ ಇತರ ಧರ್ಮಗಳು ಪ್ರಾರಂಭದಲ್ಲಿ ಜಾತಿಪದ್ಧತಿಯ ವಿರುದ್ಧ ಕನಲಿ ನಿಂತರೂ ಕಾಲಕ್ರಮೇಣ ಜಾತಿ ಪದ್ಧತಿಯೇ ಎಲ್ಲಾ ಧರ್ಮಗಳಲ್ಲೂ ನುಸುಳಿ ಬೇರೊಂದು ರೂಪದಲ್ಲಿ ಗಟ್ಟಿಯಾಗಿ ನೆಲೆ ನಿಂತಿತು. ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ದಲಿತರು ತಮಗೂ ಮೀಸಲಾತಿ ದೊರಕಬೇಕೆಂದು ಬಹುಕಾಲದಿಂದ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಇವರಿಗೆ ಮೀಸಲಾತಿ ಸಿಕ್ಕಬೇಕಾದುದು ನ್ಯಾಯ. ಆದರೆ ಅದು ಅವರಿಗೆ ಪ್ರತ್ಯೇಕವಾಗಿ ಸಿಗಬೇಕೇ ಅಥವಾ ದಲಿತರ ಜೊತೆಯೇ ಸಿಗಬೇಕೆ ಎನ್ನುವುದು ಪ್ರಶ್ನೆಯಾಗಿ ಕಾಡುತ್ತಿದೆ. ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಮುಂಚೆ ದಲಿತ ಕ್ರೈಸ್ತರು ಎಂದರೆ ಯಾರು? ಅವರಲ್ಲಿ ಅಸ್ಪೃಶ್ಯೇತರರೂ ಇದ್ದಾರೆಯೆ? ಇದ್ದರೆ ಅವರನ್ನು ದಲಿತ ಕ್ರೈಸ್ತರಿಂದ ಹೇಗೆ ಬೇರ್ಪಡಿಸಬೇಕು ಎನ್ನುವ ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕಿದೆ.

ಈಗಾಗಲೇ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿರುವ ವಿವಿಧ ಜಾತಿಗಳು (ಸ್ಪೃಶ್ಯರು) ವಿಭಿನ್ನ ಮಟ್ಟದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂತಸ್ತನ್ನು ಹೊಂದಿವೆ. ಅಸ್ಪೃಶ್ಯರು ಮತ್ತು ಸ್ಪೃಶ್ಯ ದಲಿತರ ನಡುವೆ ಈಗ ತೀವ್ರತರದ ಸ್ಪರ್ಧೆ ಕಾಣಿಸಿಕೊಂಡಿದೆ. ಅಸ್ಪೃಶ್ಯರು, ಸ್ಪೃಶ್ಯರ ಜೊತೆಗೆ ಮೀಸಲಾತಿಯನ್ನು ಹಂಚಿಕೊಳ್ಳುತ್ತಿರುವಾಗ ದಲಿತ ಕ್ರೈಸ್ತರ ಜೊತೆಗೇಕೆ ಮೀಸಲಾತಿಯನ್ನು ಹಂಚಿಕೊಳ್ಳಬಾರದು ಎನ್ನುವ ಪ್ರಶ್ನೆ ಏಳುತ್ತದೆ. ಸ್ಪೃಶ್ಯರು, ಅಸ್ಪೃಶ್ಯರ ಜೊತೆಗೆ ಮೀಸಲಾಗಿ ಹಂಚಿಕೊಳ್ಳುತ್ತಿರುವುದೇ ಸರಿಯಾದ ನಿಲುವಲ್ಲ ಎನ್ನುವ ಮಾತುಗಳು ಕೇಳಿಬರುತ್ತಿದೆ.

ಮಹಾರಾಷ್ಟ್ರದಲ್ಲಿ ಮಹಾರ್ ಜನರು ದಶಕಗಳ ಕಾಲ ನಡೆಸಿದ ಹೋರಾಟದಿಂದ ಮಹಾರಾಷ್ಟ್ರ ಸರ್ಕಾರ ಕ್ರಮಸಂಖ್ಯೆ ಸ.ಅ.ಸಿಬಿಸಿ/0901/1962 ಆಜ್ಞೆಯನ್ನು ಹೊರಡಿಸಿತು. ಇದರ ಪ್ರಕಾರ ಮಹಾರಾಷ್ಟ್ರದಲ್ಲಿ ಬೌದ್ಧರಾಗಿ ಮತಾಂತರ ಹೊಂದಿದ ಅಸ್ಪೃಶ್ಯರಿಗೆ

ಮೀಸಲಾತಿಯ ಸೌಲಭ್ಯವನ್ನು ನೀಡಲಾಯಿತು. ಈ ಮೀಸಲಾತಿ ಮಹಾರಾಷ್ಟ್ರದ ಸರ್ಕಾರಿ ಹುದ್ದೆಗಳಿಗೆ ಮಾತ್ರ ಸೀಮಿತವಾಗಿದ್ದು ಇದಕ್ಕೆ ಪ್ರತಿಯಾಗಿ ದಲಿತರು ದೊಡ್ಡ ರಿಸ್ಕ್ ತೆಗೆದುಕೊಳ್ಳಬೇಕಾಯಿತು. ಉಚ್ಚ ಜಾತಿಯವರು ದಲಿತರ ಮೇಲೆ ಯಾವುದೇ ಅಪರಾಧಗಳನ್ನು ಎಸಗಿದರೂ ದಲಿತರು ಉಚ್ಚ ಜಾತಿಗಳ ವಿರುದ್ಧ ಮೊಕದ್ದಮೆಗಳನ್ನು ಹೂಡಬಹುದಾಗಿದ್ದ ವಿಶೇಷ ಕಾನೂನುಗಳನ್ನು (ಅಸ್ಪೃಶ್ಯತೆ ಇತ್ಯಾದಿ) ಉಪಯೋಗಿಸಿಕೊಳ್ಳುವಂತಿರಲಿಲ್ಲ. ಬೌದ್ಧ ಧರ್ಮಿಗಳಾಗಿದ್ದರಿಂದ ಅವರನ್ನು ಸ್ಪೃಶ್ಯರೆಂದು ತಿಳಿದುಕೊಳ್ಳಬೇಕಿತ್ತು.

ಮುಂದೆ ಅದೇ ಮಹಾರ್ ಜನಾಂಗದ ತೀವ್ರ ಹೋರಾಟದಿಂದ ಕೇಂದ್ರ ಸರ್ಕಾರ 04.06.1990ರಂದು ಕ್ರಮಸಂಖ್ಯೆ 12016/28/90–ಎಸ್‌ಸಿಡಿ ರಿ. ಸೆಲ್ ಆಜ್ಞೆಯನ್ನು ಹೊರಡಿಸಿತು. ಭಾರತದ ಗೆಜೆಟ್ಟಿನ ವಿಶೇಷ ಆಜ್ಞೆಯಂತೆ ಭಾರತದಾದ್ಯಂತ ಬೌದ್ಧರಾಗಿ ಮತಾಂತರ ಹೊಂದಿದ ಅಸ್ಪೃಶ್ಯರಿಗೆ ಮೀಸಲಾತಿಯನ್ನು ನೀಡಲಾಯಿತು. ಇದನ್ನು ಮಹಾರಾಷ್ಟ್ರ ಇನ್ನಿತರ ಕೆಲವು ರಾಜ್ಯಗಳನ್ನು ಬಿಟ್ಟರೆ ಎಲ್ಲಾ ರಾಜ್ಯ ಸರಕಾರಗಳು ಸಾರ್ವಜನಿಕರಿಗೆ ತಿಳಿಸಲೇ ಇಲ್ಲ. ಕರ್ನಾಟಕ ಸರಕಾರದ ಆಡಳಿತಾಧಿಕಾರಿಗಳು ಹತ್ತು ವರ್ಷಗಳ ನಂತರವೂ 2001ರಲ್ಲಿ ಈ ವಿಷಯ ನಮಗೆ ಗೊತ್ತೇ ಇಲ್ಲ ಎಂದರು. ಇದನ್ನು ಸಾರ್ವಜನಿಕರಿಗೆ ತಿಳಿಸಿದರೆ ಅಸ್ಪೃಶ್ಯರು ಬೌದ್ಧ ಧರ್ಮಕ್ಕೆ ಹಾರಿಬಿಡಬಹುದೆಂಬ ಭಯ ಇವರನ್ನು ಕಾಡಿರಬೇಕು. ಮುಂದಿನ ದಿನಗಳಲ್ಲಿ ಒಂದು ವೇಳೆ ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾಗಲು ಪ್ರಾರಂಭಿಸಿದರೆ ಕಟ್ಟಾ ಹಿಂದೂಗಳ ಕಣ್ಣುಗಳು ಕೆಂಪಗಾಗಿ ಈ ಕಾನೂನಿಗೆ ಒಂದು ಗತಿ ಕಾಣಿಸಲು ಮುಂದಾಗಬಹುದು.

1992ರಲ್ಲಿ ಅಂಬ್ರೋಸ್ ಪಿಂಟೋ ಎಸ್.ಜೆ. ಎಂಬುವರು ಬೆಂಗಳೂರಿನ ಸುತ್ತಲು 11 ಹಳ್ಳಿಗಳಲ್ಲಿರುವ ದಲಿತ ಕ್ರೈಸ್ತರ ಸಾಮಾಜಿಕ ಮತ್ತು ಆರ್ಥಿಕ ಸಮೀಕ್ಷೆ ನಡೆಸಿದಾಗ 2670 ಜನರಿರುವ 487 ದಲಿತ ಕ್ರೈಸ್ತರ ಕುಟುಂಬಗಳಲ್ಲಿ ಒಬ್ಬನೇ ಒಬ್ಬ ಡಾಕ್ಟರಾಗಲಿ, ಎಂಜಿನಿಯರಾಗಲಿ ಅಥವಾ ಸ್ನಾತಕೋತ್ತರ ಪದವೀಧರರಾಗಲಿ ಇಲ್ಲವೆಂದು ತಿಳಿದಿದೆ. ಕೇವಲ 44 ವಿದ್ಯಾರ್ಥಿಗಳು ಮಾತ್ರ ಪಿ.ಯು.ಸಿ. ತಲುಪಿದ್ದು 62 ವಿದ್ಯಾರ್ಥಿಗಳು ಎಸ್‌ಎಸ್‌ಎಲ್‌ಸಿ ಮುಗಿಸಿದ್ದರು. ಕ್ರೈಸ್ತ ಧರ್ಮ ಎಲ್ಲರನ್ನೂ ಸಮಾನವಾಗಿ ನೋಡುತ್ತದೆ ಎನ್ನುವ ಕ್ರೈಸ್ತರು ದಲಿತ ಕ್ರೈಸ್ತರಿಗೆ ನೀಡಿರುವ ಕೊಡುಗೆ ಇದು. ಪಾಪಿ, ಸಮುದ್ರಕ್ಕೆ ಹೋದರೂ ನೀರು ಮೊಣಕಾಲಿಗೆ ಬರುತ್ತದೆ ಎನ್ನುವ ಗೋಳು ಇವರದಾಗಿದೆ.

ಕ್ರೈಸ್ತರು ಮೂಲೆ ಮೂಲೆಗಳಲ್ಲೂ ಸಾವಿರಾರು ಶಾಲೆ, ಕಾಲೇಜುಗಳನ್ನು ನಡೆಸುತ್ತಿದ್ದರೂ ದಲಿತರನ್ನು ಅಸ್ಪೃಶ್ಯರಾಗಿಯೇ ಕಾಣುತ್ತಿದ್ದಾರೆ ಎನ್ನುವುದು ಇಲ್ಲಿ ಎದ್ದು ಕಾಣುತ್ತದೆ. ಒಂದು ಲೆಕ್ಕದ ಪ್ರಕಾರ ದಲಿತ ಕ್ರೈಸ್ತರಲ್ಲಿ ಅಕ್ಷರಸ್ಥರ ಸಂಖ್ಯೆ ಶೇಕಡ 61.58. ಪ್ರೈಮರಿ ವಿದ್ಯಾಭ್ಯಾಸವೂ ಸೇರಿ (ಗ್ರಾಮೀಣ ಪ್ರದೇಶಗಳಲ್ಲಿ, ಪಟ್ಟಣ ಪ್ರದೇಶಗಳಲ್ಲಿ) ಶೇಕಡ 84.81. ಪ್ರೈಮರಿ ವಿದ್ಯಾಭ್ಯಾಸ ಸುಮಾರು 30ರಷ್ಟು (ನೋಬಿನ್ ಜಾರ್ಜ್ ದಲಿತ್ ಕ್ರಿಶ್ಚಿಯನ್ ಇನ್ ಇಂಡಿಯಾ). ಆದರೆ ಕ್ರೈಸ್ತರು ಹೇಳುವ ಹಾಗೆ ದೇಶದಲ್ಲಿ ದಲಿತ ಅಕ್ಷರಸ್ಥರ ಸಂಖ್ಯೆ ಶೇಕಡ 75. ಇದನ್ನು ನಂಬುವುದಾದರೂ ಹೇಗೆ? ಇನ್ನು ಅವರ ಆರ್ಥಿಕ ಸ್ಥಿತಿ, ಅವರು ಜೀವನ ನಡೆಸುವ ಪರಿಸರ ಪ್ರದೇಶಗಳು ಮತ್ತು ಇತರ ಅಸ್ಪೃಶ್ಯರಿಗಿಂತ ಯಾವ ರೀತಿಯಲ್ಲೂ ಭಿನ್ನವಿಲ್ಲ. ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಸ್ಪೃಶ್ಯ ಸಮುದಾಯದ ಜನರು ಸಾಮಾಜಿಕವಾಗಿ, ಆರ್ಥಿಕವಾಗಿ ಕ್ರೈಸ್ತ

ಮಿಷನರಿಗಳ ಸಹಾಯದಿಂದ ಎಲ್ಲಾ ಸೌಲಭ್ಯಗಳನ್ನು ಪಡೆದಿರುವುದು ತಿಳಿದುಬರುತ್ತದೆ. ಇಲ್ಲೂ ಹಿಂದೂ ಮೇಲ್ಜಾತಿಗಳೇ ಇದಕ್ಕೆಲ್ಲ ಕಾರಣವಾಗಿರುವುದು ವಿಷಾದದ ಸಂಗತಿಯಾಗಿದೆ. ಚರ್ಚ್ ಇರುವುದು ಬಡವರಿಗಾಗಿ, ನೊಂದವರಿಗಾಗಿ ಮತ್ತು ಸಮಾಜದಲ್ಲಿ ಹಿಂದುಳಿದವರಿಗಾಗಿ ಎನ್ನುವುದು ಕೇವಲ ಬೂಟಾಟಿಕೆ ಎನ್ನುವುದನ್ನು ಕ್ರೈಸ್ತ ಧರ್ಮೀಯರು ತೋರಿಸಿಬಿಟ್ಟಿದ್ದಾರೆ.

ವೀರಶೈವ ಧರ್ಮದಲ್ಲೂ ಅಸ್ಪೃಶ್ಯರಿಗೆ ಅದೇ ಗತಿ ಒದಗಿದೆ. ಎಂಟು ಶತಮಾನಗಳ ಹಿಂದೆ ಬಸವಣ್ಣನ ಎಲ್ಲಾ ಉಪದೇಶಗಳನ್ನು ಸ್ವೀಕರಿಸಿದ ಲಿಂಗಾಯಿತರು ಅಸ್ಪೃಶ್ಯತೆಯನ್ನು ತೊಡೆದುಹಾಕಲು ಮುಂದಾಗಲಿಲ್ಲ. ಬಸವಣ್ಣನ ಉಪದೇಶಗಳಿಂದ ಪ್ರೇರಣೆಗೊಂಡ ಸಮಾಜದ ಎಲ್ಲಾ ಸಮುದಾಯಗಳು ಲಿಂಗಾಧಾರಿಗಳಾದರು. ವಚನ ಸಾಹಿತ್ಯಕ್ಕೂ ತಮ್ಮ ಅಪಾರ ಕೊಡುಗೆಯನ್ನು ನೀಡಿದರು. ಬಸವಣ್ಣನ ಅನುಭವ ಮಂಟಪ ಕುಸಿದುಹೋದ ನಂತರ ಎಲ್ಲಾ ಸಮುದಾಯಗಳು ತಮ್ಮ ಹಿಂದಿನ ಸ್ವಜಾತಿಗಳಿಗೆ ಮತ್ತೆ ತಗುಲಿಕೊಂಡವು. ಬ್ರಾಹ್ಮಣ ಲಿಂಗಾಯಿತ, ರೆಡ್ಡಿ ಲಿಂಗಾಯಿತ, ಗೌಡ ಲಿಂಗಾಯಿತ, ಜಂಗಮ ಲಿಂಗಾಯಿತ ಹೀಗೆ ಉಪಜಾತಿಗಳ ಲಿಂಗಾಯಿತರನ್ನು ಈಗಲೂ ನೋಡಬಹುದಾಗಿದೆ. ಇಲ್ಲಿಯೂ ಮದುವೆಗಳು ಆಯಾ ಉಪಜಾತಿಗಳ ಒಳಗೆಯೆ ನಡೆಯುತ್ತವೆ.

ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡ ದಲಿತರ ಕಥೆಯೂ ಬೇರೆಯಾಗಿಲ್ಲ. ಮಸೀದಿಯಲ್ಲಿ ಬಡವ ಬಲ್ಲಿದನೆಂಬ ಭೇದವಿಲ್ಲದೆ ಪ್ರಾರ್ಥನೆ ಸಲ್ಲಿಸಲು ಎಲ್ಲರೂ ಅರ್ಹರಾಗಿದ್ದಾರೆ. ಆದರೆ ಮದುವೆ ವಿಚಾರ ಬಂದಾಗ ತಮ್ಮ ತಮ್ಮ ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಅವರು ಒಂದಾಗುತ್ತಾರೆ. ಈ ವಿಷಯ ಎಲ್ಲಾ ಧರ್ಮಗಳಿಗೂ ಅನ್ವಯಿಸುತ್ತದೆ. ಮುಖ್ಯವಾಗಿ ಮದುವೆಯ ವಿಷಯದಲ್ಲಿ ದಲಿತರು ಪ್ರತ್ಯೇಕವಾಗಿಯೆ ಉಳಿದುಕೊಳ್ಳುತ್ತಾರೆ. ಬೌದ್ಧ ಧರ್ಮದಲ್ಲೂ ಅದೇ ಕಥೆಯಾಗಿದೆ.

## ಅಂತರಜಾತೀಯ ವಿವಾಹಗಳು

ಅನತಿ ಕಾಲದಿಂದಲೂ ಹಿಂದೂಗಳ ನಡುವಿನ ಜಾತೀಯತೆಗೆ ಬೇಸತ್ತು ಜಾತ್ಯತೀತ ಸಮಾಜ ನಿರ್ಮಾಣದ ಕನಸು ಕಂಡವರು ಅನೇಕರು. ಅಂತರಜಾತೀಯ ವಿವಾಹ ಕೇವಲ ಇತ್ತೀಚಿನ ದಶಕಗಳ ಬೆಳವಣಿಗೆಯೇನೂ ಅಲ್ಲ. ಅದಕ್ಕೆ ಶತಮಾನಗಳ ಇತಿಹಾಸವಿದೆ. ಆದರೆ ಇದರಿಂದ ಗಹನವಾದ ಬೆಳವಣಿಗೆಯೇನೂ ಆಗಿಲ್ಲ. ಜಾತಿಗೆ ಮುಂಚೆ ಇದ್ದ ವರ್ಣ ವ್ಯವಸ್ಥೆಯಲ್ಲೂ ಕೂಡ ಆಗಾಗ್ಗೆ ಅಂತರ್ವರ್ಣೀಯ ವಿವಾಹಗಳು ನಡೆಯುತ್ತಿದ್ದವು. ಇದರಲ್ಲಿ ಮುಖ್ಯವಾಗಿ ಎರಡು ವಿಧ. ಅನುಲೋಮ ಮತ್ತು ಪ್ರತಿಲೋಮ ವಿವಾಹಗಳು. ಮೇಲ್ಜಾತಿಯ ಯುವಕನೊಬ್ಬ ಕೆಳಜಾತಿಯ ಕನ್ನೆಯೊಬ್ಬಳನ್ನು ವಿವಾಹವಾದರೆ ಅನುಲೋಮ. ಅವರಿಗೆ ಹುಟ್ಟಿದ ಮಕ್ಕಳನ್ನು ಯಾವ ಕಾರಣಕ್ಕೂ ಆ ಸಮಾಜಗಳು ತಮ್ಮೊಳಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ. ಬದಲಿಗೆ ಅವರನ್ನು ಚಂಡಾಲ ಪರಾಶವ (ಜೀವಂತ ಶವ) ಎಂದೇ ಕರೆಯುತ್ತಿದ್ದವು. ಕೆಳಜಾತಿಯ ಯುವಕನೊಬ್ಬ ಮೇಲ್ಜಾತಿಯ ಕನ್ನೆಯೊಬ್ಬಳನ್ನು ವಿವಾಹವಾದರೆ ಪ್ರತಿಲೋಮ. ಸಮಾಜ ಇದನ್ನು ಅಂಗೀಕರಿಸುತ್ತಲೇ ಇರಲಿಲ್ಲ.

ಈ ಮಧ್ಯೆ ವರ್ಣ ವ್ಯವಸ್ಥೆ ಜಾತಿಗಳಾಗಿ ರೂಪಾಂತರಗೊಂಡು ಪ್ರತಿ ಜಾತಿಯೂ

ಮುಖ್ಯವಾಗಿ ಮೇಲ್ಜಾತಿಗಳು ತಾವು ನಂಬಿದ್ದ ಜಾತಿ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳಲು ಜಾತಿಯು ಸದಸ್ಯರ ಮೇಲೆ ಹೇರಿದ ಅತ್ಯಂತ ಕಠಿಣ ಮತ್ತು ಬಿಗಿಯಾದ ನಿಯಮಗಳಿಂದಾಗಿ ಕೆಲವು ನೂರು ವರ್ಷಗಳ ಮಟ್ಟಿಗೆ ಈ ರೀತಿಯ ಮದುವೆಗಳು ನಡೆದು ಅನಂತರ ನಿಂತುಹೋದವು. ಈ ನೂರಾರು ವರ್ಷಗಳ ಮಧ್ಯೆ ಸಮಾಜದಲ್ಲಿ ಧಾರ್ಮಿಕ ಆಂದೋಲನವಾಗಿ ಆರ್ಯ ಸಮಾಜದಂತಹ ಸಂಸ್ಥೆಗಳು ಹುಟ್ಟಿಕೊಂಡವು. ವಿವಾಹ ಸಂಬಂಧಿತ ವಿಷಯದಲ್ಲಿ ಜಾತಿಯ ಬೇರುಗಳು ಆಳವಾಗಿ ಬೇರೂರಿ ಬಲಗೊಂಡು ನಿಂತವು.

ಸ್ವಾತಂತ್ರ್ಯಾನಂತರ ಮತ್ತೆ ಅಂತರ್ಜಾತೀಯ ವಿವಾಹಗಳು ಪ್ರಾಮುಖ್ಯತೆ ಪಡೆಯುತ್ತಿದ್ದು ಇದರ ಹಿಂದಿನ ಉದ್ದೇಶ ಮುಖ್ಯವಾಗಿ ಜಾತ್ಯತೀತ ಸಮಾಜದ ನಿರ್ಮಾಣವೇ ಆಗಿದೆ. ಸಂವಿಧಾನವು ಕೂಡ ಯುವಕ-ಯುವತಿಯರು ತಮಗೆ ಇಷ್ಟವಾದ ವಧುವರರ ಜೊತೆ (ಎಲ್ಲಾ ಜಾತಿ, ಧರ್ಮ) ವಿವಾಹವಾಗಲು ಅವಕಾಶವನ್ನು ಕಲ್ಪಿಸಿದೆ. ಆದರೆ ಇದ್ಯಾವುದರಿಂದಲೂ ಅಂತರ್ಜಾತೀಯ ವಿವಾಹಗಳು ನಮ್ಮ ಬದುಕಿನ ಒಂದು ಅಂಗವಾಗಿ ಬೆಳೆಯಲಿಲ್ಲ. ಈ ಆಧುನಿಕ ಯುಗದಲ್ಲೂ ಅಂತರ್ಜಾತೀಯ ವಿವಾಹಗಳೂ ಸಹ ಜಾತಿಯ ಒಳ ಪಂಗಡಗಳಲ್ಲಿಯೇ ನಡೆಯುತ್ತಿವೆ. ಅಂದರೆ ಸ್ಮಾರ್ತ ಬ್ರಾಹ್ಮಣನೊಬ್ಬ ಮಾಧ್ವರ ಹುಡುಗಿಯೊಬ್ಬಳನ್ನು ಮದುವೆಯಾಗುವುದು, ಆರಾಧ್ಯ ಲಿಂಗಾಯಿತರ ಹುಡುಗಿಯೊಬ್ಬಳು ಸಾದರ ಲಿಂಗಾಯಿತರ ಹುಡುಗನೊಬ್ಬನನ್ನು ಮದುವೆಯಾಗುವುದು ಇತ್ಯಾದಿ. ಈ ವಿವಾಹಗಳು ಸಹ ಸಮಾಜದಲ್ಲಿ ಪರಿಣಾಮಕಾರಿಯಾದ ಬೆಳವಣಿಗೆಯಾಗಿ ಬೆಳೆಯಲಿಲ್ಲ. ಎಂಟುನೂರು ವರ್ಷಗಳ ಹಿಂದೆಯೇ ಬಸವಣ್ಣನ ಎಲ್ಲ ಉಪದೇಶಗಳನ್ನು ಸ್ವೀಕರಿಸಿದ ಸಮಾಜವು ಅವರ ಅಂತರ್ಜಾತೀಯ ವಿವಾಹಗಳ ಪ್ರಯೋಗವನ್ನು ಧಿಕ್ಕರಿಸಿತು.

ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಶವಯ್ಯ! ಎಂದು ನುಡಿದು ಸ್ಥಾಪಿಸಿದ ವೀರಶೈವ ಧರ್ಮ ಇಂದು ನೂರಾರು ಜಾತಿ, ಉಪಜಾತಿಗಳಾಗಿ ಒಡೆದು ಚೂರು ಚೂರಾಗಿದೆ. ಮೂಲಜಾತಿ ಮತ್ತು ಉಪಜಾತಿಗಳು ಮತ್ತೆ ತಮ್ಮ ಜಾತಿ, ಉಪಜಾತಿಗಳ ಸ್ಥಾನಕ್ಕೆ ಹಿಂದಿರುಗಿದವು. ಇದಕ್ಕೂ ಹಿಂದಿನ ವರ್ಣ ವ್ಯವಸ್ಥೆಯಲ್ಲಿ ಸ್ವಲ್ಪ ಕಾಲ ಜಾರಿಯಲ್ಲಿದ್ದ ಸ್ವಯಂವರಗಳು ವಿಭಿನ್ನ ಬಗೆಯಲ್ಲಿ ಅಂತರ್ಜಾತೀಯ ವಿವಾಹಗಳಿಗೆ ಅವಕಾಶ ಕಲ್ಪಿಸಿದ್ದರೂ ಅವು ಕೂಡ ಸಮಾಜದ ಅವಿಭಾಜ್ಯ ಅಂಗವಾಗಿ ಬೆಳೆಯಲಿಲ್ಲ. ಅಂತರ್ಜಾತೀಯ ಮದುವೆಯಾದ ಕೆಲವರು, ತಂದೆ ತಾಯಿ ಮತ್ತು ಕುಟುಂಬದವರನ್ನು ಎದುರುಹಾಕಿಕೊಂಡರೆ ಇನ್ನೂ ಕೆಲವರು ಸಮಾಜದ ವರ್ತನೆಯಿಂದ ಜಿಗುಪ್ಸೆಗೊಳ್ಳುತ್ತಾರೆ. ಮದುವೆಯಾದವರು ಪ್ರೀತಿ, ಅನ್ಯೋನ್ಯದಿಂದ ಮುಂದುವರಿದರೂ ಸಮಾಜ ಅವರನ್ನು ಕುರುಡು ಕಣ್ಣಿನಿಂದಲೇ ನಿಂದಿಸತೊಡಗುತ್ತದೆ. ಅಂತರ್ಜಾತೀಯ ವಿವಾಹಗಳಿಂದ ಹೆಣ್ಣು-ಗಂಡು ಎಷ್ಟೋ ಎಡರು ತೊಡರುಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ.

ಅಂತರ್ಜಾತೀಯ ವಿವಾಹಗಳಿಂದ ಜಾತಿ ನಾಶವಾಗುತ್ತದೆ ಎನ್ನುವುದು ದೂರದ ಮಾತು. ಇದು ಕೆಲವರ ಭ್ರಮೆ ಎಂದರೂ ತಪ್ಪಾಗಲಾರದು. ಇಂತಹ ವಿವಾಹಗಳಿಂದ ಜಾತಿ ನಾಶ ಸಾಧ್ಯ ಎನ್ನುವುದು ಭಾವೋದ್ವೇಗಕ್ಕೆ ಒಳಗಾದ ಕೆಟ್ಟ ಹಠ ಮಾತ್ರ. ಇಂತಹ ವಿವಾಹಗಳಿಂದ ಜಾತಿ ನಾಶ ಆಗಲಾರದು, ಏಕೆಂದರೆ ನಮ್ಮ ಸಾಮಾಜಿಕ ವ್ಯವಸ್ಥೆಯೇ

ಅಂಥದ್ದು. ಅಂತರ್ಜಾತೀಯ ವಿವಾಹ ನಡೆದ ಕ್ಷಣದಿಂದಲೇ ಹೆಣ್ಣಾದವಳು ಗಂಡನ ಜಾತಿಯನ್ನು ಸೇರಿಬಿಡುತ್ತಾಳೆ. ಇಲ್ಲ, ಇದ್ದ ಜಾತಿಗಳ ಜೊತೆಗೆ ಇವರದೂ ಮತ್ತೊಂದು ಜಾತಿಯಾಗಿ ಸೇರ್ಪಡೆಯಾಗುತ್ತದೆ. ಇವರಿಗೆ ಹುಟ್ಟಿದ ಮಕ್ಕಳು ಹಲವು ಬಗೆಯ ಸಮಸ್ಯೆಗಳನ್ನು ಎದುರಿಸುವುದರ ಜೊತೆಗೆ ಅವರಲ್ಲಿ ಒಂದು ಬಗೆಯ ಕೀಳರಿಮೆ ಮನೆ ಮಾಡಿಕೊಂಡುಬಿಡುತ್ತದೆ. ಸಮಾಜದಲ್ಲಿ ಮೇಲಿನ ನೋಟಕ್ಕೆ ಜಾತಿಯ ಬೇರುಗಳು ಒಂದು ಕಡೆ ಸಡಿಲಗೊಂಡಂತೆ ಕಂಡರೂ ಇನ್ನೊಂದು ಕಡೆ ಗಟ್ಟಿಗೊಳ್ಳುತ್ತಲೇ ಇವೆ.

ಇನ್ನು ಸರ್ಕಾರ ಅಂತರ್ಜಾತೀಯ ವಿವಾಹವಾಗುವವರಿಗೆ ಆರ್ಥಿಕ ಸಹಾಯ ನೀಡುತ್ತಿದ್ದು, ಉದ್ಯೋಗದಲ್ಲಿ ಮೀಸಲಾತಿಯನ್ನು ಕಲ್ಪಿಸಬೇಕೆಂದು ಯೋಚಿಸುತ್ತಿದೆ. ಇದರಿಂದ ಜಾತಿ ನಾಶವಾಗುವುದೇ ಎನ್ನುವ ಪ್ರಶ್ನೆಗೆ 1998ರಲ್ಲಿ ಬೆಂಗಳೂರಿನಲ್ಲಿ ನಡೆದ ರಾಜ್ಯಮಟ್ಟದ ಅಂತರ್ಜಾತೀಯ ವಿವಾಹದ ಅಧ್ಯಕ್ಷತೆಯನ್ನು ವಹಿಸಿದ್ದ ಶಿವರಾಮ ಕಾರಂತರು ಕೇವಲ ಅಂತರ್ಜಾತೀಯ ವಿವಾಹಗಳಿಂದ ಜಾತಿ ನಾಶವಾಗುವುದಿಲ್ಲ ಎಂದರು. ಇದು ಅಕ್ಷರಶಃ ನಿಜ. ಸಮಾಜದ ನೋಟ ಬದಲಾಗಬೇಕಿದೆ.

ಹಿಂದೂ ಧರ್ಮದಲ್ಲಿನ ಉಚ್ಚ ಜಾತಿಗಳು ಕೆಳಜಾತಿಗಳನ್ನು ಅರಗಿಸಿಕೊಂಡು ಸಮಾಜದಲ್ಲಿ ಜಾತ್ಯತೀತತೆಯನ್ನು ಸಾಧಿಸುವವರೆಗೆ ಈ ಜಾತಿಗಳು ಹೀಗೇ ಟಿಸಿಲೊಡೆಯುತ್ತಲೇ ಇರುತ್ತವೆ. ಜಾತಿ ಇಂದು ಹಲವು ರೂಪಗಳಲ್ಲಿ ಆರ್ಥಿಕ ಸಂಘಟನೆ, ಶೈಕ್ಷಣಿಕ ಸಂಸ್ಥೆ ಮತ್ತು ರಾಜಕೀಯ ಪಕ್ಷಗಳಾಗಿ ಬಲಗೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಅಂತರ್ಜಾತೀಯ ವಿವಾಹವು ಕೇವಲ ವಿವಾಹವಾಗಿರದೆ ಸಮಾಜದಲ್ಲಿ ಕಂಡುಬರುವ ಜಾತಿಭೇದಗಳನ್ನು ಮೆಟ್ಟಿನಿಲ್ಲುವಂತಹ ಒಂದು ಸಮಾಜ ಸುಧಾರಣೆ ಎನ್ನುವ ಮನೋಭಾವವನ್ನು ಜನರಲ್ಲಿ ಮೂಡಿಸಬೇಕಿದೆ.

ಜಾತಿಗಳೇ ಒಂದಾಗದ ಸ್ಥಿತಿಯಲ್ಲಿ ಅಸ್ಪೃಶ್ಯರನ್ನು ಸ್ಪೃಶ್ಯರನ್ನಾಗಿ ಉಚ್ಚ ಜಾತಿಗಳವರು ಒಪ್ಪಿಕೊಳ್ಳುವುದು ಇನ್ನೂ ಎಷ್ಟೋ ದೂರದ ಮಾತು. ಅಸ್ಪೃಶ್ಯ ಗಂಡು, ಸ್ಪೃಶ್ಯ ಹೆಣ್ಣನ್ನು ವಿವಾಹವಾದಾಗ ಹೆಣ್ಣಿನ ಕಡೆಯವರು ಹೆಣ್ಣನ್ನು ಸಾಮಾಜಿಕವಾಗಿ ಬಹಿಷ್ಕರಿಸುವುದು ಸಾಮಾನ್ಯ. ಗಂಡಿನ ಕಡೆಯವರು ಹೆಣ್ಣನ್ನು ಕನಿಕರದಿಂದ ಒಪ್ಪಿಕೊಂಡರೂ, ಹೆಣ್ಣು ಗಂಡನ ಕುಟುಂಬದಿಂದ ದೂರವಿರಲು ಪ್ರಯತ್ನಿಸುತ್ತಾಳೆ. ಅವಳ ಕುಟುಂಬ ಅವಳನ್ನು ಪೂರ್ಣವಾಗಿ ಬಹಿಷ್ಕರಿಸಿಬಿಡುತ್ತದೆ. ಅವಳು ಮತ್ತೆ ಎಂದಿಗೂ ಸಾಮಾಜಿಕವಾಗಿ ಸ್ಪೃಶ್ಯಳು ಎನ್ನಿಸಿಕೊಳ್ಳುವುದಿಲ್ಲ. ಸ್ಪೃಶ್ಯ ಗಂಡು, ಅಸ್ಪೃಶ್ಯ ಹೆಣ್ಣನ್ನು ವಿವಾಹ ಮಾಡಿಕೊಂಡಾಗ ಗಂಡಿನ ಕಡೆಯವರು ಇಬ್ಬರನ್ನೂ ಬಹಿಷ್ಕರಿಸಿಬಿಡುತ್ತಾರೆ. ಹೆಣ್ಣಿನ ಕಡೆಯವರು ತುಸು ರಿಯಾಯಿತಿ ನೀಡಿ ಇಬ್ಬರನ್ನೂ ಮನೆಗೆ ಸೇರಿಸಿಕೊಂಡರೂ, ಗಂಡು ಅಸ್ಪೃಶ್ಯರ ಮನೆಯಲ್ಲಿ ಉಳಿದುಕೊಳ್ಳುವುದು ಸಾಧ್ಯವಾಗದು. ಅವರಿಗೆ ಹುಟ್ಟುವ ಮಕ್ಕಳು ಅಸ್ಪೃಶ್ಯರಾಗುತ್ತಾರೆ. ಸಾಮಾನ್ಯವಾಗಿ ಸ್ಪೃಶ್ಯರು ಮತ್ತು ಅಸ್ಪೃಶ್ಯರು ವಿವಾಹವಾಗುವುದೇ ಎರಡೂ ಕುಟುಂಬಗಳಿಗೆ ಅದು ಗೊತ್ತಿಲ್ಲದಿರುವ ಪರಿಸ್ಥಿತಿಯಲ್ಲಿ. ವಿವಾಹವಾಗುವುದಕ್ಕಿಂತ ಮುಂಚೆ ಅಥವಾ ವಿವಾಹವಾದ ನಂತರ ಗಂಡು–ಹೆಣ್ಣು ಬೇರೆ ಮನೆ ಮಾಡಿಕೊಳ್ಳುವ ಸ್ಥಿತಿಯನ್ನು ತಲುಪಿರುತ್ತಾರೆ. ಆ ಸ್ಥಿತಿ ಅವರಿಗೆ ಅನಿವಾರ್ಯವಾಗಿಬಿಡುತ್ತದೆ ಕೂಡ. ಇಬ್ಬರೂ ನಿರುದ್ಯೋಗಿಗಳಾದ ಪಕ್ಷದಲ್ಲಿ ಅವರ ವಿವಾಹ ಜೀವನ ಕಲ್ಲು ಮುಳ್ಳುಗಳಿಂದ ಪ್ರಾರಂಭವಾಗಿ ಬಿಡುತ್ತದೆ. ಒಟ್ಟಿನಲ್ಲಿ ಹಿಂದೂ ಸಮಾಜದ ಕಣ್ಣುಗಳಲ್ಲಿ ಅವರು ಅಪರಾಧಿಗಳು.

## ಅಧ್ಯಾಯ-14

**ನಮಗೆ ಆಧುನಿಕ ಮತ್ತು ಒಗ್ಗಟ್ಟಾದ ಭಾರತ ಬೇಕೆಂದರೆ ಎಲ್ಲಾ ಧಾರ್ಮಿಕ ಗ್ರಂಥಗಳ ಸಾರ್ವಭೌಮತ್ವ ಮುಗಿಯಬೇಕು**

**-ಅಂಬೇಡ್ಕರ್.**

# ಮೀಸಲಾತಿ

ಮೀಸಲಾತಿ ಎಂದಾಕ್ಷಣ ಎಲ್ಲಾ ಕಾಲಕ್ಕೂ ಎಲ್ಲಾ ಜನರಲ್ಲೂ ಪರ-ವಿರೋಧವಾದ ವಿಚಿತ್ರ ಭಾವನೆಗಳು ಎದುರುಬದುರಾಗಿ ಗರಿಗೆದರಿ ನಿಲ್ಲುತ್ತವೆ. ನಿಜಕ್ಕೂ ಮೀಸಲಾತಿ ಈ ಒಡಕು ಧರ್ಮದ ಸೋರುವ ಮಡಕೆಯಲ್ಲಿರುವ ಗಬ್ಬುವಾಸನೆಯೇ ಹೊರತು ಬೇರೆ ಏನೂ ಅಲ್ಲ. ಹಿಂದೂ ಧರ್ಮದಲ್ಲಿ ಅಸ್ಪೃಶ್ಯರಾಗಿ ಹುಟ್ಟುವುದಕ್ಕಿಂತ ಕೆಟ್ಟದು ಈ ಪ್ರಪಂಚದಲ್ಲಿ ಇನ್ನ್ಯಾವುದೂ ಇಲ್ಲ. ಯಾರೂ ಅಸ್ಪೃಶ್ಯರಾಗಿ ಹುಟ್ಟಿ ಮೀಸಲಾತಿಯ ಮೇಲೆ ಕೆಲಸ ಗಿಟ್ಟಿಸಬೇಕೆಂಬುದಾಗಿ ಯೋಚಿಸಲಾರರು. ಸ್ವಾಭಿಮಾನದ ಸಂಕೇತವಾಗಿದ್ದ ಅಂಬೇಡ್ಕರ್ ಅವರು ಅಸ್ಪೃಶ್ಯರಾಗಿ ಸಾಯಲು ಇಷ್ಟಪಡಲಿಲ್ಲ.

ಅಸ್ಪೃಶ್ಯರು ಹಿಂದೂ ಸಮಾಜದಲ್ಲಿ ನೀರು, ಗಾಳಿ ಸೇವನೆಯಿಂದ ಹಿಡಿದು ಕಚೇರಿಯಲ್ಲಿ ಕೆಲಸ ಮಾಡುವಾಗ, ಬಾಡಿಗೆ ಮನೆ ಕೇಳುವಾಗ, ಕಲ್ಲು ಮೂರ್ತಿಗಳಿರುವ ದೇವಾಲಯಗಳಿಗೆ ಪ್ರವೇಶ ಮಾಡುವಾಗ ಕೈಕಟ್ಟಿ ದೂರ ನಿಲ್ಲುವುದರ ಜೊತೆಗೆ ನಿಂದನೆ, ಅವಹೇಳನಗಳನ್ನು ಕ್ಷಣಕ್ಷಣಕ್ಕೂ ಎದುರಿಸಬೇಕಾಗುತ್ತದೆ. ಅಂತಹ ಒಂದು ಬದುಕು ಯಾವ ಮನುಷ್ಯನಿಗೂ ಬೇಕಾಗಿಲ್ಲ. ಇದೆಲ್ಲದರ ಜೊತೆಗೆ ಅರೆ ಹೊಟ್ಟೆಯಲ್ಲಿ ಜೀವನ ನೂಕುತ್ತಾ ಊರಿನ ಎಲ್ಲಾ ಹೊಲಸು ಕೆಲಸಗಳನ್ನೂ ತಾವೇ ಮೈಮೇಲೆ ಹಾಕಿಕೊಂಡಂತೆ ದೇಶ, ಧರ್ಮದ ಹೊಲಸನ್ನೆಲ್ಲಾ ಸ್ವಚ್ಛ ಮಾಡುತ್ತಾ ಪಾಯಿಖಾನೆಗಳಲ್ಲಿ ಹರಿಶ್ಚಂದ್ರರಂತೆ ದುಡಿಯುವ ಕೆಲಸವಾದರೂ ಯಾರಿಗೆ ಬೇಕು?

ಅಂಬೇಡ್ಕರ್ 'ಮೀಸಲಾತಿ ಕೇವಲ ತಾತ್ಕಾಲಿಕ, ನಮ್ಮ ಜನ ಎಲ್ಲರೂ ಸಾಮಾಜಿಕವಾಗಿ ಆರ್ಥಿಕವಾಗಿ ಒಂದು ಹಂತ ತಲುಪಿ, ಅನ್ಯ ಜನರು ನಮ್ಮನ್ನೂ ಮನುಷ್ಯರೆಂದು ತಿಳಿದಾಗ ಮೀಸಲಾತಿ ನಿಲ್ಲಬೇಕು' ಎಂದು ಒತ್ತಿ ಹೇಳಿದ್ದಾರೆ. ಆದರೆ ದಿನ ದಿನಕ್ಕೂ ಜಾತಿ ಎಂಬ ಭೂತ ದೈತ್ಯಾಕಾರವಾಗಿ ಬೆಳೆಯುತ್ತಿರುವುದನ್ನು ನೋಡುತ್ತಿದ್ದೇವೆ. 21ನೇ ಶತಮಾನದಲ್ಲೂ ಪರಿಸ್ಥಿತಿ ಇನ್ನಷ್ಟು ನಾಚಿಕೆಗೇಡು, ನಗೆಪಾಟಲಾಗತೊಡಗಿದೆ. ಈಗ ಎಲ್ಲರೂ ಮೀಸಲಾತಿ ಕೇಳುವವರೇ. ಅದೂ ಸಾಲದೆಂಬಂತೆ ಖೋಟಾ ಜಾತಿ ಪತ್ರಗಳನ್ನು ಸೃಷ್ಟಿಸಿ ಮೀಸಲಾತಿಯ ಕೆಳಗೆ ಉದ್ಯೋಗಗಳಿಗೆ ಸೇರಿಕೊಳ್ಳುತ್ತಿದ್ದಾರೆ. ಇಷ್ಟಕ್ಕೂ ಕೇಂದ್ರ ಸರ್ಕಾರ ಮತ್ತು ರಾಜ್ಯ

ಸರ್ಕಾರಗಳು ದಶಕಗಳಿಂದ ಬರೀ ಮಾತುಗಳಲ್ಲೆ ಸಾವಿರಾರು ಉದ್ಯೋಗಗಳನ್ನು ನೀಡುತ್ತಿವೆ. ಈಗಂತೂ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣ ಎಂಬ ಭೂತಗಳು ಸಮಸ್ತವನ್ನೂ ನುಂಗಿ ನೀರು ಕುಡಿಯುತ್ತಿವೆ. ಯಾವುದೇ ಸರಕಾರವಾಗಲಿ ಅದಕ್ಕೆ ನಿಜವಾದ ಸಾಮಾಜಿಕ ಪ್ರಜ್ಞೆ, ಕಳಕಳಿ ಇರಬೇಕು. ಇಲ್ಲದಿದ್ದರೆ ಎದೆಗಾರಿಕೆಯಾದರೂ ಇರಬೇಕು. ಎರಡೂ ಇಲ್ಲದಿದ್ದರೆ ಬರಿ ಸೋಗಲಾಡಿತನ ಮಾತ್ರ ಪ್ರದರ್ಶಿಸಬೇಕಾಗುತ್ತದೆ.

ಒಂದೆರಡು ಹುದ್ದೆಗಳಿಗೆ ಪತ್ರಿಕೆಗಳಲ್ಲಿ ದೊಡ್ಡ ದೊಡ್ಡದಾಗಿ ಸ್ಪೆಷಲ್ ಡ್ರೈವ್ ಎಂದು ಪ್ರಕಟಿಸಿ ಭಾಗ್ಯಜ್ಯೋತಿ, ಆಶ್ರಯ ಎನ್ನುವ ಯೋಜನೆಗಳನ್ನು ಅವರೇ ಸೃಷ್ಟಿಸಿ, ಅವರೇ ನುಂಗಿ ನೀರು ಕುಡಿಯುತ್ತಿದ್ದಾರೆ. ಕೂಗಾಡಿದವರನ್ನು ಸ್ವಲ್ಪ ಹೊತ್ತು ಕುರ್ಚಿಯಲ್ಲಿ ಕೂರಿಸಿ, ಸಾಂತ್ವನ ನೀಡಿ ಎಲ್ಲರನ್ನೂ ದಿಕ್ಕು ತಪ್ಪಿಸುತ್ತಾರೆ. ಜಾತಿ, ಮತಗಳನ್ನು ಮರೆತು ಅಸ್ಪೃಶ್ಯತೆಯನ್ನು ತೊಡೆದುಹಾಕಿ ನಾವೆಲ್ಲರೂ ಒಂದೇ ಎಂದು ಸಾರಿ ತೋರಿಸುವುದಕ್ಕೆ ಈ ಸಮಾಜದಿಂದ ಸಾಧ್ಯವಾಗದು. ಈ ದೇಶದ ಉಚ್ಚ ಜಾತಿಯ ಜನರೂ ಅಂತಹ ಒಂದು ಸಮಾಜ ಸೃಷ್ಟಿಸಲಾರರು. ಅದಕ್ಕೇ ಬಾಬು ಜಗಜೀವನರಾಂ ಅಸ್ಪೃಶ್ಯತೆ ಇರುವವರೆಗೆ ಮೀಸಲಾತಿ ಇರಲೇಬೇಕು ಎಂದದ್ದು. ಜನರ ಮುಂದಾಳುಗಳು ಎನಿಸಿಕೊಳ್ಳುವ ರಾಜಕಾರಣಿಗಳೆಲ್ಲ ತಮ್ಮ ತಮ್ಮ ಜನಾಂಗಗಳನ್ನು ಮೀಸಲಾತಿಯ ಪಟ್ಟಿಯಲ್ಲಿ ಸೇರಿಸುತ್ತಾ ಹೋಗುತ್ತಿದ್ದಾರೆ.

ನಿಜವಾಗಿಯೂ ಮೀಸಲಾತಿ ದೊರಕಬೇಕಾಗಿರುವುದು ಅಸ್ಪೃಶ್ಯರಿಗೆ ಮಾತ್ರ. ಈ ಸಮಾಜ ಸೃಷ್ಟಿಸಿದ ಅತ್ಯಂತ ಹೀನವಾದ ಮಲ ಹೊರುವಂತಹ ಕೆಲಸಗಳನ್ನು ಮಾಡುತ್ತಿರುವವರು ಮಾತ್ರ ಮೀಸಲಾತಿಗೆ ಅರ್ಹರು. ಎಲ್.ಜಿ. ಹಾವನೂರ್ ವರದಿಯು ಇದನ್ನೇ ಒತ್ತಿಹೇಳಿದೆ.

ಅವಮಾನಿತ ಜನ, ಕಡುಬಡವರು ಎಲ್ಲಾ ಜಾತಿಗಳಲ್ಲೂ ಇದ್ದಾರೆ. ಅವರಿಗೂ ಮೀಸಲಾತಿ ಸಿಗಬೇಕು ಎನ್ನುವ ಕಳಕಳಿ ರಾಜಕಾರಣಿಗಳಿಗೆ ಇದ್ದಲ್ಲಿ ಕಟ್ಟುನಿಟ್ಟಿನಿಂದ ಎಲ್ಲಾ ಜಾತಿಗಳ ಕಡುಬಡವರನ್ನೇ ಹುಡುಕಿ ಆರ್ಥಿಕ ಆಧಾರದ ಮೇಲೆ ಮಾತ್ರವೇ ಮೀಸಲಾತಿ ನೀಡಬೇಕು. ಅದು ಸಾಧ್ಯವಾಗದ ಪಕ್ಷದಲ್ಲಿ ಎಲ್ಲಾ ಜಾತಿ ಜನಾಂಗಗಳ ಜನಸಂಖ್ಯೆಗೆ ಅನುಗುಣವಾಗಿ, ಅಂದರೆ ಬ್ರಾಹ್ಮಣರಿಂದ ಹಿಡಿದು ಕಟ್ಟಕಡೆಯ ಜಾತಿಯವರೆಗೆ ಶೇಕಡಾವಾರು ಮೀಸಲಾತಿ ನೀಡಬೇಕು. ಅಂಬೇಡ್ಕರ್ ಈ ರೀತಿಯ ಮೀಸಲಾತಿಯನ್ನು ಅನುಷ್ಠಾನಕ್ಕೆ ತರಬೇಕೆಂದು ಮೊದಲಿನಿಂದಲೂ ಒತ್ತಾಯಿಸಿದ್ದರು. ಆಗ ಎಲ್ಲರಿಗೂ ಮೀಸಲಾತಿ ದೊರಕಿದಂತಾಗುತ್ತದೆ. ಇಲ್ಲವೆಂದರೆ ಸಾವಿರಾರು ವರುಷಗಳಿಂದ ಮುಂದುವರಿದುಕೊಂಡು ಬಂದಿರುವ ಅನ್ಯಾಯ, ಎಂದಿನಂತೆ ಮುಂದುವರಿಯುತ್ತದೆ.

ಮೀಸಲಾತಿಯ ಆಧಾರದ ಮೇಲೆ ಹುದ್ದೆಗಳನ್ನು ನೀಡಿದರೆ ಕೆಲಸದ ಗುಣಮಟ್ಟ ಹಾಳಾಗುತ್ತದೆ ಎನ್ನುವ ಜನರು ಕಳೆದ 71 ವರ್ಷಗಳಲ್ಲಿ ಶೇ. 96ರಷ್ಟು ಹುದ್ದೆಗಳಲ್ಲಿ ಸೇರಿಕೊಂಡು ದೇಶವನ್ನು ಎಲ್ಲಿಗೆ ಕೊಂಡೊಯ್ದಿದ್ದಾರೆ? ಹಲವು ಶತಮಾನಗಳ ಕಾಲ ಆಳ್ವಿಕೆ ನಡೆಸಿದ್ದವರು ಉಚ್ಚವರ್ಣದವರೇ ಅಲ್ಲವೇ? ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರ್ಪಡೆಯಾಗಿರುವ ಯಾವುದೇ ಜನಾಂಗವಾಗಲಿ ಅದಕ್ಕೆ ಇರಬೇಕಾದ ಪ್ರಧಾನ

ಮಾನದಂಡ ಅಸ್ಪೃಶ್ಯತೆಯೇ ಆಗಬೇಕು. ಆದರೆ ಸರ್ಕಾರ ಹಲವಾರು ಅಸ್ಪೃಶ್ಯೇತರ ಜಾತಿಗಳನ್ನು ಸಹ ಕಾಲಕಾಲಕ್ಕೆ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸುತ್ತಾ ಬಂದಿದೆ. ಇದರಿಂದ ನಿಜವಾದ ಅಸ್ಪೃಶ್ಯರಿಗೆ ಭಾರೀ ಅನ್ಯಾಯವಾಗುತ್ತಿದ್ದು ಇದನ್ನು ಅತ್ಯಗತ್ಯವಾಗಿ ಮಾರ್ಪಡಿಸಬೇಕಾಗಿದೆ. ದಕ್ಷತೆ ಅಥವಾ ಕಾರ್ಯ ಸಾಮರ್ಥ್ಯದ ಬಗ್ಗೆ ಮಾತನಾಡುವ ಮೇಲ್ವರ್ಗಗಳ ನ್ಯಾಯಾಧೀಶರುಗಳು ಕಳೆದ 71 ವರ್ಷಗಳಲ್ಲಿ ಎಷ್ಟು ದಕ್ಷತೆಯಿಂದ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ ಎನ್ನುವುದಕ್ಕೆ ಈ ಅಂಕಿ ಅಂಶಗಳೆ ಸಾಕ್ಷಿಯಾಗಿವೆ:

1. ಕಳೆದ 71 ವರ್ಷಗಳಿಂದಲೂ ಭೂಸುಧಾರಣೆ ತಿದ್ದುಪಡಿಯ ಬಗ್ಗೆ ಯಾವುದೇ ತೀರ್ಮಾನ ತೆಗೆದುಕೊಳ್ಳದೆ ಇರುವುದರಿಂದ ಸಂಬಂಧಪಟ್ಟ ಕಡತಗಳು ಧೂಳು ಹಿಡಿದು ಕುಳಿತಿವೆ. ಆದರೆ ಎಲ್ಲಾ ರಾಜ್ಯಗಳಲ್ಲೂ SEZ ಹೆಸರಿನಲ್ಲಿ ಹೆದ್ದಾರಿಗಳು, ಅಣೆಕಟ್ಟುಗಳು, 'ಸ್ಮಾರ್ಟ್ ಸಿಟಿ'ಗಳ ಹೆಸರಿನಲ್ಲಿ ರೈತರ ಭೂಮಿಯನ್ನು ಸರಕಾರಗಳು ವಶಪಡಿಸಿಕೊಳ್ಳುತ್ತಿವೆ. 2014ರಲ್ಲಿ ಈ ಕಾಯಿದೆಯನ್ನು ತರಲಾಯಿತು. ಆದರೆ ವಿರೋಧ ರಾಜಕೀಯ ಪಕ್ಷಗಳು ಮತ್ತು ರೈತರ ಪ್ರತಿಭಟನೆಯಿಂದ ತಾತ್ಕಾಲಿಕವಾಗಿ ಈ ಕಾನೂನನ್ನು ತಡೆಹಿಡಿಯಲಾಗಿದೆ.
2. ಮೂರು ಕೋಟಿಗಿಂತಲೂ ಹೆಚ್ಚು ವ್ಯಾಜ್ಯಗಳು ವಿವಿಧ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಹಾಗೇ ಕುಳಿತುಕೊಂಡಿವೆ.
3. 50,000 ಕೋಟಿ ರೂಪಾಯಿಗಳ ತೆರಿಗೆ ವ್ಯಾಜ್ಯಗಳು ಇತ್ಯರ್ಥವಾಗದೆ ಹಾಗೇ ಇವೆ.
4. ಕ್ರಿಮಿನಲ್ ವ್ಯಾಜ್ಯಗಳಲ್ಲಿ ಶೇಕಡ 19.70 ವ್ಯಾಜ್ಯಗಳು ಮಾತ್ರ ಇತ್ಯರ್ಥವಾಗಿದ್ದು ಉಳಿದ ಶೇಕಡ 80.30 ವ್ಯಾಜ್ಯಗಳು ಹಾಗೆಯೇ ಉಳಿದಿವೆ.
5. ಐ.ಪಿ.ಸಿ. ಕೆಳಗೆ ಬರುವ 53 ಲಕ್ಷಗಳಿಗಿಂತಲೂ ಹೆಚ್ಚು ಅಪರಾಧಗಳು ಇತ್ಯರ್ಥವಾಗದೆ ಹಾಗೇ ಉಳಿದಿವೆ.
6. ನೂರಕ್ಕೆ 85ರಷ್ಟು ಬರ್ಬರ ಕೃತ್ಯ ಅಪರಾಧಗಳು ಇತ್ಯರ್ಥವಾಗದೆ ನ್ಯಾಯಾಲಯಗಳಲ್ಲಿ ಕೊಳೆಯುತ್ತಿವೆ.
7. ದೇಶದಾದ್ಯಂತ 1.13 ಕೋಟಿ ಜನರು ಕ್ರಿಮಿನಲ್ ನ್ಯಾಯಾಲಯಗಳಲ್ಲಿ ವಿಚಾರಣೆಗಾಗಿ ಬಕಪಕ್ಷಿಗಳಂತೆ ಕಾದು ಕುಳಿತಿದ್ದಾರೆ.
8. ಸುಳ್ಳು ಜಾತಿ ಪ್ರಮಾಣ ಪತ್ರಗಳನ್ನು ಕೊಟ್ಟು ಮೀಸಲಾತಿಯ ಆಧಾರದ ಮೇಲೆ ಸೇರಿಕೊಂಡ ಉದ್ಯೋಗಿಗಳ ಸಂಖ್ಯೆ ಅಗಾಧವಾಗಿದ್ದರೂ ಯಾರೂ ತಲೆಕೆಡಿಸಿಕೊಳ್ಳುತ್ತಿಲ್ಲ.

ಆದರೆ ನ್ಯಾಯಾಲಯಗಳಲ್ಲಿ ನಡೆಯುತ್ತಿರುವ ಈ ಅಪರಾಧಗಳನ್ನು ತಡೆಗಟ್ಟಲು ನಮ್ಮ ದೇಶದ ಕಾನೂನಿನಲ್ಲಿ ಯಾವ ಪರಿಚ್ಛೇದಗಳೂ ಇಲ್ಲ. ಇತ್ತೀಚೆಗೆ ಕರ್ನಾಟಕ ರಾಜ್ಯದ ಲೋಕಾಯುಕ್ತರೆ ಲಕ್ಷಾಂತರ ರೂಪಾಯಿಗಳ ಲಂಚದಲ್ಲಿ ಸಿಲುಕಿಕೊಂಡರು. ಇನ್ನು ಭ್ರಷ್ಟಾಚಾರ ತೊಲಗಿಸುವ ದಾರಿಗಳಾದರೂ ಯಾವುವು?

## ವಿದ್ಯಾಭ್ಯಾಸ ಮತ್ತು ನೌಕರಿ

ಈಗ ಎಲ್ಲರ ದೃಷ್ಟಿಯೂ ಮೆಡಿಕಲ್, ಇಂಜಿನಿಯರಿಂಗ್ ಮತ್ತು ಉನ್ನತ ವಿಶೇಷ

ತಾಂತ್ರಿಕ ವಿದ್ಯಾಭ್ಯಾಸದತ್ತ ಕೇಂದ್ರೀಕೃತವಾಗಿದೆ. ಸಾಮಾನ್ಯ ಕೋಟಾದಲ್ಲಿ ಶೇಕಡಾವಾರು 70ರಿಂದ 95ರ ಅಂಕಗಳನ್ನು ಗಳಿಸಿರುವ ವಿದ್ಯಾರ್ಥಿಗಳಿಗೆ ಮೆಡಿಕಲ್, ಇಂಜಿನಿಯರಿಂಗ್ ಸೀಟುಗಳು ದೊರಕಿದರೆ, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳ ಕೋಟಾದಲ್ಲಿ ಶೇಕಡಾವಾರು ಸರಾಸರಿ 50ರಿಂದ 85ರ ಅಂಕಗಳ ಹತ್ತಿರ ನಿಲ್ಲುತ್ತದೆ. ಕೆಲವು ವಿಷಯಗಳಲ್ಲಿ ಕೇವಲ ಎರಡು ಮೂರು ಅಂಕಿಗಳ ಅಂತರವಿರುತ್ತದೆ. ಇನ್ನು ಐಐಎಂ, ಐಐಟಿ ಕಾಲೇಜುಗಳ ಪ್ರವೇಶದಲ್ಲಿ ಕೇವಲ ತೀರಾ ಹತ್ತಿರದ ಪರ್ಸಂಟೈಲ್ ಅಂತರದಲ್ಲಿ ನಿಲ್ಲುತ್ತಿವೆ. ಅಂದರೆ ಈಗ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಏನೇನು ಅಂತರ ಉಳಿದಿಲ್ಲ ಎನ್ನಲೂಬಹುದು. ಇದಕ್ಕೆ ಆಧುನಿಕ ಭಾಷೆಯಲ್ಲಿ 'ಕಟ್ ಥ್ರೋಟ್' ಸ್ಪರ್ಧೆ ಎನ್ನುತ್ತಾರೆ. ಇಷ್ಟು ದೊಡ್ಡ ದೇಶದಲ್ಲಿ, ಇಷ್ಟು ದೊಡ್ಡ ಜನಸಂಖ್ಯೆಯಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಕಡಿಮೆ ಅವಕಾಶಗಳು ಇರುವಾಗ ಸ್ಪರ್ಧೆ ಅಗಾಧವಾಗಿರುವುದು ಸಾಮಾನ್ಯ. ಈಗ ಅಸ್ಪೃಶ್ಯರಲ್ಲೂ ಜ್ಞಾನ ಹೆಚ್ಚಿದೆ ಎಂದು ಕೆಲವರು ವಾದಿಸುತ್ತಾರೆ. ಸವಲತ್ತುಗಳು ಸಿಕ್ಕರೆ ಜ್ಞಾನ ತನಗೆ ತಾನೇ ಬೆಳೆಯುತ್ತದೆ ಎನ್ನುವುದಕ್ಕೆ ಇದು ಒಂದು ಉದಾಹರಣೆ.

ಪಿ.ಯು.ಸಿ.ಯಲ್ಲಿ ಶೇಕಡ 60ಕ್ಕಿಂತ ಹೆಚ್ಚು ಅಂಕಗಳನ್ನು ಗಳಿಸುತ್ತಿರುವವರು ಹೆಚ್ಚಾಗಿ ನಗರಗಳಲ್ಲಿ ವಾಸಿಸುವ ವಿದ್ಯಾರ್ಥಿಗಳಾಗಿದ್ದು ಅವರ ತಂದೆ ತಾಯಿಯರು ಮತ್ತು ಅವರ ಕುಟುಂಬದವರು ಸರಕಾರಿ ಮತ್ತು ರಾಜಕೀಯದಲ್ಲಿ ಆರ್ಥಿಕ ಸೌಲಭ್ಯಗಳನ್ನು ಪಡೆದವರಾಗಿರುತ್ತಾರೆ. ಆದರೆ ಹಳ್ಳಿಯಲ್ಲಿರುವ ದಲಿತ ವಿದ್ಯಾರ್ಥಿಗಳು ಯಾವ ಸವಲತ್ತುಗಳೂ ಇಲ್ಲದೆ ಸರಕಾರಿ ಶಾಲೆಗಳಲ್ಲಿ ಗುಣಮಟ್ಟವಿಲ್ಲದ ವಿದ್ಯಾಭ್ಯಾಸದಿಂದ ಮುರುಟಿಹೋಗುತ್ತಿದ್ದಾರೆ. ಈ ಮಾತುಗಳು ಎಲ್ಲಾ ಜಾತಿಯ ಬಡ ವಿದ್ಯಾರ್ಥಿಗಳಿಗೂ ಅನ್ವಯಿಸುತ್ತದೆ. ದೇಶದ ಒಟ್ಟು ಜನಸಂಖ್ಯೆ ಸುಮಾರು 120 ಕೋಟಿಯಾದರೆ ಅದರಲ್ಲಿ ಅಸ್ಪೃಶ್ಯರ ಸಂಖ್ಯೆ 18 ಕೋಟಿ. ಈ 18 ಕೋಟಿಯಲ್ಲಿ ಅಕ್ಷರಸ್ಥರ ಸಂಖ್ಯೆ ಶೇಕಡ 4ರಿಂದ 5 ಎನ್ನುತ್ತವೆ ಅಂಕಿ ಅಂಶಗಳು. ನಮ್ಮ ಘನ ಸರ್ಕಾರದ ಪ್ರಕಾರ ಅಕ್ಷರಸ್ಥರೆಂದರೆ ಕೇವಲ ಮೂರೋ ನಾಲಕ್ಕೋ ಅಕ್ಷರಗಳಿರುವ ತನ್ನ ಹೆಸರಿನ ಸಹಿ ಹಾಕಿದರೆ ಸಾಕು; ಅವರನ್ನು ಅಕ್ಷರಸ್ಥರೆಂದು ಘೋಷಿಸಿಬಿಡುತ್ತದೆ. ಆದರೆ ಇವರ್ಯಾರಿಗೂ ತಮ್ಮ ತಾಯಿ ಭಾಷೆಯಲ್ಲಿ ಸರಿಯಾಗಿ ಹೆಸರು ಬರೆಯುವುದೂ ಸಹ ಬರುವುದಿಲ್ಲ. ಕನಿಷ್ಠ ಏಳನೇ ತರಗತಿ ಪಾಸು ಮಾಡಿದವರನ್ನು ಮಾತ್ರ ಅಕ್ಷರಸ್ಥರೆಂದು ಕರೆಯಬೇಕೆನ್ನುವುದು ಕೆಲವು ಪಂಡಿತರ ವಾದ. ಅದ್ಯಾವುದನ್ನು ಸರಕಾರ ಕಿವಿಗೆ ಹಾಕಿಕೊಳ್ಳುತ್ತಿಲ್ಲ.

ಮೀಸಲಾತಿಯಲ್ಲಿ ಬರುವ ವಿದ್ಯಾರ್ಥಿಗಳನ್ನು ಉನ್ನತ ಸ್ಥಾನದ ಹುದ್ದೆಗಳಿಗೆ ಸೇರಿಸಿಕೊಂಡರೆ ಕೆಲಸದ ಗುಣಮಟ್ಟ ಹಾಳಾಗುತ್ತದೆ ಎನ್ನುವುದು ಮೇಲ್ಜಾತಿಗಳ ಹಳೆ ಸ್ಲೋಗನ್ ಆಗಿದೆ. ಇದಕ್ಕೆ ಉತ್ತರವಾಗಿ ಮೊದಲೇ ತಿಳಿಸಿರುವಂತೆ ಮೆಡಿಕಲ್ ಮತ್ತು ಎಂಜಿನಿಯರಿಂಗ್ ಸೀಟುಗಳ ವಿಂಗಡಣೆಯಲ್ಲಿ ಜನರಲ್ ಮತ್ತು ಪರಿಶಿಷ್ಟ ಜಾತಿ, ಪಂಗಡಗಳ ಮಧ್ಯೆ ಈಗ ಉಳಿದಿರುವುದು ಸರಾಸರಿ ಕೇವಲ ಎರಡೋ ಮೂರೋ ಅಂಕಗಳ ವ್ಯತ್ಯಾಸ ಮಾತ್ರ. ಇದರಿಂದ ಮೇಲ್ಜಾತಿಯವರು, ಪರಿಶಿಷ್ಟ ಜಾತಿ, ವರ್ಗಗಳ ಜನರು ಉನ್ನತ ಸ್ಥಾನಗಳಲ್ಲಿ ಕೆಲಸಕ್ಕೆ ಸೇರಿಕೊಳ್ಳುವುದರಿಂದ ಕೆಲಸದ ಗುಣಮಟ್ಟ ಹಾಳಾಗುತ್ತದೆ ಎಂಬುದಕ್ಕೆ ಈಗ ಯಾವ ಕಾರಣಗಳೂ ಉಳಿದಿಲ್ಲ. ಅದೆಲ್ಲ ಹಳಸಲು

ಮಾತುಗಳು. ಐಟಿ / ಬಿಟಿ ಜ್ಞಾನಿಗಳ ಪ್ರಕಾರ ಇಂಜಿನಿಯರಿಂಗ್‌ನಲ್ಲಿ ಡಿಗ್ರಿ ಪಡೆಯುವವರಲ್ಲಿ ಶೇಕಡಾ 80% ವಿದ್ಯಾರ್ಥಿಗಳು ಕಂಪನಿಗಳಲ್ಲಿ ಕೆಲಸ ಮಾಡುವುದಕ್ಕೆ ನಾಲಾಯಕ್ಕು ಎನ್ನುತ್ತಾರೆ.

ಕರ್ನಾಟಕದಾದ್ಯಂತ ನಾಯಿಕೊಡೆಗಳಂತೆ ಹಬ್ಬಿರುವ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜುಗಳು ಕೇವಲ 40 ಅಂಕಗಳನ್ನು ಪಡೆದಿರುವ ಧನಿಕ ವಿದ್ಯಾರ್ಥಿಗಳಿಗೆ ಇಪ್ಪತ್ತು ಮೂವತ್ತು ಲಕ್ಷ ರೂಪಾಯಿಗಳಿಗೆ ಸೀಟುಗಳನ್ನು ಹಂಚುತ್ತವೆ. ಇನ್ನೂ ಐದೋ ಹತ್ತೋ ಲಕ್ಷ ರೂಪಾಯಿಗಳನ್ನು ಕಕ್ಕಿದರೆ ಡಿಗ್ರಿ ಸರ್ಟಿಫಿಕೇಟ್‌ಗಳನ್ನು ಕೊಡುತ್ತಾರೆ. ಈ ವಿಷಯ ಯಾಕೆ ಯಾರಿಗೂ ಕಾಣಿಸುತ್ತಿಲ್ಲ? ಇಂತಹ ವಿದ್ಯಾರ್ಥಿಗಳಿಂದ ಕೆಲಸದ ಗುಣಮಟ್ಟ ಹೆಚ್ಚುತ್ತದೆಯೇ? ನ್ಯಾಯಾಲಯಗಳು ಇದನ್ನು ಯಾಕೆ ತಡೆಯುತ್ತಿಲ್ಲ? ಧನಿಕ ವಿದ್ಯಾರ್ಥಿಗಳೆಲ್ಲ ಉಚ್ಚಜಾತಿಯವರು ಎನ್ನುವುದು ಇದಕ್ಕೆ ಕಾರಣವೇ? ಇದು ಬರೀ ಕರ್ನಾಟಕವೇ ಅಲ್ಲ ದೇಶದಾದ್ಯಂತ ನಡೆಯುತ್ತಿದೆ.

ಇದರ ಜೊತೆಗೆ ನಕಲಿ ಸರ್ಟಿಫಿಕೇಟ್‌ಗಳೊಂದಿಗೆ ಕೆಲಸ ಗಿಟ್ಟಿಸಿಕೊಳ್ಳುತ್ತಿರುವವರ ಸಂಖ್ಯೆಯೂ ಭಾರೀ ಇದೆ. ಒಂದು ವಿಷಾದದ ಸಂಗತಿ ಎಂದರೆ, ಹೊರ ರಾಜ್ಯಗಳಿಂದ ಕರ್ನಾಟಕಕ್ಕೆ ಬಂದು ಓದಿ, ಇಲ್ಲೇ ಕೆಲಸ ಗಿಟ್ಟಿಸಿಕೊಳ್ಳುವವರ ಸಂಖ್ಯೆ ಕನ್ನಡದವರಿಗಿಂತ ಎಷ್ಟೋ ಪಟ್ಟು ಹೆಚ್ಚು. ನಮ್ಮ ಜಲ, ನಮ್ಮ ನೆಲದಲ್ಲಿ ನಾವೇ ಪರಕೀಯರಾಗುತ್ತಿರುವುದು ತೀರಾ ಖೇದದ ಸಂಗತಿಯಾಗಿದೆ. ಇದೆಲ್ಲ ನಮ್ಮ ರಾಜಕಾರಣಿಗಳು, ಹಣವಂತರು ಸ್ಥಾಪಿಸಿರುವ ಕಾಲೇಜುಗಳ ಅವಾಂತರದಿಂದ. ಮಹಾರಾಷ್ಟ್ರದಲ್ಲಿ ಶಿವಸೇನೆಯವರಂತೆ, ಕರ್ನಾಟಕದಲ್ಲಿ ಕರ್ನಾಟಕ ರಕ್ಷಣಾವೇದಿಕೆಯವರು ಸ್ವಲ್ಪ ಗಲಿಬಿಲಿ ಎಬ್ಬಿಸಿ, ಕನ್ನಡ ನೆಲ, ಜಲ ಎಂದು ಊರು ಕೊಳ್ಳೆಯಾದ ಮೇಲೆ ಬಾಗಿಲು ಮುಚ್ಚಿದಂತಾಗಿದೆ ಕನ್ನಡ ಜನರ ಪಾಡು.

ಬೆಂಗಳೂರಿನಲ್ಲಿರುವ ಐಟಿ/ಬಿಟಿ ಕಂಪನಿಗಳಲ್ಲಿ ಕನ್ನಡಿಗರಿಗೆ ಯಾಕಾದರೂ ಒಂದಷ್ಟು ಮೀಸಲಾತಿ ಕೊಡಬಾರದು? ಬೆಂಗಳೂರಿನಲ್ಲಿರುವ ಎಲ್ಲಾ ಸೌಕರ್ಯ ಸವಲತ್ತುಗಳು ಇವರಿಗೆ ಬೇಕಾಗಿದೆ. ನೆಲ, ಜಲ, ಕಂದಾಯ ಉಚಿತ ಇತ್ಯಾದಿ. ಆದರೆ ಇಲ್ಲಿನವರಿಗೆ ಮೀಸಲಾತಿ ಮಾತ್ರ ಇಲ್ಲ. ಈ ಐಟಿ/ಬಿಟಿಗಳು ಒಳಗೊಳಗೆಯೇ ಈಗ ಅಗ್ರಹಾರಗಳಾಗಿ ಬೆಳೆಯುತ್ತಿರುವುದಾಗಿ ಅವುಗಳಲ್ಲಿ ಕೆಲಸ ಮಾಡುವವರೇ ಹೇಳುತ್ತಿದ್ದಾರೆ. ಒಂದೇ ಜಾತಿಯ ಹೆಣ್ಣು-ಗಂಡು ಮದುವೆ ಮಾಡಿಕೊಳ್ಳುವುದು. ಮಲಯಾಳಿಯೊಬ್ಬ ಉನ್ನತ ಸ್ಥಾನದಲ್ಲಿದ್ದರೆ ಮಲಯಾಳಿಗಳನ್ನು ಮಾತ್ರ ಕೆಲಸಕ್ಕೆ ಸೇರಿಸಿಕೊಳ್ಳುವುದು. ಇತರ ರಾಜ್ಯಗಳವರು ಅದನ್ನೇ ಮಾಡುತ್ತಿದ್ದಾರೆ. ಬಿಳಿ ಬಣ್ಣದವರೆಲ್ಲ ಗುಂಪುಗಳನ್ನು ಕಟ್ಟಿಕೊಳ್ಳುವುದು. ಒಟ್ಟಿನಲ್ಲಿ ಇಲ್ಲಿಯೂ ಒಂದು ರೀತಿಯ ಜಾತಿಯ ಕಾಲೋನಿಗಳು ಸೃಷ್ಟಿಯಾಗುತ್ತಿದ್ದು ಭಾರತದ ಅಭಿವೃದ್ಧಿ ಮುಂದಕ್ಕೆ ಸಾಗದೆ ಹಿಂದಿನ ವೈದಿಕ ಧರ್ಮದ ಕಡೆಗೆ ಹೆಜ್ಜೆಹಾಕುತ್ತಿದೆ.

ಕೆಲವರು ಇನ್ನೊಂದು ಪ್ರಶ್ನೆಯನ್ನು ಕೇಳುತ್ತಿದ್ದಾರೆ. ಅದೆಂದರೆ ಆರ್ಥಿಕವಾಗಿ ಮುಂದುವರಿದ ಅಸ್ಪೃಶ್ಯರೇ ಎಲ್ಲಾ ಕಡೆಯಲ್ಲೂ ಸರಕಾರದ ಎಲ್ಲಾ ಸವಲತ್ತುಗಳನ್ನು ಪಡೆಯುತ್ತಿದ್ದಾರೆ ಎನ್ನುವುದು. ಮಾದಿಗ (ಎಡಗೈ) ಗುಂಪು, ಹೊಲೆಯರು (ಬಲಗೈ) ಅಸ್ಪೃಶ್ಯರಲ್ಲಿ ಮುಂದುವರಿದವರಾಗಿದ್ದು ಹೆಚ್ಚು ಮೀಸಲಾತಿಯ ಭಾಗವನ್ನು ಕಬಳಿಸಿದ್ದಾರೆ ಎನ್ನುತ್ತಾರೆ. ಈಗಾಗಲೆ ಅವರು ಆಂಧ್ರದಾದ್ಯಂತ ಮಾದಿಗ ದಂಡೋರ ಎನ್ನುವ

ಸಂಘವನ್ನು ಕಟ್ಟಿಕೊಂಡು ತಮಗೆ ಪ್ರತ್ಯೇಕವಾದ ಮೀಸಲಾತಿಯನ್ನು ಅನುಷ್ಠಾನಕ್ಕೆ ತರಬೇಕೆಂದು ಒತ್ತಾಯ ಮಾಡುತ್ತಿದ್ದಾರೆ. ಈ ಒತ್ತಾಯ ನಿಧಾನವಾಗಿ ಕರ್ನಾಟಕದಲ್ಲೂ ಕಾಣಿಸಿಕೊಂಡಿದೆ. ಇದಕ್ಕೆ ವಿರುದ್ಧವಾಗಿ ಆಂಧ್ರದಲ್ಲಿ ಇತ್ತೀಚೆಗೆ ಹೊಲೆಯರು ಸಹ ಪ್ರತಿರೋಧವನ್ನು ತೋರಿಸಿದ್ದಾರೆ. ಅವರ ವಿರೋಧವೆಂದರೆ ಮೀಸಲಾತಿಯನ್ನು ಪ್ರತ್ಯೇಕವಾಗಿ ವಿಭಾಗಿಸುವುದು ಬೇಡ ಎನ್ನುವುದು. ಇದರಿಂದ ಹೊಲೆಯರಿಗೆ ತಾತ್ಕಾಲಿಕವಾಗಿ ಸ್ವಲ್ಪಮಟ್ಟಿಗೆ ಲಾಭವಾದರೂ ಸಮಾಜದಲ್ಲಿ ಇನ್ನೊಂದು ಒಡಕು ಮೂಡುವುದು ಅಕ್ಷಮ್ಯ ಅಪರಾಧವಾಗುತ್ತದೆ. ಈಗಾಗಲೇ ಅವರ ಮಧ್ಯೆ ಸಾಮಾಜಿಕ ಭೇದ ಭಾವಗಳಿದ್ದರೂ ಸಂಘ ಸಂಸ್ಥೆಗಳು, ಮತ್ತಿತರ ವಿಷಯಗಳಲ್ಲಿ ಒಗ್ಗಟ್ಟಾಗಿದ್ದಾರೆ ಎನ್ನುವುದು ಸುಳ್ಳಲ್ಲ. ಇದರ ಮಧ್ಯೆ ಒಡಕು ಮೂಡಿಸಲು ಕಾಯುತ್ತಿರುವ ರಾಜಕಾರಣಿಗಳು ಮತ್ತು ಉಚ್ಚ ಜಾತಿಯವರ ಕೈವಾಡಗಳನ್ನು ಇವರು ಅರಿತುಕೊಳ್ಳುವುದು ಅತ್ಯಗತ್ಯವಾದ ಕೆಲಸವಾಗಿದೆ. ದೇಶವನ್ನು ಹೆಚ್ಚು ಕಾಲ ಆಳಿರುವ ಕಾಂಗ್ರೆಸ್ ಕೂಡ ಹೊಲೆಯ ಮತ್ತು ಮಾದಿಗರ ಮಧ್ಯೆ ಭೇದ ಭಾವಗಳನ್ನು ಸೃಷ್ಟಿಸಿದೆ ಎನ್ನುವುದನ್ನು ಇಲ್ಲಿ ಸ್ಮರಿಸಬಹುದು.

ಹೊಲೆಯ ಮತ್ತು ಮಾದಿಗರ ನಿಷ್ಕೃಷ್ಟ ಜನಸಂಖ್ಯೆಯ ಪ್ರಮಾಣ ಎಷ್ಟು ಎನ್ನುವುದು ನಿಖರವಾಗಿ ತಿಳಿದಿಲ್ಲವಾದರೂ ಮಾದಿಗರ ಸಂಖ್ಯೆಯೇ ಸ್ವಲ್ಪ ಹೆಚ್ಚು ಎನ್ನುವುದು ಕೆಲವು ಮಾಹಿತಿಗಳಿಂದ ತಿಳಿದುಬರುತ್ತದೆ. ಕೆಲವು ಪ್ರಾಂತ್ಯಗಳಲ್ಲಿ ಹೊಲೆಯರು, ಕೆಲವು ಪ್ರಾಂತಗಳಲ್ಲಿ ಮಾದಿಗರು ಹೆಚ್ಚಾಗಿ ಸರಕಾರಿ ಸವಲತ್ತುಗಳನ್ನು ಪಡೆದಿರಬಹುದು. ಆದರೆ ಹೊಲೆಯರು ಮತ್ತು ಮಾದಿಗರು ಬೇರೆ ಬೇರೆಯಾಗಿ ಮೀಸಲಾತಿಯನ್ನು ಪಡೆಯುವುದು ನನಗೆ ತಿಳಿದಂತೆ ಸರಿಯಾದ ನಿಲುವಲ್ಲ. ಅದಕ್ಕಿಂತ ಮುಖ್ಯವಾಗಿ ಈ ಇಬ್ಬರ ನಡುವೆ ತೂರಿಕೊಂಡು ಮೀಸಲಾತಿ ಪಡೆಯುತ್ತಿರುವ ಸ್ಪೃಶ್ಯರನ್ನು ತುರ್ತಾಗಿ ಪ್ರತ್ಯೇಕಿಸಬೇಕಿದೆ.

ಎಡಗೈ ಮತ್ತು ಬಲಗೈಗಳ ನಡುವೆ ಅಂಬೇಡ್ಕರರಿಗಿಂತ ಮುಂಚಿನಿಂದಲೂ ಭೇದಗಳಿವೆ. ಮಾದಿಗ ದಂಡೋರ ಸಭೆಗಳಲ್ಲಿ ಬಾಬು ಜಗಜೀವನರಾಂ ಅವರ ಭಾವಚಿತ್ರಗಳನ್ನು ಮಾತ್ರ ಪ್ರದರ್ಶಿಸುವುದನ್ನು ನೋಡಬಹುದಾಗಿದೆ. ಅಂಬೇಡ್ಕರ್ ತಮ್ಮ ನೇತಾರರಲ್ಲ ಎನ್ನುವುದು ಇದರ ಸೂಚನೆ. ಅಂಬೇಡ್ಕರ್ ಕೇವಲ ಬಲಗೈ ಅಸ್ಪೃಶ್ಯರ ನಾಯಕರೆಂದು ತಿಳಿದುಕೊಂಡಿರುವುದು ಎಡಗೈನವರ ಸಂಕುಚಿತ ಜ್ಞಾನವೆಂದೇ ಹೇಳಬೇಕು. ಅಂಬೇಡ್ಕರ್ ಕೇವಲ ಅಸ್ಪೃಶ್ಯರ ನಾಯಕರಲ್ಲ. ಇಡೀ ಮಾನವ ಜನಾಂಗದ ಆತ್ಮಗೌರವ ಹಾಗೂ ತುಳಿತಕ್ಕೊಳಪಟ್ಟವರ ಹೋರಾಟದ ಪ್ರತೀಕ ಎನ್ನುವ ವಿಷಯವನ್ನು ಪ್ರಪಂಚವೇ ಸಾರಿ ಹೇಳುತ್ತಿದೆ. ಅಂತಹ ಒಬ್ಬ ನಾಯಕನನ್ನು ತಮ್ಮ ನಾಯಕನಲ್ಲ ಎನ್ನುವುದು ತಮ್ಮನ್ನು ತಾವೇ ಅಪಮಾನಿಸಿಕೊಳ್ಳುವಂತಹ ವಿಷಯವಾಗಿದೆ.

ಹೊಲೆಯ ಮಾದಿಗರಲ್ಲಿ ಇರುವ ಬಿರುಕು ಮುಂದಿನ ದಿನಗಳಲ್ಲಿ ಭಾರಿ ಬೆಲೆಯನ್ನು ತೆರಬೇಕಾಗುತ್ತದೆ. ಇದರ ಬಗ್ಗೆ ಅಂಬೇಡ್ಕರ್‌ವಾದಿ ಚಿಂತನೆಯುಳ್ಳ ಬುದ್ಧಿಜೀವಿಗಳು ಕೂಡ ತಟಸ್ಥರಾಗಿರುವುದು ಅವರಿಗೆ ಶೋಭೆ ತರುವ ವಿಷಯವಲ್ಲ. ಒಂದು ವೇಳೆ ಸರಕಾರ ಹೊಲೆಯ–ಮಾದಿಗರ ನಡುವಿನ ಮೀಸಲಾತಿಯನ್ನು ಜನಸಂಖ್ಯೆಯ ಆಧಾರದಿಂದ ನೀಡಲು ಆಂಧ್ರಪ್ರದೇಶದಲ್ಲಿ ಯೋಚಿಸಿರುವಂತೆ ಕರ್ನಾಟಕ ಹಾಗೂ ಮಿಕ್ಕ ರಾಜ್ಯಗಳಲ್ಲಿಯೂ ನೀಡಬೇಕೆಂದು ಕಾನೂನು ಮಾಡಿದರೆ ಅದರಿಂದ ಯಾರಿಗೂ

ನಷ್ಟವಾಗುವುದಿಲ್ಲ. ಒಂದು ರೀತಿಯಲ್ಲಿ ಒಳ್ಳೆಯದೇ ಆಗುತ್ತದೆ. ಅವರವರ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ದೊರಕುತ್ತದೆ. ಅಸ್ಪೃಶ್ಯರ ಪಟ್ಟಿಯಲ್ಲಿರುವ ಸ್ಪೃಶ್ಯರು ಮೀಸಲಾತಿಯಲ್ಲಿ ಹೆಚ್ಚಾಗಿ ಲಾಭ ಪಡೆಯುತ್ತಿದ್ದರೆ ಅದನ್ನು ತಡೆಗಟ್ಟಬಹುದು. ಆದರೆ ಉನ್ನತ ಉದ್ಯೋಗಗಳನ್ನು ಒಳ ಮೀಸಲಾತಿಗೆ ಅನ್ವಯಿಸದಂತೆ ನೋಡಿಕೊಳ್ಳಬೇಕಿದೆ. ಏಕೆಂದರೆ ಉನ್ನತ ಉದ್ಯೋಗಗಳು ಇರುವುದೇ ಕೆಲವು. ಹಾಗಾಗಿ ಆ ಉದ್ಯೋಗಗಳಿಗೆ ಸೂಕ್ತವಾದ ಅಭ್ಯರ್ಥಿಗಳು ದೊರಕದೇ ಅವು ಹಾಗೇ ಉಳಿದುಕೊಳ್ಳುವ ಇಲ್ಲವೆಂದರೆ ಬೇರೆಯವರ ಪಾಲಾಗುವ ಸಾಧ್ಯತೆಗಳೇ ಹೆಚ್ಚು. ಹೀಗೆ ಹಲವು ಸೂಕ್ಷ್ಮ ವಿಚಾರಗಳನ್ನು ಪರಿಶೀಲಿಸಬೇಕಾಗಿದೆ. ಕೆಲವು ಪ್ರದೇಶಗಳಲ್ಲಿ ಮಾದಿಗರಿಗೆ, ಕೆಲವು ಪ್ರದೇಶಗಳಲ್ಲಿ ಹೊಲೆಯರಿಗೆ ತಾತ್ಕಾಲಿಕವಾಗಿ ಸ್ವಲ್ಪಮಟ್ಟಿಗೆ ಲಾಭವಾಗಬಹುದು. ಆದರೆ ಹೊಲೆಯ – ಮಾದಿಗರು ಯಾವುದೇ ಕಾರಣದಿಂದ ಸಿಡಿದು ದೂರ ನಿಲ್ಲುವುದು ಮಾತ್ರ ಮುಂದಿನ ಪೀಳಿಗೆಗಳಿಗೆ ಆಘಾತ ತರುವ ಸಂಗತಿಯಾಗಿದೆ.

ಎರಡೂ ಪಂಗಡಗಳಲ್ಲಿ ಆರ್ಥಿಕವಾಗಿ ಮುಂದುವರಿದಿರುವವರೇ ಎಲ್ಲಾ ಸವಲತ್ತುಗಳನ್ನು ಪಡೆಯುತ್ತಿದ್ದಾರೆ ಎನ್ನುವುದು ನಿಜ. ಅದರಲ್ಲೂ ರಾಜಕೀಯವಾಗಿ ಬಲಾಢ್ಯರಾದವರು ತಮ್ಮ ಕುಟುಂಬ, ಪರಿವಾರಗಳ ಅಭಿವೃದ್ಧಿಗಷ್ಟೆ ತಮ್ಮನ್ನು ಅರ್ಪಿಸಿಕೊಂಡಿರುವುದು ಖೇದದ ವಿಷಯವಾಗಿದೆ. ಹೊಲೆಯರು ಹೊಲೆಯರನ್ನು, ಮಾದಿಗರು ಮಾದಿಗರನ್ನು ಮುಂದೆ ತರಲು ಬಯಸುವುದು ಸರಿಯಲ್ಲ. ಎಲ್ಲಾ ಪಂಗಡಗಳಲ್ಲೂ ಕಾಸಿಗೊಂದು ಕೊಸರಿಗೆ ಎರಡರಂತೆ ಒಳಪಂಗಡಗಳಿವೆ. ಗ್ರಾಮೀಣ, ಪಟ್ಟಣ ಮತ್ತು ನಗರದ ಕೊಳಚೆ ಪ್ರದೇಶಗಳಲ್ಲಿರುವ ಅಸ್ಪೃಶ್ಯರು ನೂರಾರು ವರ್ಷಗಳ ಹಿಂದಿನ ಪಳೆಯುಳಿಕೆಗಳಂತೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಎಷ್ಟೋ ಹಿಂದೆ ಉಳಿದಿರುವುದನ್ನು ನಾವು ನೋಡುತ್ತಿದ್ದೇವೆ. ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಮುಂದುವರಿದ ಅಸ್ಪೃಶ್ಯರು ಸರಕಾರ ನೀಡುತ್ತಿರುವ ಅಲ್ಪಸ್ವಲ್ಪ ಸವಲತ್ತುಗಳನ್ನು ಹಿಂದುಳಿದ ಅಸ್ಪೃಶ್ಯರಿಗೆ ದೊರಕುವಂತೆ ಮಾಡುವುದು ಅವರ ಕರ್ತವ್ಯವಾಗಿದೆ.

ಅಸ್ಪೃಶ್ಯರಿಗೆ ವಿದ್ಯಾಭ್ಯಾಸದಲ್ಲಿ, ಸರಕಾರಿ ನೌಕರಿಯಲ್ಲಿ ಮೀಸಲಾತಿಯನ್ನು ನೀಡುವುದು ಸರಿ, ಆದರೆ ಇವರಿಗೆ ವಿಶೇಷ ಬಡ್ತಿಗಳನ್ನು ಯಾಕಾದರೂ ಕೊಡಬೇಕು? ಎನ್ನುವ ಪ್ರಶ್ನೆಗಳು ಆಗಾಗ ಏಳುತ್ತಿವೆ. ಸುಪ್ರೀಂ ಕೋರ್ಟ್ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ವಿಶೇಷ ಬಡ್ತಿಗಳನ್ನು ನಿಲ್ಲಿಸುವಂತೆ ಆದೇಶ ನೀಡಿದರೂ ಅದು ಅನಂತರ ತಿರಸ್ಕರಿಸಲಾಯಿತು. ಆದರೆ ಮುಂದಿನ ದಿನಗಳಲ್ಲಿ ವೈದ್ಯಕೀಯ ಮತ್ತು ಇಂಜನಿಯರಿಂಗ್ ವಿಭಾಗಗಳಲ್ಲಿ ಸೂಪರ್ ಸ್ಪೆಷಲೈಜೇಷನ್‌ಗಳಲ್ಲಿ ಮೀಸಲಾತಿಯನ್ನು ನಿಲ್ಲಿಸಲು ಈಗಾಗಲೆ ಯೋಚಿಸಿ ಕೊಕ್ಕೆ ಹಾಕಿ ಕುಳಿತುಕೊಂಡಿದೆ. ಸ್ನಾತಕೋತ್ತರ ವಿಭಾಗಗಳಲ್ಲಿ ಮೀಸಲಾತಿ ಏಕಿರಬೇಕು ಎನ್ನುವ ಪ್ರಶ್ನೆಯನ್ನು ನ್ಯಾಯಾಲಯವೇ ಎತ್ತಿದೆ. 'ನ್ಯಾಯಾಲಯಗಳಲ್ಲಿ ಇರುವವರೆಲ್ಲ ದಲಿತ ವಿರೋಧಿಗಳು, ಈ ನ್ಯಾಯಾಲಯಗಳಿಗೆ ಈ ರೀತಿಯ ದೊಡ್ಡಸ್ತಿಕೆಯನ್ನು ಯಾರು ನೀಡಿದರು'? ಎಂದು ಕೆಲವು ದಲಿತ ನಾಯಕರು ಗುಡುಗಿದ್ದಾರೆ.

ಹಲವು ಆಯೋಗಗಳು ತಮ್ಮದೇ ಆದ ತರ್ಕಗಳನ್ನು ಮಂಡಿಸಿವೆ. ಪ್ರತಿಯೊಂದು ರಾಜ್ಯವೂ ತನ್ನದೇ ಆದ ನಿಯಮಗಳನ್ನು ಕಾರ್ಯಗತಗೊಳಿಸಲು ಮುಂದಾಗುತ್ತಿದೆ.

ಒಟ್ಟಿನಲ್ಲಿ ಅಸ್ಪೃಶ್ಯರಿಗೆ ನೀಡುತ್ತಿರುವ ವಿಶೇಷ ಬಡ್ತಿಗಳು ಸರಿಯೇ? ಇದರಿಂದ ಕಚೇರಿಗಳಲ್ಲಿ ಯಾವ ರೀತಿಯ ವಾತಾವರಣ ಸೃಷ್ಟಿಯಾಗಿದೆ? ಅಸ್ಪೃಶ್ಯರಿಗೆ ಯಾವ ಯಾವ ರೀತಿಯ ತೊಂದರೆಗಳು ಆಗುತ್ತಿವೆ ಎನ್ನುವುದನ್ನು ಸ್ವಲ್ಪಮಟ್ಟಿಗೆ ಗಮನಿಸಬಹುದು. ಕೇಂದ್ರ, ರಾಜ್ಯ ಸರ್ಕಾರ ಮತ್ತು ಸರ್ಕಾರಿ ಸ್ವಾಮ್ಯಕ್ಕೆ ಸೇರಿದ ಯಾವುದೇ ಕಚೇರಿ, ಕಾರ್ಖಾನೆಯಾಗಲೀ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದವರನ್ನು ಬಿಟ್ಟು ಮಿಕ್ಕವರೆಲ್ಲ ಒಂದಾಗಿ ಬಿಡುತ್ತಾರೆ. ಇಲ್ಲಿಯೇ ಒಂದು ರೀತಿಯ ಸಂದಿಗ್ಧ ಸ್ಥಿತಿ ನಿರ್ಮಾಣವಾಗಿಬಿಡುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಒಬ್ಬ ಅಸ್ಪೃಶ್ಯನಿಗೆ ಇತರರಿಗಿಂತ ಮುಂಚೆಯೇ ಸೇವೆಯಲ್ಲಿ ಬಡ್ತಿ ಸಿಕ್ಕರೆ ಅವನ ಪರಿಸ್ಥಿತಿ ವರ್ಣಿಸಲಸಾಧ್ಯ.

ಯಾವುದೇ ಜಾತಿಯವರಾಗಲಿ ಸೇವೆಯಲ್ಲಿ ತನಗಿಂತ ಜೂನಿಯರ್ ಆದವನ ಕೈಕೆಳಗೆ ಸೀನಿಯರ್ ನೌಕರ ಕೆಲಸ ಮಾಡುವುದನ್ನು ಸಹಿಸಲಾರ. ಒಬ್ಬ ನೌಕರನ ಕೈಕೆಳಗೆ ಕೆಲಸ ಮಾಡುತ್ತಿರುವ ನೌಕರ ದಿಢೀರನೆ ಅದೇ ನೌಕರನ ಮೇಲೆ ಬಡ್ತಿ ಪಡೆಯುವುದು ಕಚೇರಿಗಳ ವಾತಾವರಣದಲ್ಲಿ ಯಾವ ರೀತಿಯಲ್ಲೂ ಸರಿಯಾದ ನಿಲುವಲ್ಲ ಎನ್ನುವುದು ನನ್ನ ವೈಯಕ್ತಿಕ ಅನುಭವ ಮತ್ತು ನಿಲುವು. ಈ ವಿಶೇಷ ಬಡ್ತಿಯೂ ಬೇಡ, ಇವರ ಕಾಟವೂ ಬೇಡ ಎನ್ನುವ ಎಷ್ಟೋ ನೌಕರರನ್ನು ನಾನು ನೋಡಿದ್ದೇನೆ. ಮೊದಲಿನಿಂದ ಎಲ್ಲಾ ವಿಭಾಗಗಳಲ್ಲೂ ಮೀಸಲಾತಿಯನ್ನು ಸರಿಯಾಗಿ ಪಾಲಿಸದೇ ಇರುವುದೇ ಇದಕ್ಕೆ ಕಾರಣವಾಗಿದೆ. ಯಾವ ಇಲಾಖೆಯಲ್ಲೂ ನೂರಕ್ಕೆ ನೂರರಷ್ಟು ಮೀಸಲಾತಿಯನ್ನು ತುಂಬಿಲ್ಲದ ಕಾರಣ ಮೀಸಲಾತಿಯ ಹುದ್ದೆಗಳು ಎಲ್ಲೆಲ್ಲೂ ಖಾಲಿ ಇವೆ. ಈ ಹುದ್ದೆಗಳನ್ನು ತುಂಬಲು ಆಗಾಗ ಕೆಲವು ವಿಭಾಗಗಳು ಮುತುವರ್ಜಿ ವಹಿಸಿದಾಗ ಎಲ್ಲಿಲ್ಲದ ತರಲೆಗಳು ಹುಟ್ಟಿಕೊಳ್ಳುತ್ತವೆ.

ದೇಶದಲ್ಲಿ ಮೀಸಲಾತಿಯನ್ನು ಕಳೆದ 71 ವರ್ಷಗಳಲ್ಲಿ ಎಷ್ಟರಮಟ್ಟಿಗೆ ಅನುಷ್ಠಾನ ಗೊಳಿಸಿದ್ದಾರೆ ಎಂದರೆ ನ್ಯಾಯಾಲಯಗಳೇ ದೇಶದ ದೇವಾಲಯಗಳು ಎನ್ನುವ ಸ್ಥಳಗಳಲ್ಲೂ ಮೀಸಲಾತಿಯನ್ನು ಪಾಲಿಸಿಲ್ಲ. ಉನ್ನತ ಸ್ಥಾನಗಳೇ ಅಲ್ಲದೇ ಕೆಳ ಮಟ್ಟದ ಸ್ಥಾನಗಳಲ್ಲೂ ಮೀಸಲಾತಿಯನ್ನು ಪಾಲಿಸಿಲ್ಲ ಎನ್ನುವುದನ್ನು ನ್ಯಾಯಾಲಯಗಳೇ ಒಪ್ಪಿಕೊಂಡಿವೆ. ಸರಾಸರಿ ಎಲ್ಲಾ ನೌಕರಿಗಳನ್ನು ದೇಶದಾದ್ಯಂತ ಗಣನೆಗೆ ತೆಗೆದು ಕೊಂಡರೆ ಶೇ. 1–2ರಷ್ಟು ಉದ್ಯೋಗಗಳನ್ನು ಮಾತ್ರ ಮೀಸಲಾತಿಯ ಕೆಳಗೆ ತುಂಬಿರುವುದಾಗಿ ತಿಳಿದುಬರುತ್ತದೆ. ಐಎಎಸ್, ಐಪಿಎಸ್ ಇನ್ನಿತರ ಕೆಲವು ವಿಭಾಗಗಳಲ್ಲಿ ವಿಶೇಷವಾಗಿ ಉನ್ನತ ಹುದ್ದೆಗಳ ಮೀಸಲಾತಿಯನ್ನು ತುಂಬಿಸಿರುವುದು ಕಂಡುಬರುತ್ತದೆ. ಸರ್ಕಾರ ಮತ್ತು ಸರ್ಕಾರಿ ಸ್ವಾಮ್ಯ ವಿಭಾಗಗಳು ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳನ್ನು ನೀಡುತ್ತವೆ. ಒಂದು, ಸೂಕ್ತವಾದ ಅಭ್ಯರ್ಥಿಗಳು ಸಿಗುತ್ತಿಲ್ಲ ಎನ್ನುವ ಕಾರಣವನ್ನು ನೀಡಿ ದಲಿತ ಅಭ್ಯರ್ಥಿಗಳನ್ನು ನೇಮಿಸಿಕೊಳ್ಳದಿರುವುದು. ಎರಡು, ದಲಿತರಿಗೆ ವಿದ್ಯಾಭ್ಯಾಸ ಇಲ್ಲದಿರುವುದು. ಈ ಎರಡನೆಯದು ಸ್ವಲ್ಪಮಟ್ಟಿಗೆ ಮಾತ್ರ ಕಾರಣವಾಗಿದೆ. ಇದೆಲ್ಲದರ ನಡುವೆ ಬೇರೆ ಜಾತಿಗಳವರು ನಕಲಿ ಜಾತಿ ಸರ್ಟಿಫಿಕೇಟ್‌ಗಳನ್ನು ಸೃಷ್ಟಿಸಿ ಶಾಲೆ, ಕಾಲೇಜುಗಳಲ್ಲಿ, ಸರಕಾರಿ ನೌಕರಿಗಳಲ್ಲಿ ತೂರಿಕೊಳ್ಳುತ್ತಿದ್ದಾರೆ. ಎಷ್ಟೋ ವಿದ್ಯಾರ್ಥಿಗಳು ಮೆಡಿಕಲ್, ಇಂಜಿನಿಯರಿಂಗ್ ಪದವಿಗಳನ್ನು ಗಿಟ್ಟಿಸಿ ರಾಜಾರೋಷವಾಗಿ ಕೆಲಸಕ್ಕೆ ಸೇರಿಕೊಂಡಿದ್ದಾರೆ. ಸರಕಾರಗಳು

ಇದರ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. ಕೇಂದ್ರ ಮತ್ತು ರಾಜ್ಯ ಸರಕಾರಗಳ ಆಡಳಿತವೆಲ್ಲಾ ಉಚ್ಚಜಾತಿಯವರ ಅಧೀನದಲ್ಲಿರುವ ಜೂಜುಕಟ್ಟೆಗಳಾಗಿವೆ.

ಭಾರತದಲ್ಲಿ ಕಳೆದ 71 ವರ್ಷಗಳಿಂದ ದಲಿತರಿಗೆ ಸಿಕ್ಕಿರುವ ಸವಲತ್ತುಗಳ ಆಧಾರದ ಮೇಲೆ ಸಚಿವರು, ಸಂಸದ್ ಸದಸ್ಯರು, ಶಾಸಕಾಂಗ ಸದಸ್ಯರು, ಐಎಎಸ್/ಐಪಿಎಸ್, ಇತರ ಉನ್ನತ ಅಧಿಕಾರಿಗಳ ಸ್ಥಳಗಳನ್ನು ಹೆಚ್ಚುಕಡಿಮೆ ತುಂಬಿರುವುದು ಕಾಣಿಸುತ್ತದೆ. ಹಾಗೆಯೇ ಹಲವು ರಾಜ್ಯ ಸರ್ಕಾರಿ ವಿಭಾಗಗಳಲ್ಲಿ ಮೀಸಲಾತಿಗೆ ತಕ್ಕಂತೆ ಪೋಸ್ಟ್‌ಗಳನ್ನು ತುಂಬದೇ ಇರುವುದು ಕಾಣಿಸುತ್ತದೆ. ಆದರೆ ಈ ದೊಡ್ಡ ದೇಶದ ಅಗಾಧ ಜನಸಂಖ್ಯೆಯಲ್ಲಿ ಇದೆಲ್ಲ ರಾಕ್ಷಸನ ಹೊಟ್ಟೆಗೆ ಒಂದು ಲೋಟಾ ಮಜ್ಜಿಗೆಯಂತಿದೆ. ಮೇಲಿನ ಸ್ಥಳಗಳನ್ನು ಆಕ್ರಮಿಸಿಕೊಂಡಿರುವ ದಲಿತ ಜನಾಂಗ (ಸಚಿವರು, ಸಂಸದ್ ಸದಸ್ಯರು, ಶಾಸಕಾಂಗ ಸದಸ್ಯರು, ಐಎಎಸ್/ಐಟಿಎಸ್, ಇತರ ಉನ್ನತ ಅಧಿಕಾರಿಗಳು) ಅಷ್ಟೇನೂ ಸಂತೋಷದ ಸುಪ್ಪತ್ತಿಗೆಯಲ್ಲಿಲ್ಲ. ಇನ್ನು ಅಧಿಕಾರಿ ಪಡೆದುಕೊಂಡ ಮೊದಲ/ಎರಡನೇ ತಲೆಮಾರಿನ ಜನರೇ ಮುಂದೆಯೂ ಸರಕಾರಿ ಸವಲತ್ತುಗಳನ್ನು ಪಡೆಯುತ್ತಿರುವುದು ಒಳ್ಳೆಯದಲ್ಲ. ಅದನ್ನು ಉಳಿದ ಹಿಂದುಳಿದ ಜನರಿಗೆ ಬಿಟ್ಟುಕೊಡಬೇಕಾಗಿರುವುದು ಅವರ ಕರ್ತವ್ಯವಾಗಿದೆ. ಅಧಿಕಾರ ಅಥವಾ ಸವಲತ್ತುಗಳನ್ನು ಪಡೆದ ನಗರವಾಸಿ ದಲಿತರ ಮಕ್ಕಳು ಇತ್ತೀಚೆಗೆ ಸರಕಾರಿ ಕೆಲಸಗಳಿಗೆ ಸೇರದೆ ಖಾಸಗಿ ಅಥವಾ ಐಟಿ/ಬಿಟಿ ಸಂಸ್ಥೆಗಳಲ್ಲಿ ಸೇರಿಕೊಳ್ಳುತ್ತಿರುವುದು ಕೂಡ ಕಾಣಿಸುತ್ತಿದೆ. ಆದರೆ ಈ ಐಟಿ/ಬಿಟಿ ಖಾಸಗಿ ವಲಯಗಳಲ್ಲಿ ಜಾತಿ ಸರ್ಟಿಫಿಕೇಟ್‌ಗಳನ್ನು ಕೇಳದಿದ್ದರೂ ಹೇಗೋ ಅವರನ್ನು ಅಸ್ಪೃಶ್ಯತೆ, ಜಾತಿ, ಜನಾಂಗಗಳ ತಾರತಮ್ಯ ಕಾಣದಂತೆ ಬೆಂಬಿಡುತ್ತಿರುವುದು ಮಾತ್ರ ಸುಳ್ಳಲ್ಲ.

# ಉಪಸಂಹಾರ

ರಾಮಾಯಣದ ಶ್ರೀರಾಮ ಮತ್ತು ಮಹಾಭಾರತದ ಶ್ರೀಕೃಷ್ಣನ ವಂಚನೆಗಳನ್ನು ವೈಭವೀಕರಿಸಿ, ಅವುಗಳನ್ನೇ ಆದರ್ಶವೆಂದು ಸ್ವೀಕರಿಸಿದ ಹಿಂದೂ ಧರ್ಮ, ವರ್ಣಾಶ್ರಮದ ಮೂಲದಿಂದ ಜಾತಿಗಳನ್ನು ಮತ್ತು ಅಸ್ಪೃಶ್ಯತೆಯನ್ನು ಸೃಷ್ಟಿಸಿ ಜನರ ನಡುವೆ ಅಪಾರವಾದ ಭೇದಭಾವಗಳನ್ನು ಹುಟ್ಟುಹಾಕಿತು. ಮಹಿಳೆಯರನ್ನಂತೂ ಎಲ್ಲಾ ರೀತಿಯಲ್ಲೂ ಶೋಷಣೆಗೆ ಒಳಪಡಿಸಿತು. ಈ ಎರಡೂ ಮಹಾಕಥೆಗಳನ್ನು ಬರೆದ ವ್ಯಾಸ ಮತ್ತು ವಾಲ್ಮೀಕಿ ಹುಟ್ಟಿನಲ್ಲಿ ಶೂದ್ರರಾದರೂ, ಶೂದ್ರರ ವಿರುದ್ಧವೇ ವಂಚನೆಗಳನ್ನು ಮಾಡಿ ಅವರ ಬದುಕನ್ನು ಪಾತಾಳಕ್ಕೆ ತಳ್ಳಿದ ವಿಸ್ಮಯವಾದರೂ ಏನು? ರಾಮಾಯಣ ಮತ್ತು ಮಹಾಭಾರತವನ್ನು ನಿಜವಾಗಿಯೂ ಇವರು ಬರೆದರೆ ಎನ್ನುವ ಅನುಮಾನ ಹುಟ್ಟುತ್ತದೆ. ಆದರೆ ಪ್ರಸ್ತುತ ಇವೇ ನಮ್ಮ ವೇದವಾಕ್ಯಗಳಾಗಿ, ಜನಾನುರಾಗ ಪಡೆದಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಹಿಂದೂ ಸಮಾಜದಲ್ಲಿ ಅಸ್ಪೃಶ್ಯರ ಸ್ಥಾನಮಾನ ಮತ್ತು ಅಸ್ಪೃಶ್ಯತೆ ತೀರ ಜಟಿಲವಾದ ಸಮಸ್ಯೆಯಾಗಿ ಪರಿಣಮಿಸಿದೆ. ಇದರ ಜೊತೆಗೆ ಜಾತಿ ಇನ್ನಷ್ಟು ಕ್ಲಿಷ್ಟವಾಗಿ ಹೆಣೆದು ಕೊಂಡಿದೆ. ಈ ಸಮಸ್ಯೆಗಳನ್ನು ಪೂರ್ಣವಾಗಿ ಅವಲೋಕಿಸಲು ಸಾಧ್ಯವಾಗದೆ ಹೋದರೂ ಈ ಕೃತಿಯ ಮೂಲಕ ಕೆಲವು ಮುಖಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಇದರ ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ವರ್ಗ, ವರ್ಗವೈರುಧ್ಯ ಹಾಗೂ ವರ್ಗೀಯ ಹಿತಾಸಕ್ತಿಗಳು ಎಷ್ಟರಮಟ್ಟಿಗೆ ಅಸ್ಪೃಶ್ಯತೆಯನ್ನು ಮುಂದುವರಿಸಿಕೊಂಡು ಬಂದಿವೆ ಎನ್ನುವುದನ್ನೂ ವಿಶ್ಲೇಷಿಸಲಾಗಿದೆ. ಈ ಸಮಸ್ಯೆಯ ಪೂರ್ಣ ತಿಳಿವಳಿಕೆಗೆ ಇನ್ನೂ ಆಳವಾದ ಅಧ್ಯಯನ ಬೇಕಾಗುತ್ತದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಜಾತಿ, ಅಸ್ಪೃಶ್ಯತೆ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧ ಕಾಲದಿಂದ ಕಾಲಕ್ಕೆ ಎಷ್ಟೋ ಮಹನೀಯರು ವಿರೋಧವನ್ನು ವ್ಯಕ್ತಪಡಿಸುತ್ತ ಬಂದಿದ್ದಾರೆ. ಇವರಲ್ಲಿ ಲೋಕಾಯತರು, (ಚಾರ್ವಾಕರು) ಬುದ್ಧ, ಬಸವಣ್ಣನವರನ್ನು ವಿಶೇಷವಾಗಿ ಹೆಸರಿಸಬಹುದು. ಪ್ರಾಚೀನ ವೈದ್ಯಕೀಯ ಪಂಥದವರು ಸಹ ವರ್ಣಾಶ್ರಮ ಶ್ರೇಣೀಕರಣವನ್ನು ಸರ್ವಥಾ ಅಂಗೀಕರಿಸಲಿಲ್ಲ. ಆದರೆ ಚರಕನ ನಂತರದಲ್ಲಿ ಅದರಲ್ಲೂ ಜಾತಿಯ ಪಿಡುಗು ಕಂಡುಬಂದಿತು. ಹಿಂದೂ ಧರ್ಮದಲ್ಲಿನ ಸಾಮಾಜಿಕ ಅಸಮಾನತೆಗಳನ್ನು ವಿರೋಧಿಸಲು ಇದೇ ನೆಲದಲ್ಲಿ ಬೌದ್ಧ, ಜೈನ, ಲಿಂಗಾಯತ ಧರ್ಮಗಳು ಹುಟ್ಟಿಕೊಂಡವು. ಮುಸ್ಲಿಂ ಧರ್ಮ ಮತ್ತು ಕ್ರೈಸ್ತ ಧರ್ಮಗಳು ಹಿಂದೂ ಧರ್ಮದವರನ್ನು ತಮ್ಮ ಧರ್ಮದ ಕಡೆಗೆ ಆಕರ್ಷಿಸಿ ಸೇರಿಸಿಕೊಂಡ ಉದಾಹರಣೆಗಳು ಹೇರಳವಾಗಿವೆ. ಆದರೆ ಕಾಲಾಂತರದಲ್ಲಿ ಈ ನೆಲದಲ್ಲಿ ಹುಟ್ಟಿದ ಬೌದ್ಧ ಧರ್ಮ

ದೇಶದಿಂದ ಪಲಾಯನವಾದರೆ ಜೈನ, ಲಿಂಗಾಯತ ಧರ್ಮಗಳು ಹಿಂದೂ ಧರ್ಮದಲ್ಲಿ ಲೀನವಾಗಿಹೋದವು. ಪ್ರತಿರೋಧ ತೋರಿಸುತ್ತಲೇ ಬಂದ ದ್ರಾವಿಡರು ಮತ್ತು ದ್ರಾವಿಡ ದೇವತೆಗಳಿಗೂ ಅದೇ ಗತಿ ಒದಗಿಬಂದಿತು.

ಪ್ರಸ್ತುತ, ಹಿಂದೂ ಧರ್ಮ ಮನು ಕಾಲದ ಅಸಮಾನತೆಯ ನಂಜನ್ನು ಮತ್ತೊಮ್ಮೆ ಸಮಾಜದ ಮೇಲೆ ತೀವ್ರವಾಗಿ ಹೇರಲು ಹೆಣಗಾಡುತ್ತಿರುವಂತೆ ಕಂಡುಬರುತ್ತಿದೆ. ಕಳೆದ ಕೆಲವು ದಶಕಗಳಲ್ಲಿ ಮುಖ್ಯವಾಗಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಅನ್ಯ ಧರ್ಮಗಳ ನಡುವೆ ಸಾಧಿಸಿದ ಸಹಿಷ್ಣುತೆ ಮತ್ತು ಭ್ರಾತೃತ್ವವನ್ನು ಮುರಿಯಲು ಹಿಂದೂ ಮತ್ತು ಮುಸ್ಲಿಂ ಪಟ್ಟಭದ್ರ ಹಿತಾಶಕ್ತಿಗಳು ಎದುರು ಬದುರಾಗಿ ಕೆಂಗಣ್ಣು ಮಾಡಿ ನಿಂತಿವೆ. ಇದನ್ನು ದೇಶ ಹಿಂದೆಂದಿಗಿಂತ ಇಂದು ತೀವ್ರವಾಗಿ ಅನುಭವಿಸುತ್ತಿರುವುದು ಎದ್ದು ಕಾಣಿಸುತ್ತಿದೆ. ಧರ್ಮ ಮತ್ತು ದೇವರುಗಳ ಹೆಸರಿನಲ್ಲಿ ಮಾನವ ಇಂದು ಮೃಗವಾಗಿಹೋಗಿದ್ದಾನೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಎಲ್ಲಾ ಬುದ್ಧಿ ಜೀವಿಗಳು ಮಾನವನ ಮಧ್ಯೆ ಪರಸ್ಪರ ಪ್ರೀತಿ, ಗೌರವ, ಸಾಮಾಜಿಕ ಸಮಾನತೆಗಳನ್ನು ಬೋಧಿಸಿದ ಬುದ್ಧ, ಬಸವಣ್ಣನಂತಹವರ ಆಲೋಚನೆಗಳನ್ನು ಕ್ರಿಯಾರೂಪಕ್ಕೆ ತರಲು ತೀವ್ರವಾಗಿ ಪ್ರಯತ್ನಿಸಬೇಕಾಗಿದೆ.

ಅಂಬೇಡ್ಕರ್ ಅವರು ಮೊದಲ ಬಾರಿಗೆ ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯ ಬಗ್ಗೆ ವಿಶೇಷವಾಗಿ ಅಧ್ಯಯನ ನಡೆಸಿ ಹಲವು ವಿಚಾರಗಳನ್ನು ತಿಳಿಸಿಕೊಟ್ಟಿದ್ದಾರೆ. ಹಿಂದೂ ಧರ್ಮ ಗ್ರಂಥಗಳಾದ ವೇದ ಉಪನಿಷತ್ತುಗಳ ಕಾಲದಿಂದ ಹಿಡಿದು ತಾವು ಜೀವಿಸಿದ್ದ ಕಾಲದವರೆಗಿನ ಗ್ರಂಥಗಳನ್ನು ಪರಿಶೀಲಿಸಿ ತಮ್ಮದೇ ಆದ ವ್ಯಾಖ್ಯಾನಗಳನ್ನು ತಮ್ಮ ಬದುಕು ಮತ್ತು ಬರಹಗಳಲ್ಲಿ ವಿವರಿಸಿದ್ದಾರೆ. ಅವುಗಳಲ್ಲಿ ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯ ಬಗ್ಗೆಯೂ ಸಾಕಷ್ಟು ವಿಶ್ಲೇಷಣೆ ಅಡಕವಾಗಿದೆ. ಭಾರತದಲ್ಲಿ ಬಹುಶಃ ಅಂಬೇಡ್ಕರ್ ಅವರಷ್ಟು ನೈಪುಣ್ಯತೆಯನ್ನು ಪಡೆದುಕೊಂಡು ಬರೆದವರು ಮತ್ಯಾರೂ ಇರಲಾರರು ಎಂದರೆ ಅತಿಶಯೋಕ್ತಿ ಆಗಲಾರದು. ಅವರು ಯಾವುದೇ ವಿಷಯವನ್ನು ಕುರಿತು ಬರೆದರೂ ಅದರ ಬೇರುಗಳವರೆಗೂ ತಲುಪಿ ಅರ್ಥೈಸಿಕೊಂಡು ತಮ್ಮದೇ ಆದ ತರ್ಕಬದ್ಧತೆ ಮತ್ತು ಕೌಶಲ್ಯದಿಂದ ಬರೆದು ತೋರಿಸಿದ್ದಾರೆ. ಮಹಾರಾಷ್ಟ್ರ ಸರ್ಕಾರ ಹೊರತಂದ 17 ಬೃಹತ್ ಸಂಪುಟಗಳ 'ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು' ಇದಕ್ಕೆ ಸಾಕ್ಷಿಯಾಗಿವೆ. ಅದರಲ್ಲೂ 'ಯಾರು ಶೂದ್ರರಾಗಿದ್ದರು? ಅವರು ಹೇಗೆ ಹಿಂದೂ-ಆರ್ಯ ಸಮಾಜದ ನಾಲ್ಕನೆ ವರ್ಣದವರಾದರು? ಅಸ್ಪೃಶ್ಯರು ಯಾರು ಮತ್ತು ಏಕೆ ಅಸ್ಪೃಶ್ಯರಾದರು?' ಸಂಪುಟಗಳು ಎಲ್ಲರೂ ಓದಲೇಬೇಕಾದಂತಹವು. ಡಾ. ಆರ್. ಎಸ್. ಶರ್ಮ ಅವರ 'ಪ್ರಾಚೀನ ಭಾರತದಲ್ಲಿ ಶೂದ್ರರು' ಎಂಬ ಗ್ರಂಥವೂ ಸಹ ಈ ನಿಟ್ಟಿನಲ್ಲಿ ಬಹಳ ಮೌಲಿಕವಾದುದು.

ಮಾನವ ಚರಿತ್ರೆಯಲ್ಲಿ ಜ್ಞಾನ ಎನ್ನುವುದು ಬುದ್ಧಿ ಹಾಗೂ ಮನಸ್ಸುಗಳ ಪ್ರಬಲ ಮತ್ತು ಪರಿಣಾಮಕಾರಿ ಅಸ್ತ್ರ. ಪ್ರಪಂಚದ ಪುರಾತನ ಕಡತಗಳು ಎನ್ನುವ ವೇದ – ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಪುರಾಣಗಳು, ಹಿಂದೂ ಧರ್ಮದ ಆಚಾರ ವಿಚಾರಗಳು ಮತ್ತು 33 ಕೋಟಿ ದೇವತೆಗಳು ಇವೆಲ್ಲವುಗಳ ಬಗ್ಗೆ ದೇಶ ವಿದೇಶಗಳ ಜ್ಞಾನಿಗಳು ಇಂದಿಗೂ ಕುತೂಹಲದಿಂದ ಸಂಶೋಧನೆಗಳನ್ನು

ನಡೆಸುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಆದರೆ ಜಾತಿ, ಅಸ್ಪೃಶ್ಯತೆಯಂತಹ ಹೀನ ವಿಚಾರಗಳ ಬಗ್ಗೆ ಸಂಶೋಧನೆಗಳು ಹೆಚ್ಚಾಗಿ ನಡೆಯುತ್ತಿಲ್ಲ ಎನ್ನುವುದು ಸತ್ಯ. ಈ ನಿಟ್ಟಿನಲ್ಲಿ ಅಂಬೇಡ್ಕರ್ ಅವರ ಆಲೋಚನೆಗಳನ್ನು ಕ್ರೋಢೀಕರಿಸಿ ಒಟ್ಟಾರೆ ಒಂದು ಅಭಿಪ್ರಾಯ ಮೂಡಿಸಲು ಈ ಕೃತಿಯಲ್ಲಿ ನಾನು ಪ್ರಯತ್ನಿಸಿದ್ದೇನೆ. ಆದರೆ ಇದಕ್ಕೆ ಇನ್ನೂ ಅನೇಕ ಮುಖಗಳ ಮಿತಿ ಇರುವುದು ಸತ್ಯ. ಆದರೆ ಅಂಬೇಡ್ಕರ್ ಅವರ ಬಗ್ಗೆ ಈಗೀಗ ಕನ್ನಡದಲ್ಲಿ ಬಹಳಷ್ಟು ಕೃತಿಗಳು ಬರುತ್ತಿದ್ದರೂ ಜಾತಿ, ಅಸ್ಪೃಶ್ಯತೆಯ ಬಗ್ಗೆ ಹೆಚ್ಚು ಕೃತಿಗಳು ಬರುತ್ತಿಲ್ಲ.

50 ವರ್ಷಗಳ ಕಾಲ ಭಾರತದ ಪುರಾಣಗಳನ್ನು ಸಮಗ್ರವಾಗಿ ಅಭ್ಯಾಸ ಮಾಡಿದ ಫ್ರೆಂಚ್ ವಿದ್ವಾಂಸ ಅಂಡ್ರೆ ವ್ಯಾನ್ ಲಿಸಾಬೆತ್ ಹೀಗೆ ಹೇಳುತ್ತಾನೆ : 'ಶಿವನು, ಪಾರ್ವತಿಯಲ್ಲಿ ಅನುರಕ್ತನಾದ ಮೇಲೆ ಆತನ ಜೊತೆಗೆ ಬ್ರಾಹ್ಮಣಿಕೆಯ ಶ್ರೇಷ್ಠತೆಯನ್ನು ಒಪ್ಪಿಕೊಂಡು ಬ್ರಾಹ್ಮಣರೊಡನೆ ಕೈ ಜೋಡಿಸಿದವರನ್ನು ಮುಂದೆ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಶೂದ್ರರೆಂದು ಪರಿಗಣಿಸಲಾಯಿತು. ಆದರೆ ಶಿವನ ಎಲ್ಲಾ ಗಣಗಳು ಬ್ರಾಹ್ಮಣ್ಯಕ್ಕೆ ಶರಣಾಗಲಿಲ್ಲ. ಸಾಕಷ್ಟು ಗುಂಪುಗಳು ತಿರುಗಿಬಿದ್ದವು. ಈ ಗುಂಪುಗಳನ್ನು ಮುಂದೆ ಅಸ್ಪೃಶ್ಯರೆಂದು ಪರಿಗಣಿಸಲಾಯಿತು. ಶಿವ-ಪಾರ್ವತಿಯರು ಬ್ರಾಹ್ಮಣೀಕರಣಕ್ಕೊಳ ಗಾದರೂ, ಪಾರ್ವತಿಯ ಇನ್ನೊಂದು ರೂಪವಾದ ಕಾಳಿಕಾ ದೇವಿ ಶಿವನ ಮೂಲಗಣಗಳ ಜೊತೆಗೆ ಉಳಿದುಕೊಂಡಳು. ಕಾಳಿಕಾ ದೇವಿ ಧರಿಸಿರುವ ರುಂಡ ಮಾಲೆಯಲ್ಲಿ ಬಿಳಿಯ ಮುಖಗಳನ್ನು ಮಾತ್ರ ಕಾಣಬಹುದು. ಆರ್ಯರನ್ನು ತಿರಸ್ಕರಿಸಿದ ದ್ರಾವಿಡ ಗಣಗಳು ಆರ್ಯರ ತಲೆಗಳನ್ನು ಹಾರ ಮಾಡಿ ಕಾಳಿಯ ಕೊರಳಲ್ಲಿ ಹಾಕಿದರು. ಕಾಳಿ, ಶಿವನ ಎದೆಯ ಮೇಲೆ ನರ್ತಿಸುವುದನ್ನು ನೋಡಬಹುದಾಗಿದೆ'. ಹೀಗೆ ವಿಷಯಗಳನ್ನು ತಿಳಿದುಕೊಳ್ಳುತ್ತಾ ಹೋದರೆ ಹೊಸ ಹೊಸ ಅಂಶಗಳು ಆವಿಷ್ಕಾರವಾಗುತ್ತಲೇ ಇರುತ್ತವೆ.

* * *

ಮೂಲ ಜನಾಂಗಗಳ ಜನರ ಗುಂಪುಗಳು ಖಂಡಾಂತರ, ದೇಶಾಂತರ ವಲಸೆ ಹೋಗುವುದು ಇಂದಿಗೂ ಅಸ್ತಿತ್ವದಲ್ಲಿರುವುದನ್ನು ಎಲ್ಲಾ ಕಡೆ ನೋಡಬಹುದಾಗಿದೆ. ಮೂಲ ಜನಾಂಗಗಳು ಮತ್ತು ವಲಸೆ ಬಂದ ಜನಾಂಗಗಳು ಸಾಮಾನ್ಯವಾಗಿ ಒಂದೇ ಕಡೆ ಸಾಮರಸ್ಯದಿಂದ ಬಾಳುವುದು ಅಪರೂಪ. ಈ ಜನಾಂಗಗಳ ಮಧ್ಯೆ ಸಾವಿರಾರು ವರ್ಷಗಳ ಕಾಲ ಘರ್ಷಣೆಗಳು ನಡೆಯುತ್ತಲೇ ಇರುತ್ತವೆ. ಹಾಗೆಯೇ ಒಂದರ ಮೇಲೆ ಇನ್ನೊಂದು ಸಮುದಾಯ ಪ್ರಬಲತೆ, ರಾಜಕೀಯ ಅಧಿಕಾರ, ಒಟ್ಟಾರೆ ಹಿಡಿತವನ್ನು ಸಾಧಿಸಲು ಎಲ್ಲಾ ಸಮುದಾಯಗಳಲ್ಲೂ, ಎಲ್ಲಾ ಕಾಲದಲ್ಲೂ ನಡೆಯುತ್ತಿರುತ್ತದೆ. ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತ ಸಮುದಾಯಗಳು ರಾಜಕೀಯ ಮತ್ತು ಸಾಮಾಜಿಕ ಜಿದ್ದಾಜಿದ್ದಿಯಿಂದಲೇ ಸಂಘರ್ಷಗಳನ್ನು ನಡೆಸುತ್ತಿರುತ್ತವೆ. ಮುಖ್ಯವಾಗಿ ದಕ್ಷಿಣ ಏಷ್ಯಾದಲ್ಲಿ ಜಾತಿಯ ಹೆಸರಿನಲ್ಲಿ ಕೆಲವು ಜನಾಂಗಗಳ ವಿರುದ್ಧ ಪ್ರಬಲ ಜನಾಂಗಗಳು ಜಾತಿ/ಅಸ್ಪೃಶ್ಯತೆ ಆಚರಣೆ ಮಾಡುತ್ತ, ಕೊಳಕು ಜನಾಂಗಗಳೆಂದು ದೂರ ಮಾಡುತ್ತ ಬಂದಿವೆ. ಇದು ಬರೀ ಸಾಂಸ್ಕೃತಿಕ ಮತ್ತು ಆರ್ಥಿಕ ಭೇದಭಾವಗಳಿಂದಲೇ ಕೂಡಿಲ್ಲ. ಜಾತಿ, ಶ್ರೇಣಿಯಾಧಾರಿತ ತಾರತಮ್ಯ (ಅಂಬೇಡ್ಕರ್1987 ಮತ್ತು ಜಾಫ್‌ರೇಲಾಟ್ 2003), ಎಲ್ಲಾ ಸಾಮಾಜಿಕ ಹಂತಗಳಲ್ಲೂ ಸೇರಿಕೊಂಡಿದೆ. ನಾಲ್ಕನೆ

ವರ್ಣವೆನ್ನುವ ಶೂದ್ರ ಮತ್ತು ಕಟ್ಟಕಡೆಯ ಜನಾಂಗಗಳಾದ ಪಂಚಮರ ಮಧ್ಯೆಯೂ ಭೇದಭಾವ, ಮೇಲು-ಕೀಳೆಂಬ ಭಾವನೆಗಳನ್ನು ಸೃಷ್ಟಿಸಿ ಅವರನ್ನು ದೂರದೂರ ಮಾಡಲಾಗಿದೆ. ಒಟ್ಟಿನಲ್ಲಿ ಹಿಂದೂ ಧರ್ಮದಲ್ಲಿ ಜಾತಿ ಎನ್ನುವುದು ಬಹಳ ದೊಡ್ಡ ಶ್ರೇಣಿಯಾಧಾರಿತ ಮತ್ತು ಸಂಕೀರ್ಣವಾದ ಸಮಸ್ಯೆಯಾಗಿ ಪರಿಣಮಿಸಿದೆ.

ಇದು ಎಷ್ಟೊಂದು ಕಷ್ಟದ ಸಂಗತಿಯೆಂದರೆ, ಹೀಗೆ ದೂರದೂರವಾದ ಸ್ವೀಕಾರದ ತುದಿಯಲ್ಲಿರುವ ಕೆಳಜಾತಿಗಳು, ಪ್ರಬಲ ಜಾತಿಗಳ ವಿರುದ್ಧ ಸಜ್ಜುಗೊಳ್ಳುವುದು ಕಷ್ಟದ ಕೆಲಸವಾಗಿಬಿಟ್ಟಿದೆ. ಈ ಘಟ್ಟದಲ್ಲಿ ದಲಿತರ/ಅಸ್ಪೃಶ್ಯರ ಸಮಸ್ಯೆಗಳನ್ನು ಬಹಳ ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳಬೇಕಿದೆ. ವಸಾಹತು ಕಾಲಘಟ್ಟದಲ್ಲಿ ಬ್ರಿಟಿಷರು ತುಳಿತಕ್ಕೆ ಒಳಗಾದವರನ್ನೆಲ್ಲ (Depressed class) ಒಂದೇ ಹೆಸರಿನ ಕೆಳಗೆ ನಿಮ್ನ ವರ್ಗವೆಂದು ಕರೆಯುತ್ತಿದ್ದರು. ಸಂವಿಧಾನದಲ್ಲಿ ಇವರನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದವರೆಂದು ಕರೆಯಲಾಯಿತು. (Surinder S Jodhkar & Ghanshyam Shah, IDS, 2005) ಈ ಎಲ್ಲರನ್ನೂ ಒಗ್ಗೂಡಿಸುವ 'ದಲಿತ' ಎನ್ನುವ ಪದವನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಮೊದಲಿಗೆ ಬಳಸಿದವರು ಮಹಾತ್ಮ ಜ್ಯೋತಿಬಾ ಫುಲೆಯವರು. ಅನಂತರ ಈ ಪದ ಈಗಿನ ಜನಪ್ರಿಯತೆಯನ್ನು ಕಂಡುಕೊಳ್ಳಲು ಕಾರಣರಾದವರು ಅಂಬೇಡ್ಕರ್ ಅವರು. ಇದರಿಂದ ಎಲ್ಲಾ ದಲಿತರ ಆಸಕ್ತಿ ಮತ್ತು ಅನುಭವಗಳು ಒಟ್ಟುಗೂಡುವಂತಾದವು. ಆದರೆ ಒಳಪಂಗಡಗಳ ನಡುವೆ ಕೋಪತಾಪ, ಈರ್ಷೆ, ಅಸೂಯೆ ಎಲ್ಲವೂ ಈಗಲೂ ಹೊಗೆಯಾಡುತ್ತಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಹಾಗೆ ನೋಡಿದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲೂ ನೂರಾರು ಜಾತಿಗಳು, ಮೇಲು-ಕೀಳಿನ ತಾರತಮ್ಯಗಳು ತುಂಬಿಕೊಂಡಿವೆ. ಒಟ್ಟಿನಲ್ಲಿ ಈ ವರ್ಣ, ಜಾತಿ ಆಧಾರಿತ ತಾರತಮ್ಯಗಳು ಈಗ ಹಿಂದೂ ಧರ್ಮ ಎಂದು ಕರೆಯುವ ಧರ್ಮದಲ್ಲಿ ಮುಗಿಯದ ಒಂದು ಯುದ್ಧವೇ ಆಗಿದೆ. ಸಂವಿಧಾನ ರಚಿಸುತ್ತಿದ್ದ ಕಾಲದಲ್ಲಿ ನಿಮ್ನ ವರ್ಗಗಳನ್ನು ಹಿಂದೂಗಳ ಮಧ್ಯದಲ್ಲಿ ಇಡಬೇಕೆ ಬೇಡವೇ ಎನ್ನುವ ಪ್ರಶ್ನೆ ಅಂಬೇಡ್ಕರ್ ಅವರನ್ನು ಕಾಡಿರಬೇಕು. ಆದರೂ ಅವರು ಏನೂ ಮಾಡಲಾಗದ ಪರಿಸ್ಥಿತಿಯಲ್ಲಿ ಶೂದ್ರ ಮತ್ತು ದಲಿತರನ್ನು (ಆರ್ಯರು ಹೊರಗಿಟ್ಟಿದ್ದ) ಹಿಂದೂಗಳೆಂದೇ ಕರೆಯಲಾಯಿತು. ಈಗ ಪ್ರಬಲ ಜಾತಿಗಳು ಮೀಸಲಾತಿಯನ್ನು ಪಡೆದುಕೊಳ್ಳುವುದಕ್ಕೆ, ಇಲ್ಲವೇ ಮೀಸಲಾತಿಯನ್ನು ಸಂಪೂರ್ಣವಾಗಿ ತೆಗೆದುಹಾಕುವುದಕ್ಕೆ ದೊಡ್ಡ ಆಂದೋಲನಗಳನ್ನು ನಡೆಸುತ್ತಿವೆ. ನನ್ನ ವೈಯಕ್ತಿಕ ನಿಲುವಿನಂತೆ ಎಲ್ಲಾ ಜಾತಿಗಳಿಗೂ ದೇಶಾದ್ಯಂತ/ರಾಜ್ಯಗಳ ಅವರವರ ಜನಸಂಖ್ಯೆಗೆ ಅನುಸಾರವಾಗಿ ಮೀಸಲಾತಿಯನ್ನು ಘೋಷಿಸಿಬಿಟ್ಟರೆ ಎಲ್ಲ ಸಮಸ್ಯೆಗಳು ಸರಿಹೋಗಿಬಿಡಬಹುದು? ಆಗ ಯಾರು ಯಾರನ್ನೂ ದೂಷಿಸುವ ಪ್ರಶ್ನೆಯೇ ಇರುವುದಿಲ್ಲ. ಅಂತಹ ವ್ಯವಸ್ಥೆಯನ್ನು ಜಾರಿಗೊಳಿಸಿದರೆ ಬೇರೆ ತರಹದ ಕೆಲವು ಸಮಸ್ಯೆಗಳು ಉದ್ಭವಿಸುವ ಸಾಧ್ಯತೆ ಇರುತ್ತದೆ. ಅವನ್ನೆಲ್ಲಾ ಹೋಗಲಾಡಿಸಲು ಸಮ-ಸಮಾಜದ ನಿರ್ಮಾಣ ತುರ್ತಾಗಿ ಆಗಬೇಕಾಗಿದೆ.

ದೇಶದ ಈಶಾನ್ಯ ರಾಜ್ಯಗಳನ್ನು ಬಿಟ್ಟರೆ, ಇಡೀ ದೇಶದಲ್ಲಿ ಅಸ್ಪೃಶ್ಯತೆಯನ್ನು ಆಚರಿಸದ ಹಳ್ಳಿಯೇ ಇಲ್ಲ. ಅಸ್ಪೃಶ್ಯರನ್ನು ಒಳಕ್ಕೆ ಬರಮಾಡಿಕೊಳ್ಳುವ ದೇವಾಲಯಗಳೂ ದೊರಕುವುದಿಲ್ಲ. ದೇಶದ ಶೇಕಡ 15ರಷ್ಟು ಜನಸಂಖ್ಯೆ ಇರುವ ಅಸ್ಪೃಶ್ಯರು ಕೆಲವು

ಸಾವಿರ ವರ್ಷಗಳಿಂದ ದಂಗೆ ಎದ್ದು ಉಚ್ಚ ಜಾತಿಯ ಜನರ ಮೇಲೆ ತಿರುಗಿ ಬೀಳದೆ, ಪ್ರತ್ಯೇಕ ದೇಶವನ್ನು ಕೇಳದೆ ಸಂಯಮದಿಂದ ಇರುವುದು ಈ ದೇಶ ಇನ್ನೂ ಅಖಂಡವಾಗಿರಲು ಕಾರಣರಾಗಿದ್ದಾರೆ. ಇವರಿಗೆ ಇಷ್ಟು ಸಂಯಮ ಬಹುಶಃ ಬುದ್ಧನಿಂದ ಬಂದಿರಬೇಕು. ಮಹಾ ಮಾನವತಾವಾದಿ ಅಂಬೇಡ್ಕರ್ ದಲಿತರನ್ನು ಬಡಿದೆಬ್ಬಿಸಿದ್ದರೆ ಬಹುಶಃ ದಲಿತರು ಪ್ರತ್ಯೇಕ ದೇಶವನ್ನು ಹೊಂದಿರುತ್ತಿದ್ದರೊ ಏನೊ? ಅವರೂ ಬುದ್ಧನ ಒಂದು ಅಂಶದಂತೆ ಈ ದೇಶ ಒಡೆದುಹೋಗದಂತೆ ನೋಡಿಕೊಂಡರು.

**'ನನ್ನ ಜಾತಿಯ ಬಗ್ಗೆ ಮೇಲರಿಮೆ ಇದೆ.**
**ನನ್ನ ಜಾತಿ ಯಾರನ್ನೂ ಕೊಂದಿಲ್ಲ,**
**ಅವಮಾನಿಸಿಲ್ಲ, ಸುಲಿದಿಲ್ಲ, ತಿಂದಿಲ್ಲ'**

***– ದೇವನೂರ ಮಹಾದೇವ***

* * *

ಕ್ರಿ. ಪೂ. 623 ವರ್ಷಗಳ ಹಿಂದೆ ಅಪಾರ ಮಾನವತಾ ಅವತಾರವೊಂದು ಈ ಭೂಮಿಯ ಮೇಲೆ ಬುದ್ಧನ ರೂಪದಲ್ಲಿ ಅವತರಿಸಿತು. ಆ ಬುದ್ಧ ಮನುಷ್ಯ-ಮನುಷ್ಯರ ನಡುವೆ ನಡೆಯುತ್ತಿದ್ದ ಸಾಮಾಜಿಕ ಅನ್ಯಾಯಗಳನ್ನು ತನ್ನ ನಡತೆಯಿಂದಲೇ ತಿದ್ದಲು ಪ್ರಯತ್ನಿಸಿ ನೋಡಿದ. ಅಪಾರ ಜನಸಮೂಹ ಬುದ್ಧನ ಕಡೆಗೆ ನಡೆಯಲು ಪ್ರಾರಂಭಿಸಿದ್ದನ್ನು ಕಂಡ ಸನಾತನ ಸಮಾಜ ಅವನ ಅನುಯಾಯಿಗಳನ್ನು ಮುಗಿಸಿದ್ದಲ್ಲದೆ ಕಾಲಾಂತರದಲ್ಲಿ ಬೌದ್ಧ ಧರ್ಮವನ್ನು ದೇಶದಿಂದಲೇ ಖಾಲಿ ಮಾಡಿಸಿತು. ಇದರ ನಡುವೆ ಚಾರ್ವಾಕರು, ಲೋಕಾಯತರು ಈ ಅಸಮಾನ ಸಮಾಜಕ್ಕೆ ಬುದ್ಧಿ ಹೇಳಿ ನೋಡಿದರು. ಊಹುಃ ಬದಲಾಗಲಿಲ್ಲ ಅಥವಾ ಬದಲಾಗಲು ಬಿಡಲಿಲ್ಲ. ಹಾಗೇ ಅನೇಕ ಋಷಿಗಳು, ಸಂತರು, ಕವಿಗಳು ಬಂದುಹೋದರು. ಸಮಾಜ ಬದಲಾಗಲೇ ಇಲ್ಲ. ಕರ್ನಾಟಕದಲ್ಲಿ 12ನೇ ಶತಮಾನದಲ್ಲಿ ಬಸವಣ್ಣ ಮಾಡಿದ ಸಾಮಾಜಿಕ ಪರಿವರ್ತನೆಯಿಂದ ಬೆಚ್ಚಿದ ಸನಾತನ ಧರ್ಮ ಬಸವಣ್ಣನನ್ನು ಕೊಚ್ಚಿ ಕೊಲೆ ಮಾಡಿ ಮುಗಿಸಿತು. ಅನಂತರ ಮಹಾದಲಿತ ಜ್ಯೋತಿಬಾ ಫುಲೆ-ಸಾವಿತ್ರಿ ಫುಲೆ ಆಧುನಿಕ ಭಾರತದಲ್ಲಿ ದಲಿತ ಮಕ್ಕಳು ಮತ್ತು ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸದ ಅಡಿಪಾಯ ಹಾಕಿದರು. ಶಾಹು ಮಹಾರಾಜ, ಬರೋಡ ರಾಜ, ರಾಮಕೃಷ್ಣ ಪರಮಹಂಸ, ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ಇನ್ನು ಅನೇಕ ಸಾಮಾಜಿಕ ಹೋರಾಟಗಾರರು ಹುಟ್ಟಿಬಂದು ಸಮಾಜಕ್ಕೆ ಇನ್ನಷ್ಟು ಅರಿವು ಮೂಡಿಸಿದರು.

ಕೊನೆಗೆ 20ನೇ ಶತಮಾನದ ವಸಾಹತು/ವಸಾಹತೋತ್ತರ ಕಾಲಘಟ್ಟಗಳಲ್ಲಿ ಬಂದ ಬಾಬಾಸಾಹೇಬ್ ಅಂಬೇಡ್ಕರರು ಸಾವಿರಾರು ವರ್ಷಗಳಿಂದ ನೊಂದುಬೆಂದು ಬದುಕೇ ಇಲ್ಲದೆ ನೆಲಕ್ಕೆ ಅಂಟಿಕೊಂಡಿದ್ದ ಈ ದೇಶದ ಮೂಲ ಜನರಿಗೆ ಕಿವಿ, ಕಣ್ಣು ಕೊಟ್ಟರು. ಮನು ಎಂಬ ಮಹಾ ಮೋಸಗಾರ, ಮನುಷ್ಯ-ಮನುಷ್ಯರ ಮಧ್ಯ ತೋಡಿದ್ದ ಕಂದಕಗಳನ್ನು ಮುಚ್ಚಿ ಅಧರ್ಮಕ್ಕೆ ಕೊಳ್ಳಿ ಇಟ್ಟು, ಎಲ್ಲರೂ ಸಮಾನ ಎಂಬ ಸಂವಿಧಾನವನ್ನು ಅಂಬೇಡ್ಕರ್ ಈ ದೇಶಕ್ಕೆ ಕೊಟ್ಟು ಹೋಗಿದ್ದಾರೆ. ಅವರು ಹೋಗುವ ಮುಂಚೆ 'ಸಾಮಾಜಿಕ ನ್ಯಾಯದ ರಥವನ್ನು ಇಲ್ಲಿಗೆ ತಂದು ಬಿಟ್ಟಿದ್ದೇನೆ. ನೀವು ಅದನ್ನು ಮುಂದಕ್ಕೆ ಎಳೆದುಕೊಂಡು ಹೋಗಲು ಸಾಧ್ಯವಿಲ್ಲದೆ ಹೋದರೆ ಪರವಾಗಿಲ್ಲ. ಆದರೆ

ಅದನ್ನು ಹಿಂದಕ್ಕೆ ಮಾತ್ರ ತಳ್ಳಬೇಡಿ' ಎಂಬ ಸಂದೇಶವನ್ನು ನೀಡಿದ್ದಾರೆ. ಆದರೆ ಪ್ರಪಂಚ ಕಾಲಕಾಲಕ್ಕೆ ಬದಲಾಗುತ್ತಲೇ ಹೋಗುತ್ತಿದೆ. ಮುಂದೆ ಏನು ಎನ್ನುವ ಪ್ರಶ್ನೆ ಪ್ರತಿಯೊಂದು ಕ್ಷಣವೂ ಕಾಡುತ್ತಿದೆ.

1942ರಲ್ಲಿ ನಾಗಪುರದಲ್ಲಿ ನಡೆದ ಅಖಿಲ ಭಾರತ ದಮನಿತ ವರ್ಗಗಳ ಸಮ್ಮೇಳನದಲ್ಲಿ ಅಂಬೇಡ್ಕರ್ ಮಾಡಿದ ಚಾರಿತ್ರಿಕ ಭಾಷಣದಲ್ಲಿ '...ನಿಮ್ಮ ಉದ್ಧಾರವನ್ನು ನೀವೇ ಮಾಡಿಕೊಳ್ಳಬೇಕು. ಮಹಾಪುರುಷನಿಗಾಗಲೀ, ಪವಾಡ ಪುರುಷನಿಗಾಗಲೀ ಯಾರೂ ಕಾಯಬಾರದು. ನಿಮಗೆ ನಾನು ಹೇಳುವ ಕೊನೆಯ ಮಾತುಗಳೆಂದರೆ ನೀವು ಶಿಕ್ಷಿತರಾಗಬೇಕು. ಸಂಘಟಿತರಾಗಬೇಕು. ಸಂಘರ್ಷ ಮಾಡಬೇಕು. ನಿಮ್ಮಲ್ಲಿ ನಿಮಗೆ ವಿಶ್ವಾಸವಿರಲಿ. ನ್ಯಾಯ ನಮ್ಮ ಪರವಾಗಿ ಇರುವಾಗ ನಮಗೆ ಸೋಲಾಗಲು ಕಾರಣವೇ ಇಲ್ಲ. ಈ ಹೋರಾಟ ಸಂಪೂರ್ಣ ಆಧ್ಯಾತ್ಮಿಕ ಸ್ವರೂಪದ್ದು. ಇದರಲ್ಲಿ ಸಾಮಾಜಿಕವಾಗಿರುವಂಥದ್ದು ಏನೂ ಇಲ್ಲ. ಅಥವಾ ಉಪಭೋಗಿಸುವಂಥದ್ದೂ ಅಲ್ಲ. ಅಂದರೆ ನಮ್ಮ ಪಾಲಿಗೆ ಈ ಹೋರಾಟ ಆಸ್ತಿ ಗಳಿಕೆಗಾಗಲೀ ಅಥವಾ ಅಧಿಕಾರ ಗ್ರಹಣಕ್ಕಾಗಲೀ ಅಲ್ಲ. ಕಳೆದುಕೊಂಡಿರುವ ಮಾನವ ಘನತೆಯನ್ನು ಮತ್ತೆ ಗಳಿಸಿಕೊಳ್ಳಲು ನಡೆಸುತ್ತಿರುವ ಹೋರಾಟವಿದು' ಎಂದರು.

ಇಂದು ಒಂದು ಗುಂಪಿನ ಜನರು (ಜಾತಿ ಭೇದ ಮರೆತು) ಅಂದರೆ ರಾಜಕಾರಣಿಗಳು, ಉನ್ನತ ಅಧಿಕಾರಿಗಳು, ಉದ್ಯಮಿಗಳು, ಹಣವಂತರು, ಸಮಾಜಘಾತಕರು, ಸಿನಿಮಾ-ಕ್ರಿಕೆಟಿಗರು, ಆಸ್ತಿ ಗಳಿಕೆಗೆ ಮತ್ತು ಅಧಿಕಾರ ಗ್ರಹಣಕ್ಕಾಗಿ ಯಾವುದೇ ನೀಚ ಕೆಲಸಕ್ಕೂ ಸಿದ್ಧರಾಗಿ ನಿಂತಿದ್ದಾರೆ. ನೂರಕ್ಕೆ 90 ಭಾಗದ ಜನರ ಇನ್ನೊಂದು ಗುಂಪು ಅನ್ನ-ಬಟ್ಟೆಗಾಗಿ ಇವರ ನಡುವೆ ದಿನನಿತ್ಯವೂ ಜೀವನ್ಮರಣದ ಹೋರಾಟ ನಡೆಸಿದೆ. ದೇಶದ ನ್ಯಾಯಾಲಯಗಳು ಈ ತಾರತಮ್ಯವನ್ನು ಬದಲಿಸಲಾಗದೆ ಸೋತು, ಎಲ್ಲಾ ಕಾನೂನುಗಳು ಉಳ್ಳವರ ಪಾಲಾಗಿವೆ.

ಇನ್ನು ದೀನ ದಲಿತರು, ಯಾವುದೇ ಕಷ್ಟ ಬಂದರೂ ನ್ಯಾಯವಾಗಿ ನಡೆದುಕೊಳ್ಳಬೇಕು ಎನ್ನುವ ಸಂದೇಶವನ್ನು ಸಮಾಜ ನೀಡುತ್ತಲೇ ಬರುತ್ತಿದೆ. ದೇಶದ ಜೈಲುಗಳ ತುಂಬಾ ಹೆಚ್ಚಾಗಿ ಬಡವರನ್ನು, ಅಮಾಯಕರನ್ನೇ ತುಂಬಿಸಿಟ್ಟಿದ್ದಾರೆ. ಇವರ ಬಳಿ ಹಣವಿಲ್ಲದ ಕಾರಣ ಯಾವ ಪ್ಲೀಡರುಗಳು ಇವರ ಪರವಾಗಿ ವಾದಿಸಲು ಬರುತ್ತಿಲ್ಲ. ಇಂಥ ಹೊತ್ತಿನಲ್ಲಿ ಒಡೆದು ಹೋಗಿರುವ ದಲಿತ ಸಂಘರ್ಷ ಸಮಿತಿಗಳು, ಇತರ ಮಾನವ ಕಳಕಳಿಯ ಸಂಘಟನೆಗಳು ಏನು ಮಾಡಬೇಕು? ಇಷ್ಟಕ್ಕೂ ಈ ಹಗಲು ದರೋಡೆ, ವಂಚನೆ, ಮೋಸ ಈ ದೇಶದಲ್ಲಿ ಎಷ್ಟು ದಿನ ಮುಂದುವರಿಯಬಹುದು? ಇಂದಿನ ಬುದ್ಧಿಜೀವಿಗಳ ನಡುವೆ ಈ ಕೃತಿ ಮುಂದಿನ ವಾಗ್ವಾದಗಳಿಗೆ ಹೊಸ ನಾಂದಿ ಹಾಡಬೇಕು ಎನ್ನುವುದೇ ನನ್ನ ಮುಖ್ಯ ಉದ್ದೇಶ. ಕೊನೆಗೆ ಹೇಳುವುದೆಂದರೆ ಯಾವುದೇ ಜಾತಿ, ಜನಾಂಗ, ಧರ್ಮವನ್ನು ನೋಯಿಸುವ ಉದ್ದೇಶವಂತೂ ಖಂಡಿತ ನನಗೆ ಇಲ್ಲ. ಇಲ್ಲಿ ಬರೆದಿರುವ ಎಲ್ಲಾ ವಿಷಯಗಳು ಈಗಾಗಲೇ ಅನೇಕ ಮಹನೀಯರು ಹೇಳಿರುವ ಅಥವಾ ಕೃತಿಗಳಲ್ಲಿ ನಿರೂಪಿಸಿರುವ ವಿಷಯಗಳೇ ಆಗಿವೆ. ನಾನೇನಿದ್ದರೂ ಅದನ್ನೆಲ್ಲ ಒಂದು ಕಡೆ ಸಂಗ್ರಹಿಸಿಕೊಟ್ಟಿದ್ದೇನೆ. ಈ ಕೃತಿಯನ್ನು ಕೊಂಡು ಓದಿದ ನಿಮಗೆ ಧನ್ಯವಾದಗಳು.

# ಗ್ರಂಥಋಣ

1. ಅನ್ವೇಷಣೆ ಪತ್ರಿಕೆ, ಬೆಂಗಳೂರು.
2. ಅಸ್ಪೃಶ್ಯರು, ಡಾ. ಎಂ. ವೆಂಕಟಸ್ವಾಮಿ, ನವಕರ್ನಾಟಕ, ಬೆಂಗಳೂರು.
3. ಅಂಬೇಡ್ಕರ್ ಸ್ಮೃತಿ–ಸಂಸ್ಕೃತಿ, ರಾಹು (ಮೂಲ–ನಾನಕ್‌ಚಂದ್ ರತ್ತು), ಸುಮೇಧ ಪ್ರಕಾಶನ, ಕಲಬುರ್ಗಿ.
4. ಅಸ್ಪೃಶ್ಯರು ಮತ್ತು ಬ್ರಿಟಿಷ್ ಸಾಮ್ರಾಜ್ಯ – ಡಾ॥ ಬಿ. ಆರ್. ಅಂಬೇಡ್ಕರ್, ಸಂಪುಟ–12, ಭಾಗ–1, (1999).
5. ಅಸ್ಪೃಶ್ಯತೆಗಳ ಉಗಮ ಮತ್ತು ವಿಕಾಸ – ಡಾ॥ ಎಚ್.ಎಸ್. ನಂಜುಂಡಸ್ವಾಮಿ, ಪ್ರಕಾಶಕರು: ಹೊರೆಯಾಲ ದೊರೆಸ್ವಾಮಿ, ಬೃಂದಾವನ ಬಡಾವಣೆ, ಮೈಸೂರು.
6. ಅಸ್ಪೃಶ್ಯರು ಅಥವಾ ಭಾರತದ ಕೊಳೆಗೇರಿ (ಘೆಟ್ಟೋ) ಮಕ್ಕಳು ಇತ್ಯಾದಿ – ಡಾ॥ ಅಂಬೇಡ್ಕರ್, ಸಂಪುಟ 5 (1996).
7. ಆರ್ಯರಿಗಾಗಿ ಹುಡುಕಾಟ – ಆರ್. ಎಸ್. ಶರ್ಮ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
8. ಕಣ್ಣೆದುರಿನ ಪ್ರಶ್ನೆಗಳು – ರಾಮ ಮನೋಹರ ಲೋಹಿಯಾ, ಸಂಪುಟ–5, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
9. ಕರ್ನಾಟಕ ದಲಿತ ಸಂಘರ್ಷ ಸಮಿತಿ ಮತ್ತು ಡಾ॥ ಬಿ. ಆರ್. ಅಂಬೇಡ್ಕರ್ – ಗಂಗಾರಾಂ ಚಂಡಾಳ, ಚೈತ್ಯ ಪ್ರಕಾಶನ, ಚಿಕ್ಕ ತಿರುಪತಿ, ಕೋಲಾರ ಜಿಲ್ಲೆ.
10. ಕಾಂಗ್ರೆಸ್ ಮತ್ತು ಗಾಂಧಿ ಅಸ್ಪೃಶ್ಯರಿಗಾಗಿ ಮಾಡಿರುವುದೇನು ಮತ್ತು ಶ್ರೀಯುತ ಗಾಂಧಿ ಮತ್ತು ಅಸ್ಪೃಶ್ಯರ ವಿಮೋಚನೆ – ಡಾ॥ ಅಂಬೇಡ್ಕರ್, ಸಂಪುಟ – 9 (1998).
11. ಖಾಕಿ ಚಡ್ಡಿ ಕೇಸರಿ ಬಾವುಟ –ತಪನ್ ಬಸು ಮತ್ತಿತರರು (ಕನ್ನಡಕ್ಕೆ ಮಂಗ್ಳೂರ ವಿಜಯ), ಓರಿಯಂಟ್ ಲಾಂಗ್‌ಮನ್ ಪ್ರಕಾಶನ, ಬೆಂಗಳೂರು.
12. ಗ್ರಾಮದೇವತೆಗಳು –ಡಾ॥ ಸಿದ್ಧಲಿಂಗಯ್ಯ, ಭಾರತಿ ಪ್ರಕಾಶನ, ಬೆಂಗಳೂರು.
13. ದಲಿತ ಚಳುವಳಿ –ಒಂದು ಅವಲೋಕನ – ಡಾ॥ ವಿ. ಮುನಿವೆಂಕಟಪ್ಪ, ವಿಚಾರವಾದಿ ಪ್ರಕಾಶನ, ಮೈಸೂರು.
14. ದಲಿತ ಚಳುವಳಿ, ಡಾ॥ ಮುನಿವೆಂಕಟಪ್ಪ, ವಿಚಾರವಾದಿ ಪ್ರಕಾಶನ, ಮೈಸೂರು.
15. ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ – ಪಿ. ಕಮಲಾಕ್ಷಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
16. ದೇವರು – ಎ. ಎನ್. ಮೂರ್ತಿರಾವ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.
17. ನಾನೇಕೆ ಹಿಂದೂ ಅಲ್ಲ – ಕಾಂಚ ಐಲಯ್ಯ (ಕನ್ನಡಕ್ಕೆ : ಮಂಗ್ಳೂರ ವಿಜಯ) ಓಕೆಬಿಕೆ, ಬೆಂಗಳೂರು.

18. ನಾಗಾಲೋಕ –ಎಂ. ಗೋಪಿನಾಥ್, ದಲಿತ ಸಾಹಿತ್ಯ ಸಂಘಟನೆ, ಬೆಂಗಳೂರು.
19. ಪಂಚಮ ಪತ್ರಿಕೆಗಳು –ಬೆಂಗಳೂರು, ಮೈಸೂರು.
20. ಪ್ರಾಚೀನ ಭಾರತದಲ್ಲಿ ಶೂದ್ರರು – ಆರ್. ಎಸ್. ಶರ್ಮ, ನವಕರ್ನಾಟಕ, ಬೆಂಗಳೂರು.
21. ಪೆರಿಯಾರ್ ವಿಚಾರಧಾರೆ – ಪೆರಿಯಾರ್ (ಕನ್ನಡಕ್ಕೆ : ವೇಮಣ್ಣ), ಚಿಂತಕರ ಚಾವಡಿ, ಬಳೇಪೇಟೆ, ಬೆಂಗಳೂರು.
22. ಬಹಿಷ್ಕೃತ ಭಾರತದಲ್ಲಿನ ಸ್ಫುಟ ಲೇಖನಗಳು –ಡಾ॥ ಅಂಬೇಡ್ಕರ್ (ಕನ್ನಡಕ್ಕೆ : ಡಾ॥ ದತ್ತಾತ್ರೇಯ ಪೂಜಾರಿ ಮತ್ತು ಡಾ॥ ಗೀತಾ ಪೂಜಾರಿ), ಸಾಗರ ದ್ವೀಪ ಪ್ರಕಾಶನ, ಕಾರವಾರ.
23. ಭಗವಾನ್ ಬುದ್ಧ – ಧರ್ಮಾನಂದ ಕೋಸಾಂಬಿ (ಕನ್ನಡಕ್ಕೆ : ಆದ್ಯ ರಂಗಾಚಾರ್ಯ), ಸಾಹಿತ್ಯ ಅಕಾಡೆಮಿ, ದೆಹಲಿ.
24. ಭಾರತೀಯ ಶಾಸನಬದ್ಧ ಆಯೋಗಕ್ಕೆ ಬಹಿಷ್ಕೃತ ಹಿತಕಾರಣೀ ಸಭೆಯ ಮುಂಬಯಿ ನಿಮ್ನ ವರ್ಗದವರ ಪರವಾಗಿ – ಡಾ॥ ಅಂಬೇಡ್ಕರ್, ಸಂಪುಟ–2, ಭಾಗ–2 (1993).
25. ಭಾರತದಲ್ಲಿ ಜಾತಿಗಳು, ಜಾತಿಯ ನಿರ್ಮೂಲನೆ ಇತ್ಯಾದಿ – ಡಾ॥ ಅಂಬೇಡ್ಕರ್ ಸಂಪುಟ–1 (1990).
26. ಭಾರತಕ್ಕೆ ಆರ್ಯರ ಪ್ರವೇಶ – ಆರ್. ಕೆ. ಶರ್ಮ (1998), ಕನ್ನಡಕ್ಕೆ : ಎಸ್. ಗುರುದತ್, ನವಕರ್ನಾಟಕ ಪ್ರಕಾಶನ, ಬೆಂಗಳೂರು.
27. ಮತಾಂತರ ಮತ್ತು ಇತರ ಲೇಖನಗಳು – ಡಾ॥ ವಿ. ಮುನಿವೆಂಕಟಪ್ಪ, ವಿಚಾರವಾದಿ ಪ್ರಕಾಶನ, ಮೈಸೂರು.
28. ಮಾರ್ಕ್ಸಿಕ್ ಸಂಸ್ಕೃತಿ – ಲಕ್ಷ್ಮೀಪತಿ ಕೋಲಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
29. ಮಾನವ ಕುಲದ ಏಕತೆ –ರಾಮ ಮನೋಹರ ಲೋಹಿಯಾ ಬರಹಗಳು, ಸಂಪುಟ 4, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
30. ಮುಂಬಯಿ ವಿಧಾನ ಪರಿಷತ್ತಿನಲ್ಲಿ, ಸೈಮನ್ ಕಮಿಷನ್‌ನೊಂದಿಗೆ – ಡಾ॥ ಅಂಬೇಡ್ಕರ್, ಸಂಪುಟ–2, ಭಾಗ–1 (1998).
31. ಯಾರು ಶೂದ್ರರಾಗಿದ್ದರು? ಅಸ್ಪೃಶ್ಯರು ಯಾರು ಮತ್ತು ಏಕೆ ಅಸ್ಪೃಶ್ಯರಾದರು – ಡಾ॥ ಅಂಬೇಡ್ಕರ್, ಸಂಪುಟ–7, (1998).
32. ರಾಮನಿಗೆ ಸೀತೆ ಏನಾಗಬೇಕು? –ಆರುದ್ರ (ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್) ನವಕರ್ನಾಟಕ ಪ್ರಕಾಶನ, ಬೆಂಗಳೂರು.
33. ವೇದಗಳಲ್ಲಿ ಏನಿದೆ? – ಕೊಡವಟಿಗಂಟಿ ಕುಟುಂಬರಾವ್ (ಕನ್ನಡಕ್ಕೆ : ಎಸ್. ಪಾರ್ವತಿ) ಬೆಳ್ಳಿಚುಕ್ಕಿ ಪ್ರಕಾಶನ, ಬೆಂಗಳೂರು.
34. ಶುದ್ಧೀಕರಣ ಮತ್ತು ಮಲಿನ ಮನಸ್ಸು –ನಟರಾಜ್ ಹುಳಿಯಾರ್, ಲಂಕೇಶ್ ಪತ್ರಿಕೆ, ಬೆಂಗಳೂರು.

35. ಸಂಘರ್ಷ: ಅಂಬೇಡ್ಕರ್ ಜೀವನ ಸಾಧನೆ, (ಮೂಲ – ಧನಂಜಯ್ ಕೀರ), ಮಂಗ್ಳೂರ ವಿಜಯ, ಸಂಬುದ್ಧ ಪ್ರಕಾಶನ, ಬೆಂಗಳೂರು.
36. ಸಿಂದ್ ಮಾದಿಗರ ಸಂಸ್ಕೃತಿ – ಕೋಟಿಗಾನಹಳ್ಳಿ ರಾಮಯ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
37. ಸ್ತ್ರೀ ವಿಮೋಚನಾ ಹೋರಾಟಗಳು – ಮಂಗಲಾ ಕಾಳೆ, ಅನಾರ್ಯ ಪ್ರಕಾಶನ, ಧಾರವಾಡ.
38. ಸ್ವಾತಂತ್ರ್ಯ ಅಂತರ್ಜಲ – ರಾಮ ಮನೋಹರ ಲೋಹಿಯಾ (1998).
39. ಹಿಂದೂ ಧರ್ಮ ಏನು ಹೇಳಿದೆ? – ಮಹಾತ್ಮ ಗಾಂಧಿ, ಎನ್.ಬಿ.ಟಿ. ನವದೆಹಲಿ.
40. ಹಿಂದೂ ಧರ್ಮದ ಒಗಟುಗಳು – ಡಾ|| ಅಂಬೇಡ್ಕರ್, ಸಂಪುಟ –4 (1995).
41. ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಬರಹಗಳು ಮತ್ತು ಭಾಷಣಗಳು, ಸರಣಿಯ ಪ್ರಕಾಶಕರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
42. Buddhism - The Marxist Approach - Rahul Sankrithyayana, Peoples's Publishing House, New Delhi (1973).
43. Dalit Christians - A Socio-Economic Survey - Ambrose Pinto S.J., Bangalore.
44. Of Divine Bondage - Eva Bell, Deccan Herald.
45. Untouchability among non Hindus - Hastings Encyclopedia of Religion and Ethics Vol.X.
46. The Discovery of India - Jawaharalal Nehru, New Delhi (1981).
47. The Flaming Feet and other essays - Dr. D.R. Nagaraj, Seagull Books (2010).
48. The Caste System - Ram Manohar Lohia, Samata Navahind, Hyderabad (1964).
49. Who Were The Shudras - Dr. Ambedkar, Vol. IV. Education dept., Maharashtra Govt., Bombay.
50. Who Were Untouchables - Dr. Ambedkar, Vol. IV, Education dept., Maharashtra Govt., Bombay.

## ಜಾತಿ ಅಸ್ಪೃಶ್ಯತೆಯ ಸಂಘರ್ಷ

ಸಮಾನತೆಯ ಜಾಗದಲ್ಲಿ ಅಸಮಾನತೆ ಸ್ಥಾಪಿತವಾಗುವುದು ಎಲ್ಲ ಬುಡಕಟ್ಟುಗಳ ವಿಘಟನೆಯ ಸಂದರ್ಭದಲ್ಲೂ ಉಂಟು. ಆರ್ಥಿಕ ಅಸಮಾನತೆಯಿಂದ ರೂಢಿಗೆ ಬರುವ ಸಾಮಾಜಿಕ ಅಸಮಾನತೆಯ ಘೋರ ಪರಿಣಾಮ ಎಲ್ಲ ದೇಶಗಳಲ್ಲೂ ಕಂಡುಬಂದಿದೆ. ಉದಾಹರಣೆಗೆ, ಪ್ರಾಚೀನ ಗ್ರೀಸ್ ಮತ್ತು ರೋಮ್ ಇತಿಹಾಸದಲ್ಲಿ ಗುಲಾಮಿ ಪದ್ಧತಿಯು ಅಸ್ತಿತ್ವಕ್ಕೆ ಬಂದಿತ್ತು. ಗುಲಾಮರನ್ನು ಆ ಸಮಾಜಗಳು ಅಸ್ಪೃಶ್ಯರೆಂದು ಪರಿಗಣಿಸಲಿಲ್ಲ. ನಮ್ಮ ದೇಶದ ಕ್ರೌರ್ಯವು ಸಮಾಜದ ಒಂದು ವಿಭಾಗವನ್ನು ಕೇವಲ ಭೀಕರ ಶೋಷಣೆಗೆ ಗುರಿಮಾಡಲಿಲ್ಲ, ಆ ವಿಭಾಗವನ್ನು ಅಮಾನುಷವಾಗಿ ಹಿಂಸಿಸಿತು ಮತ್ತು ದೈಹಿಕವಾಗಿ ಅಸ್ಪೃಶ್ಯರನ್ನಾಗಿಸಿತು. ಇಂತಹ ಸಾಮಾಜಿಕ ಪಿಡುಗೊಂದು ಯಾವ ದೇಶದಲ್ಲೂ ಮೂರು ಸಾವಿರ ವರ್ಷಗಳ ಕಾಲ ನಿರಂತರವಾಗಿ ಬಾಧೆಯುಂಟುಮಾಡಿರುವ ದೃಷ್ಟಾಂತವಿಲ್ಲ. ಅದು ನಮ್ಮ ದೇಶದ ಅಸಹ್ಯ ಅನನ್ಯತೆಯಾಗಿ ಉಳಿದಿದೆ. ಮಾನಸಿಕವಾಗಿ ಇಡೀ ಸಮಾಜವು ಅಂತಹ ದೌರ್ಜನ್ಯವನ್ನು ಸಾರಾಸಗಟಾಗಿ ಸ್ವೀಕರಿಸಿದ್ದಿರಲಾರದು.

**– ಡಾ॥ ಜಿ. ರಾಮಕೃಷ್ಣ ಅವರ ಮುನ್ನುಡಿಯಿಂದ**

* * *



ಈ ಕೃತಿಯನ್ನು ರಚಿಸಿರುವ ಡಾ॥ ಎಂ. ವೆಂಕಟಸ್ವಾಮಿ ಭೂವಿಜ್ಞಾನಿ ಮತ್ತು ಲೇಖಕ. ಇವರ ಹಲವು ಲೇಖನಗಳು, ಕಥೆಗಳು ಮತ್ತು ಕವಿತೆಗಳು ಪ್ರಕಟವಾಗಿವೆ. ಇವರು ರಚಿಸಿರುವ 'ಅಸ್ಪೃಶ್ಯರು, ಒಂದು ಪರಿಶೀಲನೆ', 'ಏಳು ಪರ್ವತಗಳು ಒಂದು ನದಿ' ಮತ್ತು ಸಹಲೇಖಕರಾಗಿ ಅನುವಾದಿಸಿರುವ 'ಈಶಾನ್ಯ ಭಾರತದ ಆಧುನಿಕ ಮತ್ತು ಐತಿಹ್ಯ ಕಥೆಗಳು' ಎಂಬ ಕೃತಿಗಳು ನವಕರ್ನಾಟಕದಿಂದ ಪ್ರಕಟವಾಗಿವೆ.

ISBN 93-86809-52-4





Code : 003454

₹ 225